

ಕೋಮು ಸೌಹಾರ್ದತೆ



ಗೊಬ್ಬರ-ಹಸಿರು

# ಒಂದು ಸೆರೆಮನೆಯ ಪಳೆಯುಳಿಕೆಗಳು

(ವಿಮರ್ಶಾ ಲೇಖನ : ಪುಟ ೩೫-೩೬)

ಛಾಯಾಚಿತ್ರಕಾರರ ವಿಳಾಸ : ರಾಘವ ಶ್ರೇಯಸ್
೪, ೭ ನೇ ಕ್ರಾಸ್, ಅಶೋಕ ನಗರ, ಬನಶಂಕರಿ ಒಂದನೇ ಹಂತ
ಬೆಂಗಳೂರು - ೫೬೦ ೦೫೦



ಧ್ವಜಸ್ತಂಭ



ಸರ್ವ ಸರಕು ಭಂಡಾರ

ಅಲ್-ಮಸ್ಜಿದ್-ಹಸಿರು ಹಜಾರ, ಕೊನೆಯಲ್ಲಿ ಪೀಠ





ನಿಸರ್ಗದ ವಸಾಹತು

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಕೆದಿಲಾಯ, ಮೋನಪ್ಪ, ಶ್ರೀಹರಿ, ರಾಂಚಂದ್ರ ಕೊಪ್ಪಲು, ಬಿ. ಎಂ. ಬೊಮ್ನಳ್ಳಿ, ಎಸ್. ಆರ್. ಬೊಮ್ನಳ್ಳಿ

ಮುಖಪುಟದ ಛಾಯಾಚಿತ್ರ : ರಾಘವ ಶ್ರೇಯಸ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ ದೇಶವು ಸ್ವಾತಂತ್ರ್ಯ ಪಡೆದು ಅರವತ್ತು ವರ್ಷಗಳು ಕಳೆದಿವೆ. ಅಷ್ಟು ವರ್ಷಗಳಲ್ಲಿ ಸಾಧಿಸಬಹುದಾಗಿದ್ದಷ್ಟನ್ನು ನಾವು ಸಾಧಿಸಿಲ್ಲ. ಇಂತಿಂಥವು ಆಗಲೇಬೇಕೆಂಬ ರಾಜಕೀಯ ಗಟ್ಟಿತನದ ಮನಸ್ಸು ಮತ್ತು ಪ್ರಜ್ಞೆ ಇದ್ದಿದ್ದರೆ ಪರಿಸ್ಥಿತಿ ಬೇರೆ ಇರುತ್ತಿತ್ತು. ನಮ್ಮ ರಾಜಕೀಯ ಸ್ವಾತಂತ್ರ್ಯವು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ವಾತಂತ್ರ್ಯಗಳ ವಿಕಾಸಕ್ಕೆ ಹಾದಿ ಮಾಡಿಕೊಟ್ಟಿಲ್ಲದಿರುವುದು ಒಂದು ದೊಡ್ಡ ಲೋಪ ಮತ್ತು ಸೋಲು. ಅದನ್ನು ಹಿಮ್ಮೆಟ್ಟಿಸುವ ದಿಟ್ಟತನದ ಬದಲು ಸಾಮ್ರಾಜ್ಯಶಾಹಿಗೆ ಶರಣಾಗುವ ದ್ರೋಹವು ಸರ್ಕಾರದ ಅಪಸಾಧನೆಯಾಗುತ್ತಿದೆ. ಜನರ ನಿಜವಾದ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಜನಮನ್ನಣೆ ಪಡೆಯುವ ನೇರ ಸಾಚಾ ಮಾರ್ಗವು ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳಿಗೆ ರುಚಿಸುವುದಿಲ್ಲ. ಏಕೆಂದರೆ, ಅದು ಕಷ್ಟವಾದ ಹಾದಿ ಮತ್ತು ತಕ್ಷಣದ ಫಲ ನೀಡುವುದಿಲ್ಲ. ಆದ್ದರಿಂದ ಜನರನ್ನು ಭಾವೋದ್ರೇಕಗಳಿಗೆ ಈಡುಮಾಡಿ ಅಧಿಕಾರ ಪಡೆಯುವುದು ಅವಕ್ಕೆ ಒಗ್ಗಿಹೋಗಿದೆ. ಮತೀಯ ರಾಜಕಾರಣವು ಇದರ ಒಂದು ಪರಿಣಾಮ. ರೈತರ ಗುಣಗಾನ ಮಾಡುತ್ತಲೇ ಅವರಿಗೆ ನೆಲೆಯಿಲ್ಲದಂತೆ ಮಾಡುವುದು ಇನ್ನೊಂದು ಪರಿಣಾಮ. ಪ್ರಧಾನ ಮಂತ್ರಿಗಳು ಸ್ವಾತಂತ್ರ್ಯ ಸಮಾರಂಭದ ಸಾರ್ವಜನಿಕ ಭಾಷಣದಲ್ಲಿ ಮಾಡಿರುವುದೂ ಅದೇ. ಅವರು ಹೇಳಿದ ಮಾತುಗಳಿವು: ''ರೈತರು ನಮ್ಮ ದೇಶದ ಬೆನ್ನೆಲುಬು. ಅವರ ಪ್ರಗತಿ ಇಲ್ಲದೆ ದೇಶದ ಅಭಿವೃದ್ಧಿ ಸಾಧ್ಯವಿಲ್ಲ. ನಮ್ಮೆಲ್ಲ ಆಶಯಗಳು ಮೂಲತಃ ಅವರ ಏಳಿಗೆಗೆ ಸಂಬಂಧಿಸಿದವು ಎಂಬ ಆಶ್ವಾಸನೆಯನ್ನು ನಾನು ನೀಡುತ್ತೇನೆ.'' ವಿಶೇಷ ಆರ್ಥಿಕ ವಲಯ, ವಿಮಾನ ನಿಲ್ದಾಣಗಳು, ನಗರ ವಿಸ್ತರಣೆ, ಶ್ರೀಮಂತರ ಮೋಜಿಗಾಗಿ ಟೌನ್‌ಶಿಪ್‌ಗಳು, ಇವೆಲ್ಲಾ ಭೂಮಿಯನ್ನು ರೈತರಿಂದ ಕಸಿದುಕೊಳ್ಳುವ ಯೋಜನೆಗಳು. ಅವರನ್ನು ಭೂಮಿಯಿಂದ ಹೊರಹಾಕಿ ಯಾವ ಏಳಿಗೆಯನ್ನು ಅವರಿಗೆ ಬಳುವಳಿ ಕೊಡುತ್ತೇವೆ ? ಬಹುಶಃ ನಂದಗುಡಿಯ ರೈತರು, ತಮಿಳುನಾಡಿನ ರೈತರು, ಅದಕ್ಕೆ ಉತ್ತರ ಕೊಡುತ್ತಾರೆ. ಇನ್ನೊಂದೆಡೆ, ಈಗಿರುವ ವಿಜ್ಞಾನ ಮಂದಿರಗಳನ್ನು ಹಾಗೂ ತಂತ್ರಜ್ಞಾನದ ಉನ್ನತ ಸಂಸ್ಥೆಗಳನ್ನು ಹಿಗ್ಗಿಸಲು ಪ್ರಧಾನಿ ಉದ್ದೇಶಿಸಿದ್ದಾರೆ. ಆಡಳಿತ ನಿರ್ವಹಣೆಯನ್ನು ಕಲಿಸುವ ಹಾಗೂ ಮಾಹಿತಿ ತಂತ್ರಜ್ಞಾನವನ್ನು ಬೋಧಿಸುವ ಸಂಸ್ಥೆಗಳ ಹೆಚ್ಚಳವೂ ಅವರ ದೃಷ್ಟಿಯಲ್ಲಿದೆ. ಈ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವವರು ಯಾರೆಂಬುದು ಎಲ್ಲರಿಗೂ ತಿಳಿದಿದೆ. ಸಾಮಾನ್ಯರಿಗೆ ಅರ್ಹತೆ ಸಾಲದೆಂಬುದು ಕೆಲವು ''ವಿದ್ಯಾವಂತ''ರ ತಕರಾರು. ಮೀಸಲಾತಿ ಕೂಡದೆಂದು ಕೂಗೂ ಇದೆ. ಆ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ತೀರ್ಪು ಇನ್ನೂ ಬಂದಿಲ್ಲ. ಹೀಗಿರುವಾಗ ಆ ಸಂಸ್ಥೆಗಳನ್ನು ಹೆಚ್ಚಿಸಲು ಸಾರ್ವಜನಿಕ ಹಣವನ್ನು ತೊಡಗಿಸಬಾರದು. ಎಲ್ಲೆಲ್ಲೂ ಖಾಸಗಿತನದ ಮೆರವಣಿಗೆ ಮಾಡಿಸುವ ಪರಿಣತರು ಈ ಸಂಸ್ಥೆಗಳ ಪ್ರಶ್ನೆ ಬಂದಾಗ ಸರ್ಕಾರಕ್ಕೆ ದುಂಬಾಲು ಬೀಳುವುದು ಕಪಟತನ, ಮೋಸ. ನ್ಯಾಯಾಲಯದ ತೀರ್ಪು ಬರುವ ತನಕ ಈ ದಿಕ್ಕಿನಲ್ಲಿ ಪ್ರಧಾನಿಯವರು ಮುಂದುವರಿಯಕೂಡದೆಂದು ಆಗ್ರಹಿಸಬೇಕಾಗಿದೆ.

ಈ ಸಂದರ್ಭದಲ್ಲಿ ಇನ್ನೊಂದು ವಿಷಯ ಗಮನಿಸಬೇಕು : ವಿಶ್ವ ಬ್ಯಾಂಕ್ ಹಿನ್ನೆಲೆಯ ಅಹ್ಲುವಾಲಿಯ ನೇತೃತ್ವದ ಯೋಜನಾ ಆಯೋಗ ಮತ್ತು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯಗಳ ನಡುವೆ ತಿಕ್ಕಾಟ ನಡೆಯುತ್ತಿದೆ. ಉನ್ನತಮಟ್ಟದ ಜ್ಞಾನದ್ವೀಪಗಳೆಂದು ಕರೆಯಬಹುದಾದ ಮೂವತ್ತು ಹೊಸ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಬೇಕೆಂಬುದು ಯೋಜನಾ ಆಯೋಗದ ಪ್ರಸ್ತಾವ. ಅದನ್ನು ಅರ್ಜುನ್ ಸಿಂಗ್ ವಿರೋಧಿಸಿದ್ದಾರೆ. ಇರುವ ವಿಶ್ವವಿದ್ಯಾನಿಲಯಗಳನ್ನು ಉತ್ತಮಪಡಿಸಲು ಹಣ ತೊಡಗಿಸಿ ಸಾಮಾನ್ಯ ವಿದ್ಯಾರ್ಥಿಗಳ ಕಲಿಕೆಯ ಮಟ್ಟ ಹೆಚ್ಚಿಸಬೇಕೆಂಬುದು ಅವರ ಸಲಹೆ. ಆದರೆ ಅಹ್ಲುವಾಲಿಯರಂತೆ ವಿಶ್ವ ಬ್ಯಾಂಕ್ ಹಿನ್ನೆಲೆಯುಳ್ಳ ಪ್ರಧಾನಿ ಮನಮೋಹನ ಸಿಂಗ್ ಸಹ ದ್ವೀಪಗಳಿಂದ ಆಕರ್ಷಿತರಾಗಿದ್ದಾರೆ. ಇರುವ ವಿದ್ಯಾಸಂಸ್ಥೆಗಳು ಹಾಳಾಗಲಿ, ಮುಚ್ಚಿ ಹೋಗಲಿ; ಹೊಸ ಶ್ರೇಷ್ಠ ಸಂಸ್ಥೆಗಳನ್ನು ಹುಟ್ಟುಹಾಕಿದರೆ ಸಾಕು, ಎನ್ನುವ ದೃಷ್ಟಿಯು ಜನಪರವಾದುದಲ್ಲ. ಅದು ಉಚ್ಚ ವರ್ಗದವರ ಪರವಾದ ತೀರ್ಮಾನ. ಕೇಂದ್ರ ಸರ್ಕಾರದ ನೀತಿಗಳು ಈ ವರ್ಗವನ್ನು ಕೊಬ್ಬಿಸಿ ಬೆಳೆಸುವ ದಿಕ್ಕಿನಲ್ಲಿವೆ. ನಮ್ಮ ಸ್ವಾತಂತ್ರ್ಯದ ಅರವತ್ತನೆಯ ವರ್ಷದಲ್ಲಿ ಇಂತಹ ವಿಪರ್ಯಾಸಗಳು ಏರ್ಪಡುತ್ತಿರುವುದು ಆರೋಗ್ಯಕರವಲ್ಲ. ಪ್ರಜಾಪ್ರಭುತ್ವದ ಮೌಲ್ಯಗಳನ್ನು ಗಾಳಿಗೆ ತೂರಿ ಇಂದಿನ ಆಳುವ ವರ್ಗದ ಹಿತವೊಂದನ್ನೇ ದೃಷ್ಟಿಯಲ್ಲಿರಿಸಿಕೊಳ್ಳುವುದು ಖಂಡನಾರ್ಹವಾಗಿದೆ.

* * *

ವಿಶೇಷ ಆರ್ಥಿಕ ವಲಯಗಳ ಪ್ರಶ್ನೆ ಬೃಹದಾಕಾರ ತಾಳುತ್ತಿರುವ ಇಂದಿನ ದಿನಗಳಲ್ಲಿ ಯಾರೋ ಮಹಾತ್ಮರೊಬ್ಬರು ಭೂಸುಧಾರಣೆಗಳನ್ನು ವಿರೋಧಿಸಿದ್ದಾರೆ. ಅವರು

೮ನೇ ಪುಟಕ್ಕೆ




ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೯ ಸಂಚಿಕೆ-೨ ಸೆಪ್ಟೆಂಬರ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**





**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks,com**


ಸಂಪಾದಕೀಯ

## ಎಡ ಪಕ್ಷಗಳ ಜವಾಬ್ದಾರಿಯುತ ನಿಲುವು

ನಮ್ಮ ದೇಶವು ಗುರುತರವಾದ ಪ್ರಶ್ನೆಯೊಂದನ್ನು ಎದುರಿಸಬೇಕಾಗಿದೆ. ಅಮೆರಿಕಾದ ತೆಕ್ಕೆಗೆ ಬಿದ್ದು ನಮ್ಮ ಭವಿಷ್ಯದ ನೀತಿಗಳನ್ನು ರೂಪಾಂತರಿಸಲು ಆ ದೇಶದ ರಾಜಕೀಯ ನಾಯಕರಿಗೆ ಬಿಟ್ಟುಕೊಡುತ್ತೇವೋ ಅಥವಾ ಎಷ್ಟೇ ಕಷ್ಟಗಳನ್ನು ಸಹಿಸಬೇಕಾಗಿ ಬಂದರೂ ಕುಗ್ಗದೆ ನಮ್ಮ ರಾಜಕೀಯವನ್ನು ನಾವೇ ನಿರ್ಧರಿಸಿಕೊಳ್ಳುತ್ತೇವೋ ಎಂಬುದು ಆ ಪ್ರಶ್ನೆ. ಇದೇ ಪ್ರಶ್ನೆಯು ಕಳೆದ ಐವತ್ತು ವರ್ಷಗಳಲ್ಲಿ ಹಲವು ಬಾರಿ ನಮ್ಮ ಮುಂದೆ ಬಂದಿದೆ ಮತ್ತು ಅದಕ್ಕೆ ದಿಟ್ಟ ಉತ್ತರವನ್ನು ಕೊಟ್ಟುಕೊಂಡಿದ್ದೇವೆ. ಆದರೆ ಈಗಿನ ಪ್ರಶ್ನೆಯು ಅತ್ಯಂತ ಸಂದಿಗ್ಧವಾದ್ದು ಮತ್ತು ದೇಶದ ದಿಕ್ಕನ್ನು ಬಹಳ ಪ್ರಖರವಾಗಿ ಬದಲಾಯಿಸಬಹುದಾದ್ದು. ಭಾರತವು ಇಂತಹ ಸನ್ನಿವೇಶವನ್ನು ನಿಭಾಯಿಸಲು ಎಷ್ಟು ಪರಿಣಾಮಕಾರಿಯಾಗಿ ಸಾಮರ್ಥ್ಯ ತೋರುತ್ತದೆಂಬುದನ್ನು ಇಡೀ ವಿಶ್ವವು ಕುತೂಹಲದಿಂದ ಗಮನಿಸುತ್ತಿದೆ. ವಿಶೇಷತಃ ಅಮೆರಿಕಾಕ್ಕೆ ಇದು ಮಹತ್ವದ ಕಾಲಘಟ್ಟ; ಬುಟ್ಟಿ ತುಂಬಿಸಿಕೊಳ್ಳುವ ಕಾತುರತೆ ಸ್ಪಷ್ಟವಾಗಿ ಗೋಚರಿಸುತ್ತಿದೆ.

ಈಗಿನ ಸಂದರ್ಭವು ಅಣುಶಕ್ತಿ ಸ್ಥಾವರಗಳನ್ನು ವೃದ್ಧಿಪಡಿಸಿಕೊಳ್ಳುವ ವಿಚಾರದಲ್ಲಿ ಉದ್ಭವಿಸಿದೆ. ಆದರೆ ಅದಷ್ಟೇ ಸಂಪೂರ್ಣ ಸಂಗತಿಯಲ್ಲ. ಅಲಿಪ್ತ ನೀತಿಯ ಪ್ರತಿಪಾದನೆಯಿಂದ ಒಂದು ದೊಡ್ಡ ಬಣವನ್ನು ರಚಿಸಲು ಮುಂದಾಳತ್ವ ನೀಡಿದ್ದ ಭಾರತವು ಈಗ ಅಮೆರಿಕಾದ ಮಿತ್ರರಾಷ್ಟ್ರವೆಂಬ ಪಟ್ಟ ಕಟ್ಟಿಕೊಳ್ಳುವ ಅವಕಾಶವಿದೆ. ಬೀಸಿರುವ ಬಲೆ ನಿರರ್ಥಕವಾಗಬಹುದೇ ಎಂಬುದು ವಾಷಿಂಗ್‌ಟನ್ನಿನ ತೆರೆಮರೆಗಳಲ್ಲಿ ವಿಪುಲವಾಗಿ ಚರ್ಚೆಗೆ ಗ್ರಾಸವಾಗಿದೆ. ಅಣುಶಕ್ತಿ ಸ್ಥಾವರಗಳ ಮೇಲೆ ನಿಗಾ ಇಡಲು ಹಾಗೂ ಅಣುಶಕ್ತಿ ಬೆಳವಣಿಗೆಗಳನ್ನು ಪರಿಶೀಲಿಸುತ್ತಿರಲು ಅಂತರರಾಷ್ಟ್ರೀಯ ಸಂಸ್ಥೆಯೊಂದಿದೆ. ಅದರ ಮಿತಿಯನ್ನು ಮೀರದೆ ಮತ್ತು ಅಮೆರಿಕಾ ವಿಧಿಸುವ ನಿರ್ದೇಶಕ ತತ್ತ್ವಗಳನ್ನು, ನಿರ್ಬಂಧಗಳನ್ನು, ಒಪ್ಪಂದದ ದ್ವಿಪಕ್ಷೀಯ ಅರ್ಥೈಸುವಿಕೆಯನ್ನು ಮೀರದೆ ನಾವು ಪರಮಾಣು ಶಕ್ತಿಯಿಂದ ಅಪಾರ ವಿದ್ಯುತ್ತನ್ನು ಉತ್ಪಾದಿಸುವುದರಲ್ಲಿ ಯಶಸ್ಸು ಗಳಿಸುತ್ತೇವೆಯೆ? ಇಷ್ಟೆಲ್ಲಾ ಜಂಜಾಟಗಳ ನಡುವೆಯೂ ವಿದ್ಯುದುತ್ಪಾದನೆಗೆ ಅದು ಅನಿವಾರ್ಯವಾದ ಹಾದಿಯೆ? ಅಂತರರಾಷ್ಟ್ರೀಯ ರಾಜಕೀಯ ಸೂಕ್ಷ್ಮಗಳ ಹಿನ್ನೆಲೆಯಲ್ಲಿ ಇದನ್ನೆಲ್ಲಾ ಪರಿಶೀಲಿಸುವ ಅಗತ್ಯವಿದೆ.

ನಮ್ಮ ದೇಶದ ಡೋಲಾಯಮಾನ ಸ್ವಭಾವವು ಬಹಿರಂಗವಾಗಿ ವ್ಯಕ್ತವಾದ್ದು ಅಂತರರಾಷ್ಟ್ರೀಯ ಅಣುಶಕ್ತಿ ಸಂಸ್ಥೆಯಲ್ಲಿ ಇರಾನಿನ ವಿರುದ್ಧವಾಗಿ ಅಮೆರಿಕಾದೊಂದಿಗೆ ಮತ ಚಲಾಯಿಸಿದಾಗ. ಹೊಸದೊಂದು ಅಪಾಯಕಾರಿ ಹಾದಿಯನ್ನು ತುಳಿಯಲು ಮನಮೋಹನ ಸಿಂಗ್ ಸರ್ಕಾರ ನಿರ್ಧರಿಸಿತ್ತೆಂಬುದು ಆಗ ಸ್ಪಷ್ಟವಾಯಿತು. ನಮ್ಮ ವಿದೇಶಾಂಗ ನೀತಿಯಲ್ಲಿ ಕರಾಳವಾದ ತಿರುವು ಅಂದೇ ಆರಂಭವಾಯಿತು ಮತ್ತು ಅಮೆರಿಕಾವನ್ನು ತಣಿಸುವ ಕ್ರಮ ಜಾರಿಗೆ ಬಂದಿತು. ಅದು ಕೇವಲ ಒಂದು ಸಾಂದರ್ಭಿಕ ತೀರ್ಮಾನವೆಂದು ಅಂದು ನಿರಾಳವಾಗಿ ಉಳಿದವರಿಗೆ ಇಂದು ಧುತ್ತನೆ ಅಗಾಧವಾದ ಸಮಸ್ಯೆ ಬಾಧಿಸುತ್ತಿದೆ. ಸಮಸ್ಯೆಯ ವ್ಯಾಪ್ತಿಯನ್ನು ಗ್ರಹಿಸಲು ಕೆಲವು ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕು: (ಅ) ಪರಮಾಣು ಬಾಂಬನ್ನು ನಮ್ಮ ದೇಶವು ಮಾಡಬೇಕಾಗಿಲ್ಲ, ಏಕೆಂದರೆ ಅದು ನಾವು ನಿರೀಕ್ಷಿಸುವ ರಕ್ಷಣೆ ನೀಡುವುದಿಲ್ಲ, ಅದು ಆರ್ಥಿಕ ಹೊರೆಯೇ ವಿನಾ ಘನತೆಯ ಹೆಚ್ಚಳಕ್ಕೆ ಸಾಧನೆಯಲ್ಲ. ಆದರೆ ಅದನ್ನು ಮಾಡಬೇಕೇ ಇಲ್ಲವೇ ಎಂಬುದನ್ನು ನಮ್ಮ ಸಾರ್ವಭೌಮ ರಾಷ್ಟ್ರ ತೀರ್ಮಾನಿಸಬೇಕು; ಅಮೆರಿಕಾದೊಡನೆ ನಾವು ಮಾಡಿಕೊಳ್ಳುವ ಒಂದು ಒಪ್ಪಂದವು ಅದನ್ನು ನಿಗದಿಗೊಳಿಸಕೂಡದು. (ಆ) ಇರಾನ್ ಮುಂತಾದ ದೇಶಗಳ ಸಂಪತ್ತಿನ ಅಪಹರಣಕ್ಕಾಗಿ ಮತ್ತು ರಾಜಕೀಯ ಸರ್ವಾಧಿಕಾರಕ್ಕಾಗಿ ಅಮೆರಿಕಾದ ಹುನ್ನಾರಗಳಲ್ಲಿ ನಾವು ಭಾಗಿಗಳಾಗಕೂಡದು. ಅಂದರೆ, ನಮ್ಮ ವಿದೇಶಾಂಗ ನೀತಿಯು 'ರೋಗ್ ಸ್ಟೇಟ್' ಅಮೆರಿಕಾದ ಆಣತಿಗೆ ತಕ್ಕಂತೆ ರೂಪುಗೊಳ್ಳಕೂಡದು. ಅಲಿಪ್ತ ನೀತಿ, ವಸಾಹತುಶಾಹಿಯ ವಿರೋಧ, ಅನಭಿವೃದ್ಧ ದೇಶಗಳೊಡನೆ ಸ್ನೇಹ ಮತ್ತು ಸಹಕಾರ, ಇವು ಯಾವ ಕಾರಣಕ್ಕೂ ಬದಲಾಗಬಾರದು. (ಇ) ಅಣುಶಕ್ತಿ ಇಂಧನದ ಕರಾರಿನ ನೆಪದಲ್ಲಿ ಅಮೆರಿಕಾ ನಮ್ಮ ದೇಶವನ್ನು ತನ್ನ ಪ್ರಾಬಲ್ಯ ವಿಸ್ತರಣಕ್ಕೆ ಸಾಧನ ಮಾಡಿಕೊಳ್ಳುತ್ತದೆ. ಯಾರೊಡನೆ ಮೈತ್ರಿ ಕೂಡದೆಂಬುದನ್ನು ಅಮೆರಿಕಾದ ನಾಯಕರು ಈಗಾಗಲೆ ನಮಗೆ ಹೇಳತೊಡಗಿದ್ದಾರೆ; ನಾಳೆ ಕಿವಿ ತಿರುಚಿ ಅದನ್ನು ಅಂಗೀಕರಿಸಲು ಒತ್ತಾಯ ಹೇರುತ್ತಾರೆ. ಇದು ಸರ್ವಥಾ ಯೋಗ್ಯವಲ್ಲ. ಇರಾನ್ ಮೇಲೆ ಇನ್ನೂ ಹೆಚ್ಚಿನ ನಿರ್ಬಂಧಗಳನ್ನು ಹೇರಲು ಭಾರತ ಸಹಕರಿಸಬೇಕೆಂಬ ನಿರೀಕ್ಷೆ ಇದೆಯೆಂದು ವಿದೇಶಾಂಗ ಉಪಸಚಿವ ಬರ್ನ್ಸ್ ಹೇಳಿರುವುದು ಗಮನಾರ್ಹ. ನಮ್ಮ ದೇಶದ ಆರ್ಥಿಕ ಸಂಬಂಧಗಳನ್ನು ನಿಗದಿಗೊಳಿಸಲು ಬರ್ನ್ಸ್ ದೊಣೆನಾಯಕನಾಗಕೂಡದು. (ಈ) ಪಾಕಿಸ್ತಾನದ ಬದಲು ಭಾರತವನ್ನು ಅಪ್ಪಿಕೊಳ್ಳುವುದು ಹೆಚ್ಚು ಉಪಯುಕ್ತವೆಂದು ಅಮೆರಿಕಾ ಕಂಡುಕೊಳ್ಳುತ್ತಿದೆ. ನಾಳೆ ಪಾಕಿಸ್ತಾನದ ಮೇಲೆ ಅಮೆರಿಕಾದ ಸೈನ್ಯವು ಹಲ್ಲೆ ನಡೆಸುವ ಸಂದರ್ಭವೂ ಬಂದೀತು. ಅದಕ್ಕೆ ಭಾರತದ ನೆಲ-ನೆಲೆ ಬಳಕೆಯಾಗಕೂಡದು. ಯಾವುದೇ ರಾಷ್ಟ್ರದ ಮೇಲಿನ ಆಕ್ರಮಣಕ್ಕೂ ಭಾರತವು ಅಮೆರಿಕಾಕ್ಕೆ ನೆಲೆ ನೀಡಕೂಡದು. ಐವತ್ತು ವರ್ಷಗಳ ಹಿಂದೆ ಖ್ಯಾತ ಬ್ರಿಟಿಷ್ ವಿಜ್ಞಾನಿ ಜೆ. ಬಿ.ಎಸ್. ಹಾಲ್ಡೇನ್ ಭಾರತದ ಪೌರತ್ವ ಸ್ವೀಕರಿಸಿ ನಮ್ಮ ದೇಶದಲ್ಲಿರಲು ಬಂದರು. ಅದಕ್ಕೆ ಅವರು ಕೊಟ್ಟ ಕಾರಣ ಸ್ಫೂರ್ತಿಯುತವಾದ್ದು: ''ನಾನು ಸ್ವತಂತ್ರ ದೇಶವೊಂದರಲ್ಲಿರಬೇಕೆಂಬ ಇಚ್ಛೆ ನನ್ನದು. ನನ್ನ ಸುತ್ತಮುತ್ತ ವಿದೇಶೀ ಸೈನ್ಯದ ತುಕಡಿಗಳು ಅಡ್ಡಾಡುತ್ತಿರುವಂತಹ ಸನ್ನಿವೇಶ ನನಗೆ ಬೇಡ''. ಭಾರತದಲ್ಲಿ ಅಮೆರಿಕಾದ ಸೈನ್ಯವು ಕಾಲಿರಿಸಿದಂದು ಭಾರತದ ತಲೆ ಕತ್ತರಿಸಿಹಾಕಿದಂತೆ ಎಂಬುದು ನಮ್ಮ ಘೋಷಣಾವಾಕ್ಯವಾಗಿರಬೇಕು.

ಇಂದು ಭಾರತವು ಅಮೆರಿಕಾದೊಡನೆ ಮಾಡಿಕೊಂಡಿರುವ ಅಣುಶಕ್ತಿ ಒಪ್ಪಂದವು ಈ ನಾಲ್ಕು ಅಂಶಗಳಿಗೂ ಮಾರಕವಾಗಿರುತ್ತದೆ. ಎಡಪಕ್ಷಗಳ ಬೆಂಬಲದಿಂದ ರಚಿತವಾದ ಕಾಂಗ್ರೆಸ್ ಪಕ್ಷದ ಸರ್ಕಾರವು ಅಂಗೀಕರಿಸಿರುವ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ನಮ್ಮ ವಿದೇಶಾಂಗ ನೀತಿಯು ಪಲ್ಲಟಗೊಳ್ಳಕೂಡದೆಂದು ನಿರ್ದೇಶಿಸಲಾಗಿದೆ. ಅದಕ್ಕೆ ಬದ್ಧವಾಗಿರಬೇಕಾದ್ದು ಎಡಪಕ್ಷಗಳ ಕರ್ತವ್ಯ ಮತ್ತು ಕಾಂಗ್ರೆಸ್ ಪಕ್ಷದ ಜವಾಬ್ದಾರಿ. ಆದರೆ ಕಾಂಗ್ರೆಸ್ ಪಕ್ಷದಲ್ಲಿ ಇವೆಲ್ಲಾ ಚರ್ಚೆಗೆ ಬರುವುದಿಲ್ಲ. ಅಲ್ಲಿ ಮನಮೋಹನ ಸಿಂಗ್ - ಸೋನಿಯಾ ಗಾಂಧಿ ಹೇಳಿದ್ದೇ ನೀತಿ ಮತ್ತು ಸಿಂಗರಿಗೆ ವಿಶ್ವಬ್ಯಾಂಕಿನ ಆದೇಶವೇ ಗುರುವಾಣಿ. ಅಮೆರಿಕಾದೊಡನೆ ಮಿಲಿಟರಿ ಮೈತ್ರಿ ಬೇಕೆಂದು ಕಾಂಗ್ರೆಸ್ ಪಕ್ಷ ಆಶಿಸುತ್ತದೆಯೆ? ಇದನ್ನು ಆ ಪಕ್ಷದ ನಾಯಕರು ಬಹಿರಂಗವಾಗಿ ತಿಳಿಸಬೇಕು. ಮತೀಯ ರಾಜಕಾರಣವನ್ನು ಸೋಲಿಸಲು ಕಾಂಗ್ರೆಸ್‌ಗೆ ಎಡಪಕ್ಷಗಳು ಬೆಂಬಲ ನೀಡಿರುವುದು

ನಿಜ. ಆದರೆ ಅದರ ಮುಸುಕಿನಲ್ಲಿ ಭಾರತವನ್ನು ಅಮೆರಿಕಾದ ಭಂಟನನ್ನಾಗಿಸುವ ಪ್ರಕ್ರಿಯೆಗೆ ಎಡಪಕ್ಷಗಳು ಬೆಂಬಲ ನೀಡುವಂತಿಲ್ಲ. ಎಡಪಕ್ಷಗಳ ಬೆಂಬಲವಿರುವ ಸರ್ಕಾರದ ಅವಧಿಯಲ್ಲಿ ಭಾರತವು 'ರೋಗ್ ಸ್ಟೇಟ್' ಅಮೆರಿಕಾದ ಆಲಿಂಗನಕ್ಕೆ ಹಾತೊರೆದು ನುಗ್ಗಿತೆಂದರೆ ಎಡ ಪಕ್ಷಗಳಿಗೆ ಅದಕ್ಕಿಂತಲೂ ಘೋರವಾದ, ಹೀನವಾದ ಗತಿ ಇರಲಾರದು. ಮತೀಯ ದೌರ್ಜನ್ಯವನ್ನು ಖಂಡತುಂಡವಾಗಿ ವಿರೋಧಿಸುತ್ತಲೇ ಸಾಮ್ರಾಜ್ಯಶಾಹಿಯ ಉಪಟಳವನ್ನೂ ದೂರವಿರಿಸಬೇಕಾದ್ದು ಎಡಪಕ್ಷಗಳ ಸೈದ್ಧಾಂತಿಕ ಕರ್ತವ್ಯ. ರಾಜಕೀಯ ಆರ್ಥಿಕತೆಯ ವಿಶ್ಲೇಷಣೆಯಂತೆ, ಮತೀಯ ರಾಜಕಾರಣ ಸಹ ನವಸಾಹತುಶಾಹಿ ಜಾಗತೀಕರಣ ಪ್ರಕ್ರಿಯೆಯ ಪರಿಣಾಮ. ಜಾಗತೀಕರಣದ ಅಸಹ್ಯ ಪರಿಣಾಮಗಳು ಯಾರಿಗೆ ಲಾಭದಾಯಕವೋ ಆ ಶಕ್ತಿಗಳು ಅಮೆರಿಕಾದೊಡನೆ ಒಪ್ಪಂದಕ್ಕೆ ಸಿದ್ಧವಾಗಿವೆ. ಎಡ ಪಕ್ಷಗಳು ಈ ಗುಂಪಿಗೆ ಸೇರಿಲ್ಲ, ಸೇರಕೂಡದು. ಮತೀಯತೆ ಮತ್ತು ಅಮೆರಿಕಾದ ದುರ್ನಡತೆ, ಎರಡೂ ಎಡ ಪಕ್ಷಗಳಿಗೆ ಅಪಥ್ಯವಾದ್ದರಿಂದ ಎರಡನ್ನೂ ಆ ಪಕ್ಷಗಳು ವಿರೋಧಿಸುವುದು ಅನಿವಾರ್ಯ. ಮನಮೋಹನ ಸಿಂಗ್ ಆಗಲಿ ಇತರ ಕಾಂಗ್ರೆಸ್ ನಾಯಕರಾಗಲಿ ಎಡ ಪಕ್ಷಗಳ ಈ ನಿಲುವನ್ನು ಅಲುಗಿಸಲು ಸಮರ್ಥರಲ್ಲ, ಸಮರ್ಥರಾಗಕೂಡದು. ಅಣು ಶಕ್ತಿ ವರ್ಧನೆಗೆ ಇಂಧನ ಪೂರೈಸುವ ಸೋಗಿನಲ್ಲಿ ಅಮೆರಿಕಾ ಭಾರತವನ್ನು ಲಪಟಾಯಿಸಲು ಹೊಂಚುಹಾಕುತ್ತಿದೆ. ಅದನ್ನು ತಿಳಿದು, ಮನಮೋಹನ ಸಿಂಗ್‌ರಂತಹ ಮುತ್ಸದ್ದಿಗಳ ರೋಚಕ ಮಾತುಗಳಿಗೆ ಮರುಳಾಗದೆ ಜನತೆಯೊಡನೆ ಮಾಡಿಕೊಂಡಿರುವ ಅನುಲ್ಲಂಘನೀಯ ಸೈದ್ಧಾಂತಿಕ ಕರಾರಿಗೆ ಎಡ ಪಕ್ಷಗಳು ಬದ್ಧರಾಗಿರಬೇಕು. ನಮ್ಮ ದೇಶಕ್ಕೆ ಕೇಡು ತರುವಂತಹ ಆ ಅನಿಷ್ಟ ಒಪ್ಪಂದವನ್ನು ಕೈಬಿಡಲು ಕಾಂಗ್ರೆಸ್ ನಾಯಕರು ಮುಂದಾಗಬೇಕು ಮತ್ತು ಕೇಂದ್ರದ ಸಮ್ಮಿಶ್ರ ಸರ್ಕಾರದಲ್ಲಿ ಭಾಗಿಗಳಾಗಿರುವ ಇತರ ಪಕ್ಷಗಳೂ ಇದಕ್ಕೆ ಒತ್ತಾಯ ತರಬೇಕು. ಇಂದು ಅದನ್ನು ನಾವು ಸಮಷ್ಟಿಯಾಗಿ ಮಾಡದಿದ್ದರೆ ಒಂದು ಮಾರಕ ಐತಿಹಾಸಿಕ ಘಟನೆಗೆ ನಾವೆಲ್ಲ ಜವಾಬ್ದಾರರಾಗಬೇಕಾಗುತ್ತದೆ. ಮುಂದಿನ ಪೀಳಿಗೆಗಳು ಅದನ್ನು ಕ್ಷಮಿಸುವುದಿಲ್ಲ. ೧೮೫೭ರ ಸಂಗ್ರಾಮ, ಭಗತ್ ಸಿಂಗ್ ಹುತಾತ್ಮನಾಗಿ ೭೫ ವರ್ಷ, ದೇಶವು ಸ್ವತಂತ್ರವಾಗಿ ೬೦ ವರ್ಷ. ಇವುಗಳು ನೀಡುವ ಚೈತನ್ಯವು ಬರಡಾಗದಿರಬೇಕಾದರೆ ನಾವು ಸಾರ್ವಭೌಮ ಸ್ವತಂತ್ರ ರಾಷ್ಟ್ರವಾಗಿ ಉಳಿಯಬೇಕು, ಯಾವುದೋ ದುರುಳ ಪ್ರಭುತ್ವದ ಅಡಿಯಾಳಾಗಕೂಡದು. ಎಡ ಪಕ್ಷಗಳು ವಿಶೇಷ ಎಚ್ಚರವಹಿಸಬೇಕಾದ್ದು ಇದನ್ನು ಸಿದ್ಧಿಸಿಕೊಳ್ಳುವುದಕ್ಕಾಗಿ.

೧೭-೦೮-೨೦೦೭

## ಹಲ್ಲೆಕೋರರಿಗೆ ಕಾನೂನಿನ ರಕ್ಷೆ?

'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣಮಿತ್ರ' ಎಂಬುದು ಪ್ರಜಾಸತ್ತೆಗೆ ಶೋಭಿಸುವ ಮಾತು. ಆದರೆ ಇತ್ತೀಚಿನ ದಿನಗಳಲ್ಲಿ ಕಾವ್ಯದ ವಿರುದ್ಧ ಖಡ್ಗ ಹಿಡಿದು ಹೊರಟ ಧರ್ಮಾಂಧ, ಜಾತ್ಯಂಧ ಸೇನಾನಿಗಳು ಪ್ರಜಾಸತ್ತೆಯ ಕೊಲೆಗೈಯ್ಯಲು ಹೊರಟಿದ್ದಾರೆ. ಹೈದರಾಬಾದ್‌ನ ಪ್ರೆಸ್‌ಕ್ಲಬ್‌ನಲ್ಲಿ ಬಾಂಗ್ಲಾ ಲೇಖಕಿ ತಸ್ಲೀಮಾ ನಸ್ರೀನ್‌ಳ ಮೇಲೆ ಇತ್ತೀಚೆಗೆ ನಡೆದ ಹಲ್ಲೆ ಭಾರತೀಯರೆಲ್ಲರೂ ತಲೆತಗ್ಗಿಸುವಂತಹ ಘಟನೆಯಾಗಿದೆ. ದೂರದರ್ಶನದಲ್ಲಿ ಈ ಘಟನೆಯನ್ನು ನೋಡುತ್ತಿದ್ದವರಿಗೆ ಇದ್ದಕ್ಕಿದ್ದಂತೆ ದಿಗ್ಭ್ರಮೆ, ಆತಂಕ, ಮುಂದೇನು ಸಂಭವಿಸಿಬಿಡಬಹುದೋ ಎಂಬ ಗಾಬರಿ ಎಲ್ಲ ಒಟ್ಟಿಗೆ ಸೇರಿಕೊಂಡಿತ್ತು. ಮಜಲೀಸ್ ಪಕ್ಷದ ಕಾರ್ಯಕರ್ತರ ಗೂಂಡಾ ಪಡೆಯು ವೇದಿಕೆಯ ಮೇಲಿದ್ದ ಲೇಖಕಿಯ ಮೇಲೆ ದಾಳಿ ಮಾಡಿದ್ದು ಹಲವಾರು ಕ್ಯಾಮೆರಾಗಳ ಬೆಳಕಿನಲ್ಲಿ ಕಂಡಾಗ ಕೀಚಕ, ದುಶ್ಶಾಸನರನ್ನು ನೆನಪಿಗೆ ತರುತ್ತಿತ್ತು. ಮಜಲೀಸ್ ಪಕ್ಷದ ಮೂವರು ಶಾಸಕರು ಇದರ ನೇತೃತ್ವ ವಹಿಸಿದ್ದರು. ಇವರೆಂತಹ ಜನಪ್ರತಿನಿಧಿಗಳೆಂದು ಊಹಿಸಿಕೊಳ್ಳಬಹುದು. ಸದಾಕಾಲಕ್ಕೂ ಜೈಲಿನಲ್ಲಿರಬೇಕಾದ ಗೂಂಡಾಗಳು ಇವರು. ನಸ್ರೀನ್‌ಳ ಮೇಲೆ ನಡೆದ ಹಲ್ಲೆ ಕೇವಲ ಅವರ ವಿರುದ್ಧದ ಪ್ರತಿಭಟನೆಯ ಸಂಕೇತದಂತೆ ಕಾಣದೆ, ಅವರನ್ನು ಕೊಲೆಗೈಯ್ಯುವ ಪ್ರಯತ್ನವಾಗಿಯೂ ಕಾಣುತ್ತಿತ್ತು. ಈ ಘಟನೆಗೆ ಕಾನೂನು ಮತ್ತು ಸರ್ಕಾರ ಸ್ಪಂದಿಸಿದ ರೀತಿ ಕೂಡ ಆತಂಕ ಹುಟ್ಟಿಸುವಂತಹುದೇ. ನಸ್ರೀನ್‌ಳ ಮೇಲೆ ಹಲ್ಲೆ ಮಾಡಿದ ಶಾಸಕರನ್ನು ಬಂಧಿಸಿದರೂ ಅವರನ್ನು ತಕ್ಷಣ ಜಾಮೀನಿನ ಮೇಲೆ ಬಿಡುಗಡೆ ಮಾಡಲಾಯಿತು. ಇದಕ್ಕೆ ಪ್ರತಿಯಾಗಿ 'ಕೋಮುಗಳ ನಡುವೆ ವಿಷ ಭಾವನೆಗಳನ್ನು ಬಿತ್ತಿ ಶಾಂತಿ ಕದಡುತ್ತಿದ್ದಾರೆ'ಂಬ ಆಪಾದನೆಯನ್ನು ಹೊರಿಸಿ ತಸ್ಲೀಮಾ ವಿರುದ್ಧ ಪ್ರಕರಣವನ್ನು ಪೊಲೀಸರು ದಾಖಲಿಸಿಕೊಂಡರು. ಹಲ್ಲೆ ಮಾಡಿದ ಮಜಲೀಸ್‌ನ ಕಾರ್ಯಕರ್ತರು ನಸ್ರೀನ್ ಮತ್ತೊಮ್ಮೆ ಹೈದರಾಬಾದಿಗೆ ಕಾಲಿಡಬಾರದೆಂದು ಫತ್ವಾ ಹೊರಡಿಸಿದರು. ಇದು 'ಅಟ್ಟದಿಂದ ಬಿದ್ದವರನ್ನು ದೊಣ್ಣೆಯಿಂದ ಚಚ್ಚಿದರು' ಎಂಬ ಮಾತನ್ನು ನೆನಪಿಸುತ್ತದೆ. ತಸ್ಲೀಮಾರನ್ನು ಕೊಲೆ ಮಾಡುವುದಾಗಿ ಬಹಿರಂಗ ಘೋಷಣೆ ಮಾಡಿದವರನ್ನು ಬಂಧಿಸಿಡಲು ನಮ್ಮಲ್ಲಿ ಯಾವ ಕಾನೂನೂ ಇಲ್ಲವೆ?

ಇಂತಹ ಆಘಾತಕಾರಿ ಘಟನೆಗಳು ಇತ್ತೀಚೆಗೆ ಹೆಚ್ಚು ಹೆಚ್ಚು ಮರುಕಳಿಸುತ್ತಿವೆ. ಮೇ ತಿಂಗಳಿನಲ್ಲಿ ಬರೋಡಾದ ಎಂ. ಎಸ್. ವಿಶ್ವವಿದ್ಯಾಲಯದಲ್ಲಿ ಕಲಾ ವಿದ್ಯಾರ್ಥಿ ಚಂದ್ರಮೋಹನ್ ತಾನು ಚಿತ್ರಿಸಿದ ಚಿತ್ರಗಳ ಕಲಾ ಪ್ರದರ್ಶನ ನಡೆಸುತ್ತಿದ್ದಾಗ ಆ ಸ್ಥಳಕ್ಕೆ ನುಗ್ಗಿದ ವಿಶ್ವ ಹಿಂದೂ ಪರಿಷತ್ತಿನ ಕಾರ್ಯಕರ್ತ ಮತ್ತು ಸ್ವತಃ ವಕೀಲನಾದ ನೀರಜ್ ಜೈನ್ ಅಲ್ಲಿದ್ದ ಚಿತ್ರಗಳನ್ನು ಕಿತ್ತು ಬಿಸಾಡಿ, ಅಲ್ಲಿ ನೆರೆದಿದ್ದ ವಿದ್ಯಾರ್ಥಿಗಳ ಮೇಲೆ ಹಲ್ಲೆ ನಡೆಸಿದರು. ಈ ಇಡೀ ಘಟನೆಗೆ ಪೊಲೀಸರು ಮೂಕಸಾಕ್ಷಿಗಳಾಗಿದ್ದರು. ಈ ಘಟನೆಗೆ ಕಾರಣನಾದ ನೀರಜ್ ಜೈನ್‌ಗೆ ಏನೂ ಶಿಕ್ಷೆಯಾಗಲಿಲ್ಲ; ಆದರೆ ಚಿತ್ರಗಳನ್ನು ರಚಿಸಿ ಪ್ರದರ್ಶಿಸಿದ ಚಂದ್ರಮೋಹನ್ ಒಂದು ವಾರ ಕಾಲ ಜೈಲಿನಲ್ಲಿ ಕಳೆಯಬೇಕಾಯಿತು. ನಂತರ ಕಲಾವಿಭಾಗದ ಡೀನ್ ಅಹಮದಾಬಾದಿನಲ್ಲಿ ಒಂದು ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಿದ್ದಾಗ ಅವರ ಮೇಲೆ ಹಲ್ಲೆ ನಡೆಯಿತು. ಹೀಗೆಯೇ ಜುಲೈ ತಿಂಗಳಲ್ಲಿ ಹೈದರಾಬಾದಿನ ಸೇಂಟ್ ಆ್ಯನ್ಸ್ ಕಾಲೇಜಿನ ವಿಜ್ಞಾನ ಶಿಕ್ಷಕಿ ಪ್ರಶಾಂತಿ ತರಗತಿಯಲ್ಲಿ ಇಸ್ಲಾಂಗೆ ವಿರುದ್ಧವಾದ ಮಾತುಗಳನ್ನಾಡಿದ್ದರೆಂಬ ವೃಥಾ ಆರೋಪಕ್ಕೆ ತುತ್ತಾಗಿ ಬಂಧಿಸಲ್ಪಟ್ಟದ್ದು, ನಂತರ ಬಿಡುಗಡೆಯಾದ್ದು, ಯಾರೂ ಮರೆಯುವಂತಿಲ್ಲ. ಮೊನ್ನೆ ಮೊನ್ನೆ ಮಧ್ಯಪ್ರದೇಶದ ಪ್ರಾಧ್ಯಾಪಕರೊಬ್ಬರು ದೇವರ ಬಗ್ಗೆ ಏನೋ ಹೇಳಿದರೆಂದು ಅವರ ಮುಖಕ್ಕೆ ಟಾರ್ ಬಳಿದರು. ದೇವರನ್ನು ಹೀಗೆ ರಕ್ಷಿಸುವ

೯ನೇ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನೆನ್ನೆಗಳ ಜೊತೆ ನಾಳೆಗಳೆಡೆಗೆ (?)
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಆಗಸ್ಟ್ ಸಂಚಿಕೆ

ಕೇಸರಿ, ಬಿಳಿ, ಹಸಿರು ಬಣ್ಣ ನಡುವೆ ಚಕ್ರದ ಜೊತೆಗೆ ಹೊಸ ರಾಷ್ಟ್ರಪತಿಯವರ ಮುಖಪುಟ ಹೊತ್ತ ಆಗಸ್ಟ ಸಂಚಿಕೆ ತುಂಬಾ ಆಕರ್ಷಕ. ಸಂಪಾದಕೀಯ ಅರ್ಥಗರ್ಭಿತ. ಎರಡನೇ ರಕ್ಷಾಪುಟದ ಕಲಾವಿದನ ಚಿತ್ತಾರ ಬೊಂಬಾಟ್. 'ಕವಿಯ ಸಾವು' ಅರ್ಥಪೂರ್ಣ ಕಥೆಯಾಗಿತ್ತು. 'ಮಾತೃಭಾಷೆಯಾಗಿ ಕನ್ನಡ ಬೋಧನೆ ಮತ್ತು ವ್ಯಾಕರಣ' ಕುರಿತ ವಿಚಾರ ಉಪಯುಕ್ತವಾಯಿತು. ರಾವಣ ಖಳನೆ, ಪ್ರತಿನಾಯಕನೆ? 'ತಿಳಿವು' ನಿಜವಾಗಿಯೂ ಯೋಚಿಸುವಂತೆ ಮಾಡಿತು.

ವಿಠಲಾಪುರ **ಪಾಂಡವಪುರ ಮೃತ್ಯುಂಜಯ**

### ರಾಷ್ಟ್ರೀಯತೆ

ಧರ್ಮ, ಧಾರ್ಮಿಕತೆ, ಸಂಸ್ಕೃತಿ, ನಾಗರಿಕತೆ, ರಾಜಕಾರಣ, ಸರಕಾರ ಹಾಗೂ ರಾಷ್ಟ್ರೀಯತೆಯ ಬಗ್ಗೆ ಆಳವಾದ ಜ್ಞಾನದ ಕೊರತೆ, ಬಡತನ ಮತ್ತು ಅನಕ್ಷರತೆಗಳನ್ನು ಕಲಸುಮೇಲೋಗರವಾಗಿರಿಸಿ ಅಧಿಕಾರವನ್ನು ಉಳಿಸಿಕೊಳ್ಳಲು ಅಲ್ಪಸಂಖ್ಯಾತ ರಾಜಕಾರಣಿಗಳು ಬಹುಸಂಖ್ಯಾತ ಅವಿದ್ಯಾವಂತರನ್ನು ಬಳಸಿಕೊಳ್ಳುವ ವಿಧಿ ವಿಧಾನಗಳು ವೈವಿಧ್ಯತೆಯನ್ನು ಮರೆಸುವ ಸಂಚಿನ ವಿಚಾರವನ್ನು ಸರಳವಾಗಿ ನಿರೂಪಿಸಿರುವ ಲೇಖನವಿದು. ಹಿಂದೂ ಎಂದರೆ ಮತ ಎಂದುಕೊಂಡ ಮೂಲಭೂತವಾದಿಗಳಿಂದಾಗಿ ಆರವಿ ಜೀವನ ಪದ್ಧತಿ ಎಂಬುದನ್ನು ಮರೆಮಾಚಿ, ಸಮಾಜ ಸುಧಾರಣೆಗಳಿಗಾಗಿ ವ್ಯಕ್ತಿಗಳು ನಿಗದಿಪಡಿಸಿದ ಕಾನೂನು ಪಾಲನೆಗಳು ಮತ್ತು ಬದುಕಿಗಾಗಿ ಅವುಗಳನ್ನು ಅನುಸರಿಸುವವರ ಪದ್ಧತಿಯನ್ನು ಧರ್ಮ ಎಂದು ಕರೆದ ಫಲವಾಗಿ ಉಂಟಾಗಿರುವ ಸಮಸ್ಯೆಗಳು ಸಮಾಜದ ಕಂಟಕಗಳು ಎಂದು ಪರಿಗಣಿಸದೆ ಅವುಗಳ ಧಾರ್ಮಿಕ ಭಿನ್ನತೆಗಳು ಎಂಬುದಾಗಿ ಕರೆದುಕೊಂಡ ಪರಿಣಾಮವಾಗಿ ಭಾರತದಂತಹ ಅತ್ಯಂತ ಪ್ರಾಚೀನ ದೇಶದಲ್ಲಿ ಧಾರ್ಮಿಕ ದೌರ್ಜನ್ಯಗಳು ನಡೆಯಲು ಸಾಧ್ಯವಾಗಿದೆ. ಧರ್ಮವೆಂದರೆ ಕೇವಲ ಬದುಕಿನ ಹಾದಿ ಎಂಬುದಾಗಿ ಅರಿತುಕೊಂಡು ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡು ಸಂಸ್ಕೃತಿ, ಭಾಷೆ, ಕಲೆ ಮತ್ತು ಪರಿಸರ ಸದಾ ಬದಲಾವಣೆಗಳೊಂದಿಗೆ ಮುಂದುವರೆಯುತ್ತದೆ ಎಂಬುದನ್ನು ತಿಳಿದುಕೊಂಡಾಗ ಸಮಸ್ಯೆಗಳು ಇಲ್ಲವಾಗುತ್ತವೆ.

ಬೆಂಗಳೂರು **ನರೇಂದ್ರ ಸಿರಕಜೆ**

### ಡಿ.ಎಲ್.ಎನ್.

'ಗುರು-ಶಿಷ್ಯ' ಪರಂಪರೆಯ 'ನುಡಿಗೌರವ'ದ ಈ ಲೇಖನವು ಇಂದಿನ ಯುವ ಪೀಳಿಗೆಗೆ ಕನ್ನಡದ ದಿಗ್ಗಜರ ಸಾಲಿನಲ್ಲಿ ಡಿ.ಎಲ್.ಎನ್. ಅವರ ವ್ಯಕ್ತಿತ್ವದ ಪರಿಚಯವು ಸೊಗಸಾಗಿ ಮೂಡಿಬಂದಿದೆ. ಈ ಲೇಖನವು 'ಹೊಸತು' ನೀಡಿದ ಸ್ವಾತಂತ್ರ್ಯ ದಿನಾಚರಣೆಯ ಕೊಡುಗೆಯಾಗಿದೆ.

ಡೋಣಿ (ಜಿ. ಗದಗ) **ಎಮ್. ಎಮ್. ಹೆಬ್ಬಾಳ**




ಡಿ.ಎಲ್.ಎನ್. ಅವರನ್ನು 'ನಡೆದಾಡುವ ನಿಘಂಟು' ಎಂದು ಸಂಬೋಧಿಸುವುದು ಸಾಮಾನ್ಯವಾಗಿತ್ತು. ಈ ಬಿರುದು ಅವರಿಗೆ ಪುಕ್ಕಟೆ ಬಂದುದಲ್ಲ. 'ಶಬ್ದವಿಹಾರ' ಎಂಬ ಪುಟ್ಟ ಪುಸ್ತಕದಲ್ಲಿ 'ಮೇಗಾಳಿ-ಕಿಗ್ಗಾಳಿ', 'ಡಂಗ ಹಾಕು', 'ಅಗ್ರಹಾರ', 'ಹುಡುಕುಗೀರು', 'ಬಡಪ', 'ಒಲ್ಲಣಿಗೆ' – ಇಂತಹ ಎಂಟು ಹತ್ತು ಪದಗಳ ಅರ್ಥವನ್ನು ನಿರ್ಣಯಿಸಿದ ಬಗೆಯನ್ನು ಸುಮಾರು ೫೦ ಪುಟಗಳಲ್ಲಿ ವಿವರಿಸಿದ್ದಾರೆ. ಯಾವುದಾದರೂ ಪದವೊಂದರ ಅರ್ಥ ಸಿಕ್ಕುಗಂಟಾಗಿ ಇವರ ತಲೆಹೊಕ್ಕಿತೆಂದರೆ, ಸದಾ ಅದೇ ವಿಚಾರ ಅವರ ತಲೆ ಕೊರೆಯುತ್ತಿತ್ತು. ಅಕಸ್ಮಾತ್ತಾಗಿ ಯಾವುದಾದರೂ ಸಂದರ್ಭದಲ್ಲಿ ಆ ಪದದ ಅರ್ಥ ಸ್ಫುಟವಾಯಿತು ಎಂದೊಡನೆಯೆ ಅವರು ಅನುಭವಿಸುತ್ತಿದ್ದ 'ಬ್ರಹ್ಮಾನಂದ' ವರ್ಣನಾತೀತ.

ಹರಿಶ್ಚಂದ್ರ ಕಾವ್ಯದಲ್ಲಿ ಬರುವ 'ಮೇಗಾಳಿ-ಕಿಗ್ಗಾಳಿ' ಎಂಬ ಜಂಟಿಪದ ಪ್ರೊಫೆಸರರ ತಲೆತಿನ್ನುತ್ತಿತ್ತು.' ಡಿ.ಎಲ್.ಎನ್. ಬರೆಯುತ್ತಾರೆ: ''ಎರಡು ಮೂರು ವರ್ಷಗಳ ಹಿಂದೆ ಬೇಸಿಗೆ ರಜದಲ್ಲಿ ಪಟ್ಟಣ ಬಿಟ್ಟು ಹಳ್ಳಿಗೆ ಹೋಗಬೇಕಾಗಿ ಬಂದಿತು... ಸಂಜೆ ಕಾಲಾಡಿಸಿಕೊಂಡು ಬರೋಣವೆಂದು ನಾಲ್ಕಾರು ಜನ ಊರಿನ ನೆಂಟರೊಡನೆ ಬೆಟ್ಟಗಳನ್ನು ಹತ್ತಿ ಇಳಿದು ಕಾಡಿನ ನಡುವೆ ದಣಿವಾರಿಸಿಕೊಳ್ಳಲು ನಿಲ್ಲಬೇಕಾಯಿತು. ಆಗ ನೆಂಟರೊಬ್ಬರು ತಮ್ಮ ಬೇಟೆಯ ಅನುಭವವನ್ನು ಹೇಳತೊಡಗಿದರು... ಹೇಳುತ್ತ ಹೇಳುತ್ತ ಅವರು 'ಹುಲಿ ಕಿಗ್ಗಾಳಿಗೆ ಬಂತು' ಎಂದು ಅಭಿನಯಿಸಿ ತೋರಿಸಿದರು. ಆ ಕೂಡಲೆ ನಾನು ಎದ್ದುನಿಂತು ಕುಣಿದಾಡುತ್ತ ಅವರನ್ನು ತಬ್ಬುವ ಹಾಗೆ ಕೈಹಿಡಿದು 'ಸ್ವಾಮಿ, ಕೊಂಚ ತಾಳಿ, ಕಿಗ್ಗಾಳಿ ಎಂದರೆ ಏನು' ಎಂದು ಕೇಳಿದೆನು. ಉಳಿದವರಿಗೆಲ್ಲ ಆಶ್ಚರ್ಯ – ಇವನಿಗೆ ಈ ಪದದ ಅರ್ಥ ತಿಳಿಯದೇ ಎಂದು. ಅವರು ನನ್ನ ಕಡೆ ತಿರಸ್ಕಾರದಿಂದ ನೋಡಿದರು. ಅವರ ವಾಕ್ಯ ನನ್ನ ಕುತೂಹಲವನ್ನು ಕುಗ್ಗಿಸಲಿಲ್ಲ... ಅನಿರೀಕ್ಷಿತವಾದ ಕಡೆಯಿಂದ ಬೆಳಕು ಬಂದದ್ದು ಕುತೂಹಲ ಇಮ್ಮಡಿಸುವಂತೆ ಮಾಡಿತು. ಮುಂದಕ್ಕೆ ಕಥೆ ಹೇಳಲು ಬಿಡದೆ ಅರ್ಥ ತಿಳಿಸಲೇಬೇಕೆಂದು ಮೊಂಡಾಟ ಮಾಡಿದಾಗ ಅವರು ನಕ್ಷೆ ಬರೆದು ವಿವರಿಸಿದರು.''

ಡಿ.ಎಲ್.ಎನ್. ಅವರೊಂದಿಗೆ ಆನರ್ಸ್, ಎಂ.ಎ. ವಿದ್ಯಾರ್ಥಿಗಳು ಕೂಡ ಹೆಚ್ಚು ಸಲಿಗೆ ವಹಿಸುತ್ತಿರಲಿಲ್ಲ. ಭಯಭಕ್ತಿಗಳಿಂದ ದೂರವೇ ಇರುತ್ತಿದ್ದರೆಂಬುದು ನಿಜ. ಆದರೆ ಡಿ.ಎಲ್.ಎನ್. ತುಂಬ ಕಿರಿಯ ವಿದ್ಯಾರ್ಥಿಯನ್ನು ಕೂಡ ಎಂದೂ ಏಕವಚನದಲ್ಲಿ ಮಾತಾಡಿಸುತ್ತಿರಲಿಲ್ಲ. ವಿದ್ಯಾರ್ಥಿಯ ಆತ್ಮಗೌರವಕ್ಕೆ ಧಕ್ಕೆ ತರಬಾರದೆಂಬ ಭಾವನೆ ಅವರ ನಡೆನುಡಿಗಳಲ್ಲಿ ಎದ್ದುಕಾಣುತ್ತಿತ್ತು. ಮಹಾರಾಜ ಕಾಲೇಜಿನಲ್ಲಿ ಆ ವರ್ಷ ಶುಲ್ಕ ರಿಯಾಯಿತಿಗೆ ಅರ್ಹರಾದ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ ಸಮಿತಿಯೊಂದನ್ನು ರಚಿಸಲಾಗಿತ್ತು. ಡಿ.ಎಲ್.ಎನ್. ಸಮಿತಿಯ ಅಧ್ಯಕ್ಷರು. ವಿದ್ಯಾರ್ಥಿಗಳು ತಮ್ಮ ಅರ್ಜಿಯಲ್ಲಿ ತಮ್ಮ ಮನೆಯ ಪರಿಸ್ಥಿತಿ, ಆರ್ಥಿಕ ಅಡಚಣೆಗಳನ್ನು ತಿಳಿಸಿರುತ್ತಾರಾದರೂ ಸಂದರ್ಶಕರು ಮತ್ತೆ ಮತ್ತೆ ಅದೇ ಪ್ರಶ್ನೆಗಳನ್ನು ಕೇಳಿ ಪ್ರೌಢವಯಸ್ಸಿನ ತರುಣರಿಗೆ ಮುಜುಗರವುಂಟು ಮಾಡುವುದು ಸಾಮಾನ್ಯ... ಒಬ್ಬ ವಿದ್ಯಾರ್ಥಿ ಸಂದರ್ಶನದ

ಆಗಸ್ಟ್ ೨೦೦೭ರ ಸಂಚಿಕೆಯ, ಪುಟ ೨೨ರಲ್ಲಿ ಪ್ರಕಟವಾದ ಹನಿಗವಿತೆ ಕಣ್ತಪ್ಪಿನಿಂದ ಡಿ. ವಿ. ಬಡಿಗೇರ್ ಹೆಸರಲ್ಲಿ ಪ್ರಕಟವಾಗಿದೆ. ಅದು ಮೂಲತಃ ವಾಸುದೇವ ನಾಡಿಗ್ ಅವರ ರಚನೆಯಾಗಿದೆ. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ.

– ಸಂಪಾದಕ

### ಪ್ರಕಟಣೆ
## ಕೃಷಿ–ಗ್ರಾಮೀಣ ಪತ್ರಿಕೋದ್ಯಮ ತರಬೇತಿ

ಪರ್ಯಾಯ ಕೃಷಿಮಾಧ್ಯಮ ಕೇಂದ್ರ ೨೦೦೭-೦೮ನೇ ಸಾಲಿನ ಕೃಷಿ-ಗ್ರಾಮೀಣ ಪತ್ರಿಕೋದ್ಯಮ ತರಬೇತಿಗೆ ಪ್ರವೇಶಗಳನ್ನು ಆಹ್ವಾನಿಸಿದೆ. ಬರುವ ನವೆಂಬರ್‌ನಲ್ಲಿ ಶುರುವಾಗಲಿರುವ ಅಂಚೆ ತೆರಪಿನ ಈ ಕೋರ್ಸ್ ಒಂದು ವರ್ಷ ಅವಧಿಯದಾಗಿರುತ್ತದೆ. ಕೃಷಿಕರು, ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ಪತ್ರಿಕೋದ್ಯಮ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು, ಸ್ವಯಂಸೇವಾ ಸಂಸ್ಥೆಗಳ ಕಾರ್ಯಕರ್ತರು, ಕೃಷಿ–ಗ್ರಾಮೀಣ ಸಂಬಂಧಿ ಇಲಾಖೆಗಳು ಮತ್ತು ಸಂಸ್ಥೆಗಳಲ್ಲಿ ಕೆಲಸಮಾಡುತ್ತಿರುವವರಿಗೆ ಈ ತರಬೇತಿಯಿಂದ ವಿಶೇಷ ಪ್ರಯೋಜನವಿದೆ. ಇತರ ಆಸಕ್ತರೂ ಅರ್ಜಿ ಸಲ್ಲಿಸಬಹುದು. ವಿದ್ಯಾರ್ಹತೆ – ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಕಲಿಕೆ.

ವಿವರಕ್ಕಾಗಿ ೨೦ ರೂ. ಅಂಚೆಚೀಟಿಯೊಂದಿಗೆ ಪತ್ರ ಬರೆಯಬೇಕಾಗಿ ಕೋರಿದೆ: ಅನಿತಾ ಪೈಲೂರು, ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ, ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮.

ಕೊಠಡಿಗೆ ಹೋದಾಗ ಡಿ.ಎಲ್.ಎನ್. ಆ ವಿದ್ಯಾರ್ಥಿಯು ಸಲ್ಲಿಸಿದ್ದ ಅರ್ಜಿಯ ಮೇಲೆ ಕಣ್ಣಾಡಿಸುತ್ತಿದ್ದರು. ಡಿ.ಎಲ್.ಎನ್. ಕೇಳಿದ್ದು ಎರಡೇ ಪ್ರಶ್ನೆ: ''ನಿಮ್ಮ ಮನೆಯಲ್ಲಿ ಎಷ್ಟು ಜನರಿದ್ದೀರಿ ?'' ''ಒಟ್ಟು ಏಳು ಜನ''; ''ಮನೆ ಬಾಡಿಗೆ ಎಷ್ಟು ಕೊಡುತ್ತೀರಿ ?'' ''ತಿಂಗಳಿಗೆ ಐದು ರೂಪಾಯಿ'' – ವಿದ್ಯಾರ್ಥಿಯ ಉತ್ತರ. ''ಸರಿ ಹೋಗಿ''. ಮತ್ತೊಬ್ಬ ವಿದ್ಯಾರ್ಥಿ ಕುರುಚಲು ಗಡ್ಡ ಬೆಳೆಸಿದ್ದ. ಆತ ಒಳಕ್ಕೆ ಹೋದೊಡನೆ ಒಬ್ಬ ಸದಸ್ಯರು ಪ್ರಶ್ನೆ ಕೇಳಲು ಮುಂದಾದರು: ''ಗಡ್ಡ ಯಾಕೆ ಬೆಳೆಸಿದ್ದೀರಿ ?'' ತಕ್ಷಣ ಡಿ.ಎಲ್.ಎನ್. ಅವರನ್ನು ತಡೆದರು; ''ತೀರ ವೈಯಕ್ತಿಕ ಪ್ರಶ್ನೆ'' ಎಂದರಂತೆ.

ಡಿ.ಎಲ್.ಎನ್.ರವರು ಗಳಿಸಿದ್ದ ಪಾಂಡಿತ್ಯಕ್ಕೆ ಹೋಲಿಸಿದಾಗ ಅವರು ಬರೆದದ್ದು ಬಹಳ ಕಡಿಮೆಯೆಂದು ಯಾರಿಗಾದರೂ ಅನಿಸೀತು. ಅವರಿಗೆ ತಮ್ಮದೇ ಆದ ಸಂಕೋಚವಿತ್ತು. ಒಮ್ಮೆ ಆಗತಾನೇ ಕೈಗೆ ಬಂದಿದ್ದ ದೊಡ್ಡ ಗಾತ್ರದ ಹೊಸ ಪುಸ್ತಕವೊಂದನ್ನು ಹಿಂದೆಮುಂದೆ ತಿರುಗಿಸಿ ನೋಡುತ್ತ ಹೇಳಿದ್ದರು, ''ಇಷ್ಟೊಂದು ದೊಡ್ಡ ದೊಡ್ಡ ಪುಸ್ತಕಗಳನ್ನು ಹೇಗಾದರೂ ಬರೆಯುತ್ತಾರಪ್ಪ! ನನ್ನಿಂದಂತೂ ಸಾಧ್ಯವಿಲ್ಲ. ನಾನು ನಾಲ್ಕು ಸಾಲು ಬರೆದರೆ ಮೂರು ಸಾಲು ಹೊಡೆದು ಹಾಕುತ್ತೇನೆ. ಒಮ್ಮೊಮ್ಮೆ ಒಂದು ಪುಟ ಬರೆದು ಮುಗಿಸಲು ದಿನಗಟ್ಟಲೆ ತೆಗೆದುಕೊಂಡಿರುವುದೂ ಉಂಟು'' ಎಂದು.

* * *

ಅಚ್ಚಾದ ಲೇಖನದಲ್ಲಿ ಒಂದೆರಡು ಮುದ್ರಣ ದೋಷಗಳಿರುವಂತಿದೆ. ಪು. ೧೯ರ, ೧೧ನೇ ಸಾಲಿನಲ್ಲಿ ''ಕನ್ನಡಕ್ಕಾಗಿ ಮಡಿದ ಹಿರಿಯರೊಬ್ಬರನ್ನು..'' ಎಂದಿರುವ ಕಡೆ 'ದುಡಿದ' – ಎಂದಿರಬೇಕಾಗಿತ್ತಲ್ಲವೇ ? ಅದೇ ಪುಟದ ಎರಡನೇ ಕಲಂನ ೨೮, ೨೯ನೇ ಸಾಲುಗಳಲ್ಲಿ ಹೊಯ್ಸಳ ಕರ್ನಾಟಕದವನು/ದವರು ಎಂದಿರುವುದು ಕ್ರಮವಾಗಿ ಹೊಯ್ಸಳ ಕರ್ನಾಟಕರವನು/ಕರ್ನಾಟಕರಾಗಿದ್ದುದು – ಎಂದಿರಬೇಕಾಗಿತ್ತೇನೋ.

ಮತ್ತೊಂದು ವಿಚಾರ : ತೀ. ನಂ. ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರೂ, ವಿಭಾಗ ಮುಖ್ಯಸ್ಥರೂ ಆಗಿದ್ದುದು ೧೯೫೯, ೬೦, ೬೧ ಈ ಮೂರು ವರ್ಷಗಳಲ್ಲಿ. ೧೯೫೯ರಲ್ಲಿ ಕನ್ನಡ ಎಂ.ಎ. ಪ್ರಥಮ ರ್‍ಯಾಂಕ್ ಪಡೆದ ಎಂ. ವಿ. ಶ್ರೀನಿವಾಸಮೂರ್ತಿಯವರು ಹೊಯ್ಸಳ ಕರ್ನಾಟಕರಲ್ಲವಂತೆ. 'ಉಲುಚುಕಮ್ಮೆ' ಎಂಬ ಮತ್ತೊಂದು ಬ್ರಾಹ್ಮಣ ಒಳಪಂಗಡಕ್ಕೆ ಸೇರಿದವರಂತೆ. ೧೯೬೦ರಲ್ಲಿ ಪ್ರಥಮ ರ್‍ಯಾಂಕ್ ಪಡೆದ ರಾಘವೇಂದ್ರ ಭಟ್ಟ ಎನ್ನುವವರು ಮಾಧ್ವ ವಿದ್ಯಾರ್ಥಿನಿಲಯದಲ್ಲಿ ಊಟ ವಸತಿ ಪಡೆದಿದ್ದುದರಿಂದ ಅವರು ಮಾಧ್ವ ಬ್ರಾಹ್ಮಣರಾಗಿದ್ದಿರಬೇಕು. ೧೯೬೧ರಲ್ಲಿ ಪ್ರಥಮ ರ್‍ಯಾಂಕ್ ಪಡೆದವರು ಸಿ. ಪಿ. ಕೃಷ್ಣಕುಮಾರ್ (ಸಿ.ಪಿ.ಕೆ.). ಪ್ರಾಯಶಃ ರಾಜು ಅವರಿಗೆ ದೊರೆತ ಮಾಹಿತಿಯ ದೋಷವಿರಬಹುದು. ಒಂದು ವೇಳೆ ಇವರಲ್ಲಿ ಯಾರಾದರೂ ಹೊಯ್ಸಳ ಕರ್ನಾಟಕರಾಗಿದ್ದರೂ ಸಹ, ಸದರಿ ವಿದ್ಯಾರ್ಥಿಯು ಪ್ರಥಮ ರ್‍ಯಾಂಕ್ ಪಡೆದುದು ಮತ್ತು 'ತೀ.ನಂ.ಶ್ರೀ. ಅವರು ಹೊಯ್ಸಳ ಕರ್ನಾಟಕರಾಗಿ ಇದ್ದುದ್ದು ಆಕಸ್ಮಿಕವೇ ?' ಎಂದು ಕೇಳುವವರಿಗೆ ಉತ್ತರವೆಲ್ಲಿದೆ ?

*ಬೆಂಗಳೂರು* **ಕೆ. ಎಲ್. ಗೋಪಾಲಕೃಷ್ಣಯ್ಯ**

## ಪ್ರೊ|| ರಾಮದಾಸ್

೭೦ರ ದಶಕದಲ್ಲಿ ಪ್ರೊ|| ಕೆ. ರಾಮದಾಸ್ ಯುವರಾಜ ಕಾಲೇಜಿನಲ್ಲಿ ನನ್ನ ಗುರುಗಳೂ ಆಗಿದ್ದರು. ಪಾಠ ಮಾಡುವಾಗ ಕತ್ತೆತ್ತಿ, ಎದೆಯುಬ್ಬಿಸಿ, ಗಟ್ಟಿ ಧ್ವನಿಯಲ್ಲಿ ಆಕರ್ಷಕವಾಗಿ ಅವರು ಕಂಡುಬರುತ್ತಿದ್ದರು. ಅವರ ನಿವೃತ್ತಿಯ ನಂತರ ಹಲವು ಕಾರ್ಯಕ್ರಮಗಳಲ್ಲಿ ಅವರನ್ನು ಭೇಟಿಯಾದಾಗ 'ನೀವು ನನ್ನ ಗುರುಗಳು' ಎಂದೇ ಹೇಳುತ್ತಿದ್ದೆ. ಅವರು ನಸುನಕ್ಕು ಆತ್ಮೀಯವಾಗಿ ಮಾತನಾಡಿಸುತ್ತಿದ್ದರು.

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

## ಪ್ರಾಣಾಯಾಮ

ಶ್ವಾಸದ ಮೇಲೆ ಧ್ಯಾಸ ಇಡುವುದರ ಮೂಲಕ ಮನೋನಿಗ್ರಹ ಸಾಧ್ಯವೆ ? ಏಕಾಗ್ರತೆ ಹೊಂದುವುದು ಹೇಗೆ ? ಕುಂಡಲಿನಿ ಎಂದರೆ ಏನು ? ಈ ಪ್ರಶ್ನೆಗಳು ಎಲ್ಲೆಲ್ಲೂ ಕೇಳಿ ಬರುತ್ತವೆ. ಪ್ರಾಣಚೈತನ್ಯವೇ ಆದ ಶ್ವಾಸವು ಮನುಜರಲ್ಲಿ ಒಮ್ಮೆ ಬಹಿರ್ಮುಖಗೊಂಡು ನಂತರ ಅಂತರ್ಮುಖವಾಗಿ ಯಂತ್ರದಂತೆ ಸದಾ ಚಲಿಸುತ್ತಲೇ ಇರುತ್ತದೆ. ಈ ವಿಧ ಚಲಿಸುತ್ತಿರುವ ಶ್ವಾಸದ ಮೇಲೆ ಧ್ಯಾಸವಿಡುವುದರಿಂದ ಮನಸ್ಸು ಸಹ ಅದರ ಜೊತೆ ಚಲಿಸುತ್ತಲೇ ಇರುತ್ತದೆ ! ಅಂದ ಬಳಿಕ ಮನಸ್ಸು ನಿಲ್ಲುವುದಾದರೂ ಹೇಗೆ ?

ಮನಸ್ಸು ಎಂಬುದು ಕೇವಲ ಸಂಕಲ್ಪಶಕ್ತಿ. ಅದರ ಜೊತೆ ಶ್ವಾಸ, ದೃಷ್ಟಿ, ಒಂದಕ್ಕೊಂದು ಸಂಬಂಧ ಹೊಂದಿಯೇ ಇರುತ್ತವೆ. ಮನಸ್ಸೇ ಬೇರೆ ಶ್ವಾಸವೇ ಬೇರೆ ಅಲ್ಲ. ಶ್ವಾಸವು ಮನಸ್ಸಿನ ಅವಿಭಾಜ್ಯ ಅಂಗವೇ ಆಗಿರುತ್ತದೆ. ಮನಸ್ಸಿನ ಹಿಂದೆ ಶ್ವಾಸವೇ ವಿನಾ ಶ್ವಾಸದ ಹಿಂದೆ ಮನಸ್ಸಲ್ಲ. ಮನಸ್ಸಿನ ದ್ವಾರಾ ಶ್ವಾಸವನ್ನು ನಿಯಂತ್ರಿಸಬಹುದು. ಆದರೆ ಶ್ವಾಸದ ಮೂಲಕ ಮನಸ್ಸನ್ನು ನಿಯಂತ್ರಣಕ್ಕೆ ತರಲು ಸಾಧ್ಯವೇ ಇಲ್ಲ. ಹೀಗಿರುವಾಗ ಶ್ವಾಸದ ಹಿಂದೆ ಮನಸ್ಸನ್ನು ಹರಿಯ ಬಿಟ್ಟರೆ ಆದರೆ ಅದು ಆತನನ್ನು ಒಂದು ಬಗೆಯ ನಿಶೆಯ ನಿದ್ರೆಯತ್ತ ಕೊಂಡುಹೋಗುತ್ತದೆ. ಮನಸ್ಸು ಹೇಗೆ ಓಡುವುದೋ ಅದರ ಜೊತೆ ದೃಷ್ಟಿಯೂ ಓಡುತ್ತದೆ. ಯಾವಾಗ ಈ ಮನೋಲಕ್ಷ್ಯಗಳು ಕೂಡುವವೋ ಆ ಕೂಡಲೆ ದೇಹದ ಗತಾನುಗತ ಶ್ವಾಸವು ತಾನು ತಾನೇ ಅವುಗಳ ಜೊತೆ ಸೇರಿ ನಿಲ್ಲುತ್ತದೆ. ಆಗಲೇ ಮನಸ್ಸಿಗೆ ನಿಶ್ಚಲತ್ವ ಉಂಟಾಗುತ್ತದೆ. ಇದೇ ಏಕಾಗ್ರತೆ. ಮನಸ್ಸು ತನ್ನ ಉದ್ಭವ ಸ್ಥಾನವೇ ಆದ ಭ್ರುವೋರ್ಮಧ್ಯದ 'ತ್ರಿಪುಟಿ' ಸ್ಥಾನದಲ್ಲಿ ಮನಸ್ಸು, ದೃಷ್ಟಿ, ಶ್ವಾಸ ಈ ಮೂರು ಸಮಾನವಾಗಿ ಕೂಡುವುದೇ ಏಕಾಗ್ರತೆ. ಈ ಮೂರರ ಕೂಟದಲ್ಲಿ ಯಾವುದೇ ಒಂದು ಕದಲಿದರೂ ಏಕಾಗ್ರತೆ ಅಸಂಭವ. ಇದೇ ಯೋಗ.

ಮನಸ್ಸು ತನ್ನ ಉದ್ಭವ ಸ್ಥಾನವೇ ಆದ ಭ್ರುವೋರ್ಮಧ್ಯದಲ್ಲಿ ಮಾತ್ರ ನೆಲೆಗೊಂಡು ನಿಶ್ಚಲವಾಗುತ್ತದೆಯೇ ವಿನಾ ಬೇರೆಲ್ಲಿಯೂ ನಿಶ್ಚಲತೆ ಹೊಂದುವುದಿಲ್ಲ. ಏಕತ್ವದಿಂದ ಶಾಂತಿ ಹೊಂದಿದ ಮನಸ್ಸೇ ಮುಂದೆ ತನ್ನ ಉಸಿರಾಟದ ಕೋಶವನ್ನು ತೊರೆದು ಅಂತರಂಗದ ಪ್ರಾಣ ತರಂಗದೊಡನೆ ಸೇರಿ ಮೇಲೆ ಏರಿ ಬುದ್ಧಿ ಸ್ಥಾನವನ್ನು ತಲುಪಿ ಮುಂದೆ ಜ್ಞಾನವಾಹಿನಿಯಾಗಿ ಪರಿವರ್ತನೆ ಹೊಂದುತ್ತದೆ. ಈ ಉಸಿರಾಟವು ದೇಹೇಂದ್ರಿಯಗಳ ಜೊತೆ ವ್ಯವಹರಿಸುವ ಮನಸ್ಸಿಗೆ ಮಾತ್ರ ಸೀಮಿತ. ಶಿರೋ ಅಂತರಾಳದಲ್ಲಿ ಈ ಶ್ವಾಸಕ್ಕೆ ಸ್ಥಾನವೇ ಇಲ್ಲ. ಅಲ್ಲಿ ಪ್ರಾಣವು ತರಂಗವಾಗಿ ವ್ಯವಹರಿಸುತ್ತದೆ. ಹೀಗಿರುವಾಗ ಶ್ವಾಸವು ಮೇಲಕ್ಕೇರಿ ಬ್ರಹ್ಮಕಪಾಲವನ್ನು ತಲುಪಿ ಅಲ್ಲಿ ಕುಂಡಲಿನಿಯನ್ನು ಜಾಗೃತಗೊಳಿಸಬೇಕೆಂಬ ಬೋಧನೆಯು ಹುಚ್ಚು ಕಲ್ಪನೆ. ಕುಂಡಲಿನಿ... ಕುಂಡಲಿನಿ... ಎಂದು ಹೇಳಿರುವುದು ಒಂದು ಭ್ರಮೆ. ಅದು ಒಂದು ಶಬ್ದ ಮಾತ್ರ. ಇದನ್ನು ಕಂಡವರೇ ಇಲ್ಲ. ನಿರೂಪಿಸುವವರು ಮೊದಲೇ ಇಲ್ಲ. ಕುಂಡಲಿನಿಯನ್ನು ಜಾಗೃತಗೊಳಿಸಬೇಕೆಂಬುದು ಒಂದು ಸುಳ್ಳು. ಇದು ಕೇವಲ ಮನೋಭ್ರಮೆ.

*ಹಂಪಿ* **ಸದಾಶಿವಯೋಗಿ**

## ಪರ್ಯಾಯ ಕೃಷಿಮಾಧ್ಯಮ ಕೇಂದ್ರ, ಧಾರವಾಡ
## ಎರಡು ವಿಭಾಗಗಳಲ್ಲಿ ಪ್ರಶಸ್ತಿ

ಕೃಷಿಕರೇ ಬರೆದ ಲೇಖನಗಳು ಹಾಗೂ ಮುಕ್ತ ವಿಭಾಗ. ಎರಡನೆಯದರಲ್ಲಿ ಕೃಷಿಕರೇತರರೂ ಭಾಗವಹಿಸಬಹುದಾಗಿದೆ. ಕನ್ನಡದಲ್ಲಿ ಅರ್ಥಪೂರ್ಣ ಕೃಷಿ ಪತ್ರಿಕೋದ್ಯಮಕ್ಕೆ ಉತ್ತೇಜನ ನೀಡುವುದಕ್ಕಾಗಿ ಈ ಪ್ರಶಸ್ತಿ. ಆಸಕ್ತರು ಸೆಪ್ಟೆಂಬರ್ ೨೦೦೬ರಿಂದ ಆಗಸ್ಟ್ ೨೦೦೭ರ ನಡುವೆ ಯಾವುದೇ ಪತ್ರಿಕೆ ಅಥವಾ ನಿಯತಕಾಲಿಕದಲ್ಲಿ ಪ್ರಕಟಗೊಂಡ ಕೃಷಿಕಪರ ಬರಹವನ್ನು ಕಳುಹಿಸಿಕೊಡಲು ಕೋರಲಾಗಿದೆ. ಒಬ್ಬರು ಗರಿಷ್ಠ ಎರಡು ಲೇಖನಗಳನ್ನು ಕಳುಹಿಸಬಹುದು. ಯಾವ ವಿಭಾಗಕ್ಕೆ ಪ್ರವೇಶ ಎಂಬುದನ್ನು ನಮೂದಿಸಬೇಕು. ಪೂರ್ಣ ವಿಳಾಸ ಹಾಗೂ ಉದ್ಯೋಗದ ವಿವರ ಬರೆಯುವುದು ಅಗತ್ಯ. ಪ್ರವೇಶದೊಂದಿಗೆ ಹತ್ತು ರೂಪಾಯಿ ಅಂಚೆಚೀಟಿ ಕಳುಹಿಸಲು ಕೋರಿದೆ. ಪ್ರವೇಶ ಸ್ವೀಕರಿಸಲು ಕೊನೆಯ ದಿನಾಂಕ : ಸೆಪ್ಟೆಂಬರ್ ೧೦, ೨೦೦೭.

ವಿಳಾಸ : ಅನಿತಾ ಪೈಲೂರು, ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ, ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮.

ಹಿಂದೆ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ಶ್ರೀ ವೈ. ಕೆ. ಸಬರ್ವಾಲ್ ಅವರು ತಮ್ಮ ಅಧಿಕಾರದ ಅವಧಿಯಲ್ಲಿ ತಮ್ಮ ಮಕ್ಕಳ ವ್ಯಾಪಾರ-ವಹಿವಾಟು ಉತ್ತಮಗೊಳ್ಳಲು ಅನುಕೂಲಕರವಾದ ತೀರ್ಪು ಕೊಟ್ಟಿದ್ದುದು ಭ್ರಷ್ಟಾಚಾರ ಎನಿಸುತ್ತದೆ ಎಂದು ಕೇಂದ್ರ ಸರ್ಕಾರದ ಮಾಜಿ ಕಾನೂನು ಸಚಿವ ಶ್ರೀ ಶಾಂತಿಭೂಷಣ್ ಆಪಾದಿಸಿದ್ದಾರೆ. ಅವರಲ್ಲದೆ ಇನ್ನೂ ಹಲವು ಸದಸ್ಯರನ್ನೊಳಗೊಂಡ ಸಂಸ್ಥೆಯೊಂದು ದಾಖಲೆಗಳ ಸಮೇತ ಇದನ್ನು ಬಹಿರಂಗಪಡಿಸಿದೆ ಎನ್ನಲಾಗಿದೆ. ಆಸಕ್ತರು ಆಗಸ್ಟ್ ೧೨-೧೮, ೨೦೦೭ರ 'ತೆಹೆಲ್ಕಾ' ವಾರಪತ್ರಿಕೆಯನ್ನು ನೋಡಬಹುದು. ಉನ್ನತ ಹುದ್ದೆಗಳಲ್ಲಿ ಇಂತಹ ಅವ್ಯವಹಾರಗಳಿವೆಯೇ ಎಂದು ಅಚ್ಚರಿಪಡಬೇಕಾದ್ದಿಲ್ಲ ಎಂಬುದಕ್ಕೆ ಇದು ಪುರಾವೆ.

೩ನೇ ಪುಟದಿಂದ (ಈ ತಿಂಗಳು)

ಬೆಂಗಳೂರಿನ ಕೊಳದ ಮಠದ ಸ್ವಾಮಿಗಳಂತೆ. (ಅದನ್ನು ಕೊಳಕು ಮಠ ಎಂದು ತಪ್ಪಾಗಿ ಓದಿಕೊಳ್ಳಬಾರದು.) ಅವರ ಪ್ರಕಾರ ದೇವಸ್ಥಾನಗಳ ಜಮೀನು ರೈತರಿಗೆ ಸೇರಿಹೋಗಿ ಬಹಳ ವಿಪತ್ತು ಉಂಟಾಗಿದೆಯಾದ್ದರಿಂದ ಅದನ್ನೆಲ್ಲಾ ಮತ್ತೆ ದೇವಸ್ಥಾನಗಳಿಗೆ (ಮತ್ತು ಮಠಗಳಿಗೆ) ಹಿಂದಿರುಗಿಸಬೇಕು. ಸಮಾಜಕ್ಕೆ ಮಾರ್ಗದರ್ಶನ ಮಾಡಲು ಇಂತಹ ಸೂಕ್ಷ್ಮಮತಿ ಸ್ವಾಮಿಗಳಿದ್ದರೆ ಇನ್ನಷ್ಟು ರೈತರ ಆತ್ಮಹತ್ಯೆಗಳು ಘಟಿಸಿಯಾವು. ಹಿಂದಕ್ಕೆ ಉರುಳುವ ಚಕ್ರಗಳನ್ನು ಸಂಶೋಧಿಸುವ ಚತುರತೆ ಇರುವ ಜನರನ್ನು ಸಮಾಜ ಕಂಟಕಕಾರರೆಂದು ಗುರುತಿಸಬೇಕಾದ್ದು ಅವಶ್ಯಕ. ಈ ಸ್ವಾಮಿ ಅಂಥವರು.

* * *

ಅಮೆರಿಕಾದ ಡಾಲರ್ ಮತ್ತು ನಮ್ಮ ದೇಶದ ರೂಪಾಯಿನ ನಡುವಣ ಅಂತರ ಕಡಿಮೆಯಾಗಿರುವುದು ನೋವಿನ ಸಂಗತಿಯೆಂದು ಪರಿಗಣಿಸುವ ಮಹಾನ್ ದೇಶಭಕ್ತರು ನಮ್ಮಲ್ಲಿದ್ದಾರೆ. ಮಾಹಿತಿ ತಂತ್ರಜ್ಞಾನದ ಹೆಸರಿನಲ್ಲಿ ಅವರಲ್ಲಿ ಅನೇಕ ಮಂದಿ ''ಐ. ಟಿ. ಕೂಲಿಯಾಳುಗಳು.'' ಹಾಗೆಂದು ಖ್ಯಾತವಿಜ್ಞಾನಿ ಡಾ|| ಸಿ.ಎನ್.ಆರ್. ರಾವ್ ಸಂಬೋಧಿಸುವುದುಂಟು. ಐ. ಟಿ. ದೊರೆಗಳ ಲಾಭ ಕಡಿಮೆಯಾಗುತ್ತದೆ ಎಂಬ ಕಾರಣಕ್ಕಾಗಿ ರೂಪಾಯಿ ಸದಾ ಅಪಮೌಲ್ಯ ಹೊಂದುತ್ತಿರಬೇಕೆಂದು ವಾದಿಸುವುದು ಆರ್ಥಿಕತಜ್ಞರ ಪದ್ಧತಿಯಲ್ಲ. ನಮ್ಮ ರಾಜ್ಯದ ಮುಖ್ಯಮಂತ್ರಿಗಳು ಈ ಸಂದರ್ಭದಲ್ಲಿ ಕೇಂದ್ರ ಅರ್ಥ ಸಚಿವರಿಗೆ ಮನವಿಯೊಂದನ್ನು ಸಲ್ಲಿಸಿದ್ದಾರೆ : ಲಾಭ ಕುಸಿಯುತ್ತಿರುವುದರಿಂದ ಐ.ಟಿ. ಕಂಪನಿಗಳಿಗೆ ಇನ್ನೂ ಐದು ವರ್ಷ ತೆರಿಗೆ ವಿಧಿಸಬಾರದು ಎಂದು. ಎಷ್ಟು ಮೃದು ಹೃದಯ ನಮ್ಮ ಕುಮಾರಣ್ಣನವರದು! ರೈತರಿಗೆ ಸಹಾಯಧನ ಮೊಟಕುಗೊಳಿಸಬೇಕೆಂದು ಅಹ್ಲುವಾಲಿಯ ಹೇಳುವಾಗ ನಮ್ಮ ಮುಖ್ಯಮಂತ್ರಿಗಳ ಹೃದಯ ಮುದುರಿಕೊಂಡಿರುತ್ತದೆ. ನಾರಾಯಣ ಮೂರ್ತಿ ಎಂಬ ಸೂರ್ಯ ಉದಯಿಸಬೇಕೆಂದಾಗ ಅದು ತೆರೆದುಕೊಳ್ಳುತ್ತದೆ.

* * *

ಮುಂಬೈನಲ್ಲಿ ಸರಣಿ ಬಾಂಬುಗಳನ್ನು ಸ್ಫೋಟಿಸಿ ಸುಮಾರು ಒಂದು ಸಾವಿರ ಮಂದಿಯನ್ನು ಕೊಂದಿದ್ದು, ಕೋಟಿಗಟ್ಟಲೆ ಆಸ್ತಿಯನ್ನು ನಾಶಮಾಡಿದ್ದು, ಲಕ್ಷಗಟ್ಟಲೆ ಜನರ ಜೀವನವನ್ನು ಅಸ್ತವ್ಯಸ್ತಗೊಳಿಸಿದ್ದು, ಇವೆಲ್ಲಾ ಕೆಲವರ ಪ್ರಕಾರ ಮಾಮೂಲಿ ಪ್ರಕರಣಗಳು, ಅಷ್ಟೆ. ಈ ಸ್ಫೋಟಗಳ ಕೆಲವೇ ದಿನಗಳ ಮುಂಚೆ ಸಂಜಯ ದತ್ ಎಂಬ ಚಲನಚಿತ್ರ ನಟ ತನ್ನ ಮನೆಯಿಂದ ದುಬೈನಲ್ಲಿದ್ದ ಅನೀಸ್ ಇಬ್ರಾಹಿಂ ಎಂಬುವವನಿಗೆ ಏಳು ಬಾರಿ ದೂರವಾಣಿ ಕರೆಗಳನ್ನು ಮಾಡಿದ್ದ. ಅದಾವ ಪ್ರೇಮದ ಸಂಗತಿಗಳನ್ನು ತುರ್ತಾಗಿ ಚರ್ಚಿಸಬೇಕಾಗಿತ್ತೋ ತಿಳಿದವರಾರು! ಅಂತೂ ಈ ಅನೀಸ್ ಎಂಬಾತ ಮುಂಬೈ ಸ್ಫೋಟಗಳ ಸಂಯೋಜಕರಲ್ಲಿ ಒಬ್ಬನಾಗಿದ್ದನೆಂಬುದು ಖಚಿತ. ಮೋನಿಕಾ ಬೇಡಿ ಎಂಬಾಕೆಗೆ ಬೇಡಿ ಕಳಚಿದ್ದು ಕೂಡ ವಿಪರ್ಯಾಸವೆಂದು ಖಿನ್ನರಾಗುವ ಬದಲು ನಮ್ಮ ಕೆಲವು ಮಾಧ್ಯಮ ವೀರರು ಸಂಜಯ್ ದತ್‌ಗೆ ಕಾರಾಗೃಹ ಶಿಕ್ಷೆ ವಿಧಿಸಲಾದ್ದು ಏನೋ ಅಪರಾಧ, ಅಪಚಾರ, ಎಂದು ಅಬ್ಬರದ ಭಾವುಕ ಪ್ರಚಾರದಲ್ಲಿ ತೊಡಗಿದ್ದಾರೆ. ಮೋನಿಕಾ ಎಂಬಾಕೆ ಕುಖ್ಯಾತ ಅಪರಾಧಿ ಅಬು ಸಲೀಂ ಜೊತೆ ಇದ್ದದ್ದು ಸುಳ್ಳೆ ಮತ್ತು ಅವಳಿಗೆ ನಕಲಿ ಪಾಸ್‌ಪೋರ್ಟ್ ಒಂದು ಎಲ್ಲೋ ಆಕಾಶದಿಂದ ಬಂದು ಬೀಳುತ್ತದೆಯೆ? ಅಥವಾ ಅವಳ ಅರಿವಿಲ್ಲದೆಯೇ ಅದು ಅವಳಿಗೆ ದೊರೆತುಬಿಟ್ಟಿತೆ? ಹಾಗಿದ್ದರೆ ಅಂಥವಳು ಬಿಡುಗಡೆಯಾಗಿದ್ದು ಹೇಗೆ? ಈ ಮರ್ಮವನ್ನು ಭೇದಿಸಲು ಮಾಧ್ಯಮಗಳು ತವಕಿಸಲಿಲ್ಲ; ಬದಲಾಗಿ, ಅವಳ ಹಳ್ಳಿಯ ಸಂಭ್ರಮ, ಅವಳು ಮತ್ತೆ ತಾರೆಯಾಗಿ ಮಿನುಗುವುದರ ಸಾಧ್ಯತೆ, ಅವಳು ಇಷ್ಟು ದಿನ ಮಾನಸಿಕ ವ್ಯಥೆ ಅನುಭವಿಸಿದ್ದು, ಇವನ್ನೆಲ್ಲಾ ವಿವರವಾಗಿ ಚಿತ್ರಿಸಲು ಮೀಸಲಾದುವು. ನಮ್ಮ ದೇಶಕ್ಕೆ ಇದು ನಾಚಿಕೆಗೇಡಿನ ವಿಷಯ. ಕಪ್ಪು ಹಣದ ಪ್ರಾಬಲ್ಯದಿಂದ ಸೊಕ್ಕಿರುವ ಅಪರಾಧಿಗಳ, ದ್ರೋಹಿಗಳ, ಹಿಡಿತಕ್ಕೆ ಸಿಲುಕದಿರಬೇಕೆಂಬ ಕನಿಷ್ಠ ನೈತಿಕ ಪ್ರಜ್ಞೆ ಇಲ್ಲದ ಮೋನಿಕಾ, ಸಂಜಯ್ ಮುಂತಾದವರನ್ನು ತೆರೆಯ ಮೇಲೆ ತೋರಿಸಬಾರದೆಂಬ ಪ್ರಜ್ಞೆ ಸಹ ನಮಗಿಲ್ಲವಲ್ಲಾ ಎಂದು ಖೇದವಾಗುತ್ತದೆ. ಅಂತಹ ಕಪ್ಪು ಹಣದ ದೊರೆಗಳ ಮುಂದೆ ಕುಣಿದುಬರಲು ನಮ್ಮ ದೊಡ್ಡ ತಾರೆಯರು ತುದಿಗಾಲಲ್ಲಿ ನಿಂತಿರುತ್ತಾರೆ, ಲಂಡನ್ನಿಗೆ ಹೋಗಿ ಅಲ್ಲಿಂದ ದುಬೈಗೆ ಹೋಗುತ್ತಾರೆ; ಅದೇ ಮಾರ್ಗದಲ್ಲಿ ಹಿಂದಿರುಗುತ್ತಾರೆ. ಭೂಗತ ಪಾತಕಿಗಳೊಡನೆ ಸಂಬಂಧವಿರಿಸಿಕೊಂಡಿರುವವರು ಸ್ವತಃ ಪಾತಕಿಗಳೇ ಎಂದು ಗಣನೆಗೆ ಬರಬೇಕಾದ್ದು ಅವಶ್ಯಕ.

ಈ ರೀತಿಯ ಸಂಬಂಧ ಕುದುರುವುದು, ಅನಿವಾರ್ಯವಾಗುವುದು ಹೇಗೆ? ಮುಂಬೈನ ಹಿಂದಿ ಚಲನಚಿತ್ರಗಳ ನಿರ್ಮಾಣಕ್ಕೆ ಹಣ ತೊಡಗಿಸುವ ಧಂಧೆಯಲ್ಲಿ ಕೆಲವು ಪಾತಕಿಗಳಿದ್ದಾರೆ, ಎಂಬ ಕಾರಣದಿಂದ. ಕೋಟಿಗಟ್ಟಲೆ ಹಣ ಪಡೆಯುವ ನಮ್ಮ ಕೆಲವು ಚಲನಚಿತ್ರ 'ಕಲಾವಿದರು' ಭೂಗತರ ಮತ್ತು ಭೂಗಳ್ಳ ಅಪರಾಧಿಗಳ ಹಿಡಿತಕ್ಕೆ ಬರುವುದು ಹಾಗೆ. ಅಂತಹ ಸಂಬಂಧವಿದ್ದಾಗ ಸಂಜಯ ದತ್‌ನ ಮನೆಯಲ್ಲಿ ಇಂತಿಷ್ಟು ಮಾರಕಾಸ್ತ್ರಗಳನ್ನು ಬಚ್ಚಿಡಬೇಕೆಂದು ಆಗ್ರಹಿಸುವುದು ದಾವೂದ್ ಇಬ್ರಾಹಿಂ ಸಹಚರರಿಗೆ ಸಾಧ್ಯವಾಗುತ್ತದೆ. ಈ ದೊಡ್ಡ ಮತ್ತು ಖ್ಯಾತ ನಟರು ಮಿಂಚುತ್ತಾರೆ, ಬೆಳ್ಳಿತೆರೆಯಲ್ಲಿ ಗಾಂಧಿವಾದಿಗಳಾಗುತ್ತಾರೆ, ದೊಡ್ಡ ತಿಲಕ ಧರಿಸಿ ದೇವಸ್ಥಾನಗಳಿಗೆ ಹೋಗುತ್ತಾರೆ ಮತ್ತು ತಮಗೆ ಶಿಕ್ಷೆ ಅತಿಯಾಯಿತೆಂದು ಕಣ್ಣೀರು ಸುರಿಸುತ್ತಾರೆ. ಆ ಕಲಾವಿದರ ಪಾದಧೂಳಿಯಿಂದ ಪಾವನರಾಗುವ ಭ್ರಮೆ ಮತ್ತು ಮೂರ್ಖತನದಿಂದ ತೊಳಲುವವರು ಅವರ ಪರವಾಗಿ ವಕಾಲತ್ತು ವಹಿಸಿ ಏನೋ ಪ್ರಮಾದವಾಯಿತೆಂದು ಹೇಸಿಗೆಯ ಹುಯಿಲೆಬ್ಬಿಸುತ್ತಾರೆ. ಸಂಜಯ ದತ್‌ಗೆ ಕಾರಾಗೃಹದಲ್ಲೂ ಕ್ಯಾಮೆರಾ ಸೇವೆ ಸಲ್ಲಿಸಲು ಮಾಧ್ಯಮದ ಭಂಟರಿರುತ್ತಾರೆ ಮತ್ತು ಅದನ್ನೆಲ್ಲಾ ವಿಕಾರವಾಗಿ ವಿಜೃಂಭಿಸಿ ತೋರಿಸುವ ಟಿ.ವಿ. ಚಾನೆಲ್‌ಗಳಿರುತ್ತವೆ. ಇವೆಲ್ಲಾ ಅಪರಾಧದ ಕೂಪದಲ್ಲೇ ಮೀಯುತ್ತಿರುವ ಕ್ರಿಮಿಗಳು. ಇಂತಹ ಭೀಕರ ಹಿನ್ನೆಲೆಯುಳ್ಳ ಸಂಜಯ ದತ್‌ಗೆ ಕೇಂದ್ರ ಸಚಿವ ಕಪಿಲ್ ಸಿಬಲ್ ಕೂಡ ಸಾಂತ್ವನ ಹೇಳುವವರೇ! ''ನಮ್ಮ ಪಕ್ಷಕ್ಕೆ ಸೇರಿದ ಒಂದು ಕುಟುಂಬದ ರಕ್ಷಣೆಗೆ ಧಾವಿಸುವುದು ನಮ್ಮ ಕರ್ತವ್ಯ'' ಎಂದು ಸಿಬಲ್ ಹೂಂಕರಿಸಿದ್ದಾರೆ. ಅವರ ರಕ್ಷಣೆ ಸಿಗುವುದು ಇಂತಹವರಿಗೆ ಮಾತ್ರವೇ ಏನು?

* * *

ನಮ್ಮ ಸ್ವಾತಂತ್ರ್ಯದ ಅರವತ್ತನೆಯ ವರ್ಷದಲ್ಲಿ ಏನೆಲ್ಲಾ ನಡೆಯುತ್ತಿದೆಯೆಂದು ವಿಸ್ಮಿತರಾಗುತ್ತೇವೆ, ಘಾಸಿಗೊಳ್ಳುತ್ತೇವೆ. ನಮ್ಮ ರಾಜ್ಯದಲ್ಲಂತೂ ಜನಪರ ಚಳುವಳಿಗಳನ್ನೆಲ್ಲಾ ನಕ್ಸಲೀಯ ಚಟುವಟಿಕೆಗಳು ಎಂದು ಘೋಷಿಸಿಬಿಡುವ ಕಾಲ ಸನ್ನಿಹಿತವಾಗುತ್ತಿದೆ. ಅದರ ಬಗ್ಗೆ ನಮ್ಮ ಗೃಹಮಂತ್ರಿಗಳಿಗೆ ಬೇಸರವಿಲ್ಲವೆ? ಸ್ವಾತಂತ್ರ್ಯೋತ್ಸವ ಸಂದರ್ಭದ ಭಾಷಣದಲ್ಲಿ ಮುಖ್ಯಮಂತ್ರಿಯವರು ನಕ್ಸಲೀಯರೊಡನೆ ತಾವು ಸಂವಾದಕ್ಕೆ ಸಿದ್ಧವೆಂದು ಹೇಳಿದ್ದಾರೆ. ಇವರು ಹಾಗೆಂದು ಹೇಳಿದ ಕೂಡಲೇ ನಕ್ಸಲೀಯರು ಕಾಡಿನಿಂದ ಹೊರಬಂದು ವಿಧಾನಸೌಧದ ಮೆಟ್ಟಲನ್ನು ಹತ್ತುತ್ತಾರೆಯೆ? ಅದು ಅಸಂಭವ. ಸರ್ಕಾರಕ್ಕೆ ಎರಡು ಮಾರ್ಗಗಳಿವೆ : ಒಂದು, ಬಂಧಿತ ನಕ್ಸಲೀಯರೊಡನೆ ಸಂವಾದ ನಡೆಸುವುದು; ಅದರಿಂದ ಎಷ್ಟು ಪ್ರಯೋಜನವಿರಬಹುದೋ ತಿಳಿಯದು. ಇನ್ನೊಂದು, ಅವರೊಡನೆ ಸಂವಾದ ಮಾಡದೆಯೂ ಜನರ ಸಮಸ್ಯೆಗಳ ಪರಿಹಾರಕ್ಕೆ ಮುನ್ನಡೆಯುವುದು. ಜನರ ಸಮಸ್ಯೆಗಳನ್ನು ಎತ್ತಿಹೇಳುವ ಸಂಘಟನೆಗಳಿವೆ, ಅವುಗಳ ವಕ್ತಾರರಿದ್ದಾರೆ. ಅವರಿಗೆ ವಿನಾ ಕಾರಣ ಕಿರುಕುಳ ನೀಡುವ ಬದಲು ಮುಖ್ಯಮಂತ್ರಿಗಳು ಅವರ ಮನೆಗಳಿಗೆ ತೆರಳಿ ಒಂದು ವಾರ ತಂಗಲಿ, ಸನ್ನಿವೇಶವನ್ನು ಅರ್ಥಮಾಡಿಕೊಳ್ಳಲಿ, ಸಮಸ್ಯೆ ಬಗೆಹರಿಸಲಿ. ಅದಕ್ಕಿಂತಲೂ ಉತ್ತಮವಾದ ಸಂಧಾನ ಬೇರೊಂದಿರಲಾರದು.

* * *

ನಮ್ಮ ವಾರ್ಷಿಕ ಕನ್ನಡ ಸಾಹಿತ್ಯ ಸಮ್ಮೇಳನಗಳು ಮೆಲುಕು ಹಾಕುವ ಯಾಂತ್ರಿಕ ಜಾತ್ರೆಗಳಾಗಿವೆಯೆಂಬ ಆಪಾದನೆ ಇದೆ. ಹೇಳಿದ್ದನ್ನೇ ಹೇಳುವುದು, ಕೇಳಿದ್ದನ್ನೇ ಕೇಳುವುದು, ಅವೇ ನಿರ್ಣಯಗಳನ್ನು ಅಂಗೀಕರಿಸುವುದು, ಹಿಂದಿನ ನಿರ್ಣಯಗಳ ನೆನಪು ಅಳಿಸಿಹೋಗುವುದು, ಕನ್ನಡ-ಕರ್ನಾಟಕಗಳ ಶ್ರೇಯಸ್ಸನ್ನು ರಾಜಕೀಯ ವ್ಯಕ್ತಿಗಳು ಹಾರೈಸುವುದು, ಸಾಹಿತ್ಯ ಗೋಷ್ಠಿಗಳನ್ನು ಪುರಾತನ ರೂಪದಲ್ಲಿ ನಡೆಸುವುದು, ಇತ್ಯಾದಿಗಳನ್ನು ಹಲವರು ಟೀಕಿಸುತ್ತಿರುತ್ತಾರೆ. ಈ ಬಾರಿಯ ಉಡುಪಿ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಆಯ್ಕೆಯಾಗಿರುವ ಪ್ರೊ|| ಎಲ್. ಎಸ್. ಶೇಷಗಿರಿ ರಾವ್ ಅವರನ್ನು ಅಭಿನಂದಿಸುತ್ತಾ ಅವರ ನೇತೃತ್ವದಲ್ಲಿ ಸಮ್ಮೇಳನವು ಫಲಪ್ರದವಾಗಲೆಂದು ಆಶಿಸೋಣ, ಒಡಕಲಾಗುತ್ತಿರುವ ಕರ್ನಾಟಕವೆಂಬ ಸಂಸಾರವು ಒಗ್ಗೂಡಿ ಮುನ್ನಡೆಯಲು ಅವರ ಮಾರ್ಗದರ್ಶನ ಯಶಸ್ವಿಯಾಗಲೆಂದು ಆಶಿಸೋಣ.

* * *

ರಾಜ್ಯಪಾಲ ಚತುರ್ವೇದಿಯವರು ಈಗ ನಿರ್ಗಮಿಸಿದ್ದಾರೆ. ಅವರಿದ್ದಷ್ಟು ಕಾಲ ರಾಜಭವನವು ಪುಸ್ತಕ ಬಿಡುಗಡೆ, ಸಂಗೀತ ಸಂಜೆ ಮುಂತಾದ 'ಸಾಂಸ್ಕೃತಿಕ' ಚಟುವಟಿಕೆಗಳ ಕೇಂದ್ರವಾಗಿತ್ತು. ದೂರದರ್ಶನವಂತೂ ರಾಜಭವನವನ್ನು ಗುತ್ತಿಗೆಗೆ ಹಿಡಿದುಬಿಟ್ಟಿತ್ತು. ಅಲ್ಲಿಯ ಕಾರ್ಯಕ್ರಮಗಳಲ್ಲಿ ಜನಸಾಮಾನ್ಯರು ಭಾಗವಹಿಸುವ ಅವಕಾಶಗಳಿರಲಿಲ್ಲ. ಪ್ರತಿಷ್ಠಿತರೆನಿಸಿಕೊಂಡವರು, ಅಧಿಕಾರಿಗಳು ತುಂಬಿಕೊಂಡು ಮನರಂಜನೆ ಮಾಡಿಕೊಳ್ಳುತ್ತಿದ್ದರು. ಹೀಗೆ ಬೊಕ್ಕಸಕ್ಕೆ ಹೊರೆಯಾಗುವುದು ಇನ್ನು ನಿಲ್ಲಲೆಂದು ಆಗ್ರಹಿಸಬೇಕಾಗಿದೆ.

(signature)

ಮಾನವರಿದ್ದಾರೆ. ಒಟ್ಟಿನಲ್ಲಿ 'ಅಪರಾಧಗಳಿಗೆ ಪುರಸ್ಕಾರ, ಬಲಿಪಶುಗಳಿಗೆ ಶಿಕ್ಷೆ' ಇಂದಿನ ಕಾಲಧರ್ಮವಾದಂತಿದೆ. ಕನ್ನಡದ ನೆಲದಲ್ಲೂ ಇತ್ತೀಚೆಗೆ 'ಆನು ದೇವಾ ಹೊರಗಣವನು...' ಕೃತಿ ರಚಿಸಿದ ಜಯಪ್ರಕಾಶರಿಗೆ ಮಾಡಲಾದ ಅಪಚಾರವೂ ಇದೇ. ಈ ಘಟನೆಗಳು ನಡೆದ ಸಂದರ್ಭಗಳಲ್ಲೆಲ್ಲಾ ಆಯಾ ರಾಜ್ಯಗಳಲ್ಲಿ ಯಾವುದೇ ಸರ್ಕಾರ ವಿರಲಿ, ಅದು ಬಿ.ಜೆ.ಪಿ.ಯಾಗಿರಲಿ, ಅಥವಾ ಕಾಂಗ್ರೆಸ್ ಆಗಿರಲಿ 'ಅಪರಾಧಿಯನ್ನು ರಕ್ಷಿಸುವ, ಬಲಿಯಾದವರನ್ನು ಶಿಕ್ಷಿಸುವ' ಒಂದು ಸಿದ್ಧಸೂತ್ರವನ್ನು ಮಾಡಿಕೊಂಡಂತಿದೆ. ಮೌಢ್ಯ ಮತ್ತು ಹಿಂಸೆಗೆ ಪುರಸ್ಕಾರ ನೀಡುವ ಈ ಕ್ರಮ ಆರೋಗ್ಯಕರವಲ್ಲ.

ಸರ್ಕಾರ ಮತ್ತು ಕಾನೂನಿನ ಕಣ್ಣಿನಲ್ಲಿ 'ಅಪರಾಧಿ'ಗಳೆನಿಸಿಕೊಂಡವರೆಲ್ಲಾ ಮಾಡಿರುವ ಆರೋಪಿತ ಅಪರಾಧವೆಂದರೆ, ಜನರ ಧಾರ್ಮಿಕ ಭಾವನೆಗಳಿಗೆ ನೋವುಂಟು ಮಾಡಿದ್ದಾರೆಂಬುದೇ ಆಗಿದೆ. ಆದರೆ ಇಲ್ಲಿ 'ಜನರು' ಎಂದರೆ ಯಾರೆಂಬ ವಿಶ್ಲೇಷಣೆಯೂ ಅಗತ್ಯ. ಇಂತಹ 'ಜನರ' ಮನಸ್ಸಿಗೆ ನೋವುಂಟುಮಾಡುವುದರಿಂದ ತಮ್ಮ ಚುನಾವಣಾ ಬೊಕ್ಕಸಕ್ಕೆಷ್ಟು ನಷ್ಟ ಅಥವಾ ಲಾಭ, ಅದರಿಂದ ಯಾರ ಗಾದಿ ಅಲ್ಲಾಡುತ್ತದೆ ಅಥವಾ ಭದ್ರವಾಗುತ್ತದೆ, ಎಂಬ ಅಂಶಗಳೇ ಮುಖ್ಯವಾಗುತ್ತವೆ. ಇಂದಿನ ಈ ಗೂಂಡಾ ಸಂಸ್ಕೃತಿಯಲ್ಲಿ ಒಂದು ಗೂಂಡಾ ಪಡೆಯನ್ನು ಸೃಷ್ಟಿಸಿಕೊಂಡು ತಮ್ಮ ಧಾರ್ಮಿಕ ಭಾವನೆಗೆ ನೋವುಂಟಾಗಿದೆಯೆಂದು ಯಾರ ಮೇಲಾದರೂ ಹರಿಹಾಯಬಹುದಲ್ಲವೆ? ನಸ್ರೀನ್ ಮೇಲಿನ ಹಲ್ಲೆಯಿಂದಲೂ ಒಂದು ಜನವಿಭಾಗದ ಜನರ ಮನಸ್ಸಿಗೆ ನೋವಾಗಿದೆ ಎನ್ನುವುದಾದರೆ ಅದಕ್ಕೆ ಗಮನಕೊಡುವುದೂ ಸರ್ಕಾರದ ಜವಾಬ್ದಾರಿಯಲ್ಲವೆ? ತಸ್ಲೀಮಾ ನಸ್ರೀನ್ ಮೇಲೆ ನಡೆದ ಹಲ್ಲೆಯನ್ನು ಹೆಣ್ಣೊಬ್ಬಳ ಮೇಲೆ ನಡೆದ ಹಲ್ಲೆಯೆಂದು ವಿಶ್ಲೇಷಿಸಬೇಕಾಗಿಲ್ಲವಾದರೂ ಹೆಣ್ಣಾಗಿ ಸಾಂಪ್ರದಾಯಿಕ ರೀತಿಯಲ್ಲಿ ಬದುಕದೆ ಮುಸ್ಲಿಂ ಧರ್ಮದ ಬಗ್ಗೆ ಮಾತಾಡುತ್ತಾಳೆಂಬುದೇ ಧರ್ಮಾಂಧರಿಗೆ ನುಂಗಲಾರದ ತುತ್ತಾಗಿದೆ. ಬಾಬ್ರಿ ಮಸೀದಿಯ ಪತನದ ನಂತರ ಬಾಂಗ್ಲಾದೇಶದಲ್ಲಿ ನಡೆದ ಹಿಂದೂ ವಿರೋಧಿ ದೊಂಬಿಯನ್ನು ಕುರಿತು ತಸ್ಲೀಮಾ ಬರೆದ 'ಲಜ್ಜಾ' ಕಾದಂಬರಿಯ ಕಾಲದಿಂದ ಅವರು ವಿವಾದಾಸ್ಪದ ವ್ಯಕ್ತಿಯಾಗಿದ್ದವರು. ನಮ್ಮ ಕನ್ನಡದ ಸಂದರ್ಭದಲ್ಲೂ ಸಾರಾ ಅಬೂಬಕ್ಕರ್ ರವರು 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿ ಬರೆದ ನಂತರ ಅವರ ಮೇಲೆ ಹಲ್ಲೆ ಮಾಡಿದ ಮತಾಂಧರು ಹೇಳಿದ್ದೂ ಇದನ್ನೆ: 'ಬುರ್ಕಾ ಹಾಕಿಕೊಳ್ಳದ ನೀವು ಮುಸ್ಲಿಂ ಮಹಿಳೆಯಾಗುವುದಿಲ್ಲ, ಮುಸ್ಲಿಂ ವಸ್ತು ಕುರಿತು ಏಕೆ ಬರೆಯುತ್ತೀರಾ?' ಹಾಗಿರುವಾಗ ಸಾರಾ, ನಸ್ರೀನ್, ಯಾರೇ ಆಗಿರಲಿ ಅವರಿಗೆ ಕೊರಾನ್ ಧರ್ಮದ ಪ್ರಕಾರವೇ ಶಿಕ್ಷೆ ಕೊಡಬಹುದಾಗಿತ್ತು! ''ನಿನ್ನ ಮೇಲೆ ಯಾರಾದರೂ ಆಕ್ರಮಣ ಮಾಡಿದರೆ, ಅವರಿಗೆ ಅದೇ ರೀತಿ ಹಿಂತಿರುಗಿಸು'' ಎನ್ನುತ್ತದೆ ಕುರಾನ್. ಹಾಗಿರುವಾಗ, ನಸ್ರೀನ್‌ರ ಪುಸ್ತಕವನ್ನು ವಿರೋಧಿಸಲು ಅವರ ಪುಸ್ತಕವನ್ನು ವಿರೋಧಿಸಿ ಮತ್ತೊಂದು ಪುಸ್ತಕ ಬರೆಯಬಹುದಿತ್ತಲ್ಲ? ಇಷ್ಟಕ್ಕೂ ಸಾರಾ, ನಸ್ರೀನ್ ಮುಂತಾದವರು ಬೌದ್ಧಿಕ-ಸಾಮಾಜಿಕ ಚಿಂತನೆಗಳಿಗೆ ಸ್ವತಂತ್ರರಲ್ಲ, ಅವರನ್ನು ಅಚಾರಿತ್ರಿಕ ಮತಧರ್ಮದ ಚೌಕಟ್ಟಿನಲ್ಲೇ ಬಂಧಿಸಿಡಬೇಕೆಂಬ ಅಭಿಪ್ರಾಯಕ್ಕೆ ಮನ್ನಣೆ ಏಕಿರಬೇಕು?

ಧರ್ಮನಿರಪೇಕ್ಷ ಭಾರತದಲ್ಲಿ ಸಂವಿಧಾನಕ್ಕೆ ಮೊದಲ ಆದ್ಯತೆ ಸಿಗಬೇಕು. ಭಾರತದ ಸಂವಿಧಾನವನ್ನು ರಕ್ಷಿಸುತ್ತೇವೆಂದು ಪ್ರತಿಜ್ಞೆ ಮಾಡಿರುವ ಶಾಸಕರು ಹೈದರಾಬಾದಿನಲ್ಲಿ ಹಲ್ಲೆಯ ನೇತೃತ್ವ ವಹಿಸಿದ್ದರು ಎಂಬುದು ಎಂತಹ ಆಘಾತಕಾರಿಯಾದ ವಿಷಯ! ವಿಶ್ವದ ಅತಿ ದೊಡ್ಡ ಪ್ರಜಾಸತ್ತೆ ತಾನೆಂದು ಸಂಭ್ರಮಿಸುವ ಭಾರತಕ್ಕೆ ಈಗ ಷಷ್ಟಿಪೂರ್ತಿಯ ಸಂಭ್ರಮ. ಸ್ವಾತಂತ್ರ್ಯ ಬಂದಾಗ ಅಂದು ಅನುಭವಿಸಿದ್ದು 'ಅಧೀನತೆಯಿಂದ ಸಮಾನತೆಯೆಡೆಗೆ ಸಾಗುತ್ತಿದ್ದೇವೆಂಬ' ಸಂಭ್ರಮ. ಇಂದು ಅರವತ್ತರ ಹೊಸ್ತಿಲಿನಲ್ಲಿರುವಾಗ 'ಉದಾರತೆಯಿಂದ ಧಾರ್ಮಿಕ ಸರ್ವಾಧಿಕಾರದತ್ತ' ಸಾಗುತ್ತಿದ್ದೇವೆಂಬ ಸಂಕಟ, ಆತಂಕ; ಬಹಿಷ್ಕಾರ, ಮುಟ್ಟುಗೋಲು ಸಂಸ್ಕೃತಿ ನಮ್ಮದಾಗುತ್ತಿದೆಯೆಂಬ ಹೀನಾಯ ಸ್ಥಿತಿ. ಇವುಗಳೆಲ್ಲದರ ವಿರುದ್ಧ ಭಾರತದ ಸಂವಿಧಾನದ ಪಾವಿತ್ರ್ಯತೆಯನ್ನು ರಕ್ಷಿಸಬೇಕಾದ್ದು ಇಂದಿನ ತುರ್ತು ಅಗತ್ಯವಾಗಿದೆ.

ಗಾಯತ್ರಿ ಎಸ್.

# ಗಡಿ ಮತ್ತು ಕಾವ್ಯ

ಸುಮ್ಮನೆ ಬಿದ್ದಿರುವ ಉದ್ದುದ್ದ ಸರಹದ್ದು
ಎತ್ತರೆತ್ತರಕ್ಕೆ ಬೆಳೆದ ದೇವದಾರುಗಳು
ಅಸ್ತಿತ್ವ ಅಲುಗಾಡುವ ಯಾತನೆಗಳ ಮಧ್ಯೆ
ಶಬ್ದ ಮೀರಿದ ಸಂಕಟಗಳ ಗುಟುಕ ನುಂಗಿ
ದೀರ್ಘ ಬದುಕಿನ ವಿಷಾದಗಳ ಮರೆತು
ಹಾಡುತ್ತಿದೆ ನೋಡು ಗಡಿಯಲ್ಲಿ ಗುನುಗುನಿಸಿ
ಸರಹದ್ದುಗಳೇ ಇಲ್ಲದ ಮಹಾಕಾವ್ಯ.

ಕಾವ್ಯದ ಒಂದೊಂದು ಅಕ್ಷರವೂ
ನೂರಾರು ಪ್ರತಿಮೆಗಳ ಮೂಡಿಸುತ್ತಲೇ
ಅರ್ಥವಿಲ್ಲದ ಸರಹದ್ದುಗಳ ಅಳಿಸುತ್ತದೆ
ಒಂದೊಂದು ಅಕ್ಷರದ ಹಿಂದಿರುವ ಸ್ವರವು
ಅನಂತ ಆಗಸದಲಿ ಸ್ನೇಹದ ಬಣ್ಣ ಹರಡುತ್ತದೆ.
ಕಾವ್ಯ ಭೂಮಿಕೆಯಲ್ಲಿ ಮಾನವತೆ ಉಸಿರಾಡುತ್ತದೆ.
ಸರಹದ್ದುಗಳಿಲ್ಲದ ಕಾವ್ಯ ಗುನುಗುನಿಸಿ ಹಾಡುತ್ತದೆ.

ಎರಡು ದೇಶಗಳ ಮಧ್ಯದ ವಿಭಾಜಕ ರೇಖೆಗಳನು
ಎಡೆಬಿಡದೆ ಸುರಿದ ಮಳೆಯು ಅಳಿಸಬಹುದೆ?
ನನ್ನವರು ಗುನುಗುನಿಸಿ ಹಾಡಿದ
ಮೇಘ ಮಲ್ಹಾರದ ರಾಗಗಳು
ಹೇಗೆ ಮುರಿಯುತ್ತಿವೆ ನೋಡು ಸರಹದ್ದುಗಳ
ಲೋಕವೇ ನಿದ್ದೆಯ ತೆಕ್ಕೆಗೆ ಜಾರಿರಲು
ಗಸ್ತು ನಿಂತಿದೆ ನೋಡು ಗಡಿಯಲಿ ಕಾವ್ಯ.

ಬೇಕಿಲ್ಲ ಗನ್ನು ಬಂದೂಕುಗಳು ನನಗೆ
ಹೃದಯ ಬೆಸೆಯುವ ಜೀವಂತ ಕಾವ್ಯವಿದೆಯಲ್ಲ?
ನನ್ನವರ ಹಾಡಿನೊಂದಿಗೆ ಗಡಿಯಾಚೆಗಿನ
ಅವರೂ ಹಾಡುತ್ತಿದ್ದಾರೆ ನೋಡು
ನನ್ನವರ ಹೆಜ್ಜೆಯೊಂದಿಗೆ ಅವರೂ ಕುಣಿಯುತ್ತಿದ್ದಾರೆ
ಹೇಗೆ ಅರಳುತ್ತಿದೆ ನೋಡು ಗಡಿಯಲಿ
ಸರಹದ್ದುಗಳೇ ಇಲ್ಲದ ಮಾನವ ಕಾವ್ಯ



ಕೆ. ಷರೀಫಾ, ಎ.ಪಿ.ಎಂ.ಸಿ., ಹರಿಹರ - ೫೭೭ ೬೦೧

ಕೆ. ಎಸ್. ಪಾರ್ಥಸಾರಥಿ

ಸ್ಕಿಲ್ ಮೂಲಭೂತ ಸೌಕರ್ಯಗಳ ಕಂಪನಿ (ನಿಯಮಿತ) (ಎಸ್.ಕೆ.ಐ.ಎಲ್.) ಎಂಬ ಮುಂಬಯಿಯ ಖಾಸಗಿ ವಾಣಿಜ್ಯ ಸಂಸ್ಥೆ ಫೆಬ್ರವರಿ ೨೦೦೭ರ ಅಂತ್ಯದಲ್ಲಿ ಕರ್ನಾಟಕ ಸರ್ಕಾರಕ್ಕೆ ರಾಮನಗರ ಮತ್ತು ಸೋಲೂರಿನಲ್ಲಿ ತಲಾ ಒಂದೊಂದು ವಿಶೇಷ ಆರ್ಥಿಕ ವಲಯವನ್ನು ಹಾಗೂ ಒಳವರ್ತುಲ ರಸ್ತೆಯನ್ನು ಅಭಿವೃದ್ಧಿಪಡಿಸಲು ಒಪ್ಪಿಗೆ ಕೋರಿ ಪತ್ರ ಬರೆಯಿತು. ಇದೇ ಸಂಸ್ಥೆ ನಂದಗುಡಿಯಲ್ಲೂ ೧೮,೫೦೭ ಎಕರೆ ಪ್ರದೇಶದಲ್ಲಿ ಮತ್ತೊಂದು ವಿಶೇಷ ಆರ್ಥಿಕ ವಲಯವನ್ನು ಸ್ಥಾಪಿಸಲೂ ಅನುಮೋದನೆ ಕೋರಿತು. ಈಗಿನ ವರದಿಯಂತೆ ಇದು ೩೯ ಗ್ರಾಮಗಳನ್ನು ಒಳಗೊಳ್ಳುತ್ತದೆ. ನಂದಗುಡಿಯ ವಿಷಯವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

ನಂದಗುಡಿ ವಿಶೇಷ ಆರ್ಥಿಕ ವಲಯದಲ್ಲಿ ನೇರವಾಗಿ ೧೮,೦೦೦ ಕೋಟಿ ರೂ. ಬಂಡವಾಳ ಹೂಡಿ, ಪರೋಕ್ಷವಾಗಿ ೩೦,೦೦೦ ಕೋಟಿ ರೂ.ಗಳನ್ನು ಹೂಡಿಕೆಯ ಬಂಡವಾಳವಾಗಿ ತರುವುದಾಗಿ ಹೇಳಿತು. ಇಲ್ಲಿ ಸುಮಾರು ೧,೨೫,೦೦೦ ಮಂದಿಗೆ ಉದ್ಯೋಗ ಕಲ್ಪಿಸುವುದಾಗಿಯೂ ಹೇಳಿತು. ಇದೇ ಪ್ರದೇಶದಲ್ಲಿ ಇದಕ್ಕೆ ಮುಂಚೆ ಬೃಹತ್ ಬೆಂಗಳೂರು ಅಭಿವೃದ್ಧಿ ನಿಗಮ (ಬಿ.ಎಮ್.ಆರ್.ಡಿ.ಎ.) ಒಂದು ಸಂಯುಕ್ತ ನಗರವನ್ನು ಬೆಳೆಸಲು ಉದ್ದೇಶಿಸಿತ್ತು. ಇದಲ್ಲದೆ ಈ ವಿಶೇಷ ಆರ್ಥಿಕ ವಲಯದಿಂದ ದೇವನಹಳ್ಳಿಯ ಹೊಸ ವಿಮಾನ ನಿಲ್ದಾಣಕ್ಕೆ ೮-ಲೇನಿನ ತ್ವರಿತವೇಗದ ಎತ್ತರದ, ಫ್ಲೈ ಓವರುಗಳ ರಸ್ತೆಯನ್ನು ನಿರ್ಮಿಸುವುದು; ಇದರ ಉದ್ದ ೩೦ ಕಿಲೋಮೀಟರ್‌ಗಳು. ಈ ರಸ್ತೆಯ ಎರಡೂ ಕಡೆ ಉದ್ದಕ್ಕೂ ಸುಮಾರು ೨೪೦ ಮೀಟರ್ ಅಗಲದ ಪ್ರದೇಶವನ್ನು ವಾಣಿಜ್ಯ ಉಪಯೋಗಕ್ಕಾಗಿ ಅಭಿವೃದ್ಧಿ ಪಡಿಸಲು, ಅದಕ್ಕಾಗಿ ಮತ್ತೆ ೩,೫೫೮ ಎಕರೆ ಜಮೀನನ್ನು ಒದಗಿಸುವಂತೆ ಪ್ರಾರ್ಥಿಸಿತು.

ಇದೇ ಕಂಪನಿ ರಾಮನಗರ, ಸೋಲೂರು ವಿಶೇಷ ಆರ್ಥಿಕ ವಲಯಗಳಿಗಾಗಿ ಮಾಗಡಿ ತಾಲ್ಲೂಕಿನ ೨೦ ಗ್ರಾಮಗಳ ೭೨೮೭ ಎಕರೆ ಹಾಗೂ ರಾಮನಗರ ತಾಲ್ಲೂಕಿನ ೧೧ ಗ್ರಾಮಗಳ ೪೦೧೩ ಎಕರೆ ಭೂಮಿಯನ್ನು ಬೇಡಿದೆ. ಇದಲ್ಲದೆ ಬೆಂಗಳೂರಿನ ಸುತ್ತಮುತ್ತ, ಸಂಪರ್ಕ ರಸ್ತೆಗಳ ನಿರ್ಮಾಣಕ್ಕಾಗಿ ಮತ್ತೆ ೪೧೮೨ ಎಕರೆ ಭೂಮಿಯನ್ನು ಕೋರಿದೆ. ಅಂದರೆ ಸುಮಾರು ೩೦,೦೦೦ ಎಕರೆ ಒಟ್ಟಾರೆ ಯೋಜನೆ.

ಈ ಸಂಸ್ಥೆ ೨೦೦೬, ಮಾರ್ಚಿ ಆಖೈರಿನ ವರ್ಷದಲ್ಲಿ ೮.೬೩ ಕೋಟಿ ರೂಪಾಯಿ ಲಾಭ ಸಂಪಾದಿಸಿದೆ. ಈ ಕಂಪನಿಯ ಮಾರುಕಟ್ಟೆಯ ಬೆಲೆ ಸುಮಾರು ೯,೭೧೫ ಕೋಟಿ ರೂ.ಗಳಿರಬಹುದೆಂದು ಅಂದಾಜು ಮಾಡಿದ್ದಾರೆ. ಇದೇ ಸಂಸ್ಥೆ ತಮ್ಮದೇ ಆಡಳಿತದ ಐದು ಕಂಪನಿಗಳ ಮೂಲಕ ಗುಜರಾತ್, ಮಹಾರಾಷ್ಟ್ರ, ನವೀ ಮುಂಬಯಿ ಮತ್ತು ಹಿಮಾಚಲದಲ್ಲಿ ಎರಡು ಯೋಜನೆಗಳನ್ನು ಕೈಗೆತ್ತಿ ಕೊಂಡಿದ್ದು, ಮೊದಲ ಮೂರು ಕಂಪನಿಗಳನ್ನು ರಿಲೈಯನ್ಸ್ ಕಂಪನಿಯ ಮುಖೇಶ ಅಂಬಾನಿಯವರ ಅಧೀನಕ್ಕೆ ಒಪ್ಪಿಸಿದೆ. ಇಷ್ಟೊಂದು ಮಹಾಪ್ರಮಾಣದ ವ್ಯವಹಾರ ನಡೆಸಲು ಈ ಸಂಸ್ಥೆಗೆ ತನ್ನದೇ ಹಣವಿಲ್ಲವೆಂಬುದು ಮೇಲ್ನೋಟಕ್ಕೆ ತಿಳಿಯುತ್ತದೆ. ಇದು ರಿಲೈಯನ್ಸ್ ಕಂಪನಿಯ ಪರವಾಗಿ ಮುಂದಾಗಿರುವ ಮುಖವಾಡದ ಕಂಪನಿಯೆ ? ಈಗಾಗಲೆ ಲಕ್ಷಾಂತರ ಎಕರೆ ಭೂಮಿಯನ್ನು ಪಡೆದು, ಇನ್ನೂ ಹತ್ತಾರು ವಿಶೇಷ ಆರ್ಥಿಕ ವಲಯ ಯೋಜನೆಗಳಿಗೆ ಭೂಮಿ ಪಡೆಯಲು ಮುನ್ನುಗ್ಗಿರುವ ರಿಲೈಯನ್ಸ್ ಗ್ರೂಪಿಗೆ ಇಂತಹ ಹಲವಾರು ಮುಖವಾಡ ಕಂಪನಿಗಳು ಕೆಲಸ ಮಾಡುತ್ತಿವೆಯೊ ?

ಕರ್ನಾಟಕ ಸರ್ಕಾರದ ಈ ಕುರಿತ ಉನ್ನತ ಮಟ್ಟದ ಸಮಿತಿ ದಿನಾಂಕ ೧೦-೪-೨೦೦೭ರ ಸಭೆಯಲ್ಲಿ ಈ ಬೇಡಿಕೆಗಳನ್ನು ಪರಿಶೀಲಿಸಿ ಕೆಲವು ತೀರ್ಮಾನ ಗಳನ್ನು ಕೈಗೊಂಡಿತು : (೧) ಕೇಂದ್ರ ಸರ್ಕಾರ ವಿಶೇಷ ಆರ್ಥಿಕ ವಲಯದ ಮಿತಿಯನ್ನು ೫೦೦೦ ಹೆಕ್ಟೇರುಗಳು (ಅಂದರೆ ಸುಮಾರು ೧೨,೫೦೦ ಎಕರೆಗಳು) ಎಂದು ಮಿತಿಗೊಳಿಸಿದೆಯಾಗಿ, ಸ್ಕಿಲ್ ತನ್ನ ಯೋಜನೆಯನ್ನು ಇದರೊಳಗೆ ಮಿತಿಗೊಳಿಸಬೇಕು. (೨) ೩೦ ಕಿ.ಮೀ. ರಸ್ತೆ ಯೋಜನೆಯನ್ನು ಸರ್ಕಾರ, ಸ್ಕಿಲ್ ಜತೆಗೂಡಿ ಸಂಯುಕ್ತ ಯೋಜನೆಯಾಗಿ ನಡೆಸಬೇಕು. (೩) ಈ ಕ್ಷೇತ್ರಕ್ಕೆ ನೀರು ಸರಬರಾಜನ್ನು ಹೇಗೆ ಮಾಡಲಾಗುತ್ತದೆ ಎಂದು ಸ್ಕಿಲ್ ಸಂಸ್ಥೆಯೇ ನಿರ್ಧರಿಸಿ, ತಿಳಿಸಬೇಕು. ಐದೇ ದಿನಗಳಲ್ಲಿ ಸ್ಕಿಲ್ ಸಂಸ್ಥೆ ೧೨,೫೦೦ ಎಕರೆಗೆ ಮಿತಿಗೊಳಿಸಿ ಹೊಸ ಯೋಜನೆಯನ್ನು ಸರ್ಕಾರಕ್ಕೆ ಕಳುಹಿಸಿತು. ಇದಲ್ಲದೆ ಯೋಜಿತ ವಲಯದಲ್ಲಿ, ಶೇ. ೫೦ರಷ್ಟು ಭೂಮಿಯನ್ನು ಕೈಗಾರಿಕೆಯ ಅಭಿವೃದ್ಧಿಗೆ ನೇರ ಬಳಸುವುದಾಗಿ ಹೇಳಲಾಗಿದೆ. ನೀರಿನ ಸಮಸ್ಯೆಯನ್ನು ದೇಶೀ ಮತ್ತು ವಿದೇಶೀ ತಜ್ಞರೊಡನೆ ಚಿಂತಿಸಿ, ಪರಿಹರಿಸ ಲಾಗುತ್ತದೆ. ಈ ವಲಯ ವಿಕಾಸಕ್ಕೆ ೧,೫೦೦ ಕೋಟಿ ಬಂಡವಾಳ ಹೂಡುವುದಾಗಿಯೂ, ಇದಕ್ಕೆ ತಾನೇ ಆಂತರಿಕವಾಗಿ ಸಂಪಾದಿಸುವ ೬೦೦೦ ಕೋಟಿ ಹಾಗೂ ವಾಯಿದೆ ಸಾಲರೂಪದಲ್ಲಿ ೯,೦೦೦ ಕೋಟಿ ರೂ.ಗಳ ಬಂಡವಾಳ ತರುವುದಾಗಿ ಹೇಳಿದೆ. ಪರೋಕ್ಷ ಬಂಡವಾಳ ಹೂಡಿಕೆ ೩೦,೦೦೦ ಕೋಟಿ ರೂ.ಗಳೆಂದು ಹೇಳಿದೆ. ಇದಲ್ಲದೆ ಈ ವಲಯದಲ್ಲಿ ಸ್ಥಾಪಿತವಾಗುವ ಕೈಗಾರಿಕಾ ಘಟಕಗಳು ಸುಮಾರು ೯೦,೦೦೦ ಕೋಟಿ ರೂಪಾಯಿಗಳನ್ನು ಹೂಡುವ ಅಂದಾಜು ಮಾಡಲಾಗಿದೆ.

ಇದರೊಳಗೆ ಬರುವ ಕೈಗಾರಿಕೆಗಳ ಪಟ್ಟಿಯನ್ನು ಸೂಚಿಸಲಾಗಿದೆ. ಕೃಷಿ/ ಆಹಾರ ಪರಿಷ್ಕರಣೆ, ಐಟಿ ಮತ್ತು ಐಟಿ ಸಂಬಂಧಿತ ಮೈಕ್ರೊಎಲೆಕ್ಟ್ರಾನಿಕ್ಸ್, ವಜ್ರ ಪರಿಷ್ಕರಣೆ, ಬಯೋಟೆಕ್ನಾಲಜಿ, ಜ್ಞಾನ ವಿಜ್ಞಾನ ಸಂಬಂಧಿತ, ಜವಳಿ/ವಸ್ತ್ರ, ಆರೋಗ್ಯ ಸರಕುಗಳು, ಎಲೆಕ್ಟ್ರಾನಿಕ್ಸ್ ಮತ್ತು ಸಂಬಂಧಪಟ್ಟವು. ೧,೨೫,೦೦೦ ಉದ್ಯೋಗ ನಿರ್ಮಾಣ, ವಿದೇಶೀ ವಿನಿಮಯ ಹೂಡಿಕೆ ಸುಮಾರು ೨,೫೦೦ ಕೋಟಿ; ಹತ್ತು ವರ್ಷದಲ್ಲಿ ಆಗಬಹುದಾದ ರಫ್ತಿನ ಬೆಲೆ ೧,೨೨,೮೦೮ ಕೋಟಿ ರೂಪಾಯಿ. ''ತತ್ವಶಃ ಒಪ್ಪಿಗೆ''ಯನ್ನು ನೀಡಬೇಕೆಂದು ಸಂಸ್ಥೆ ಕೋರಿದೆ ಹಾಗೂ ಭಾರತ ಸರ್ಕಾರಕ್ಕೂ ೧೬-೪-೨೦೦೭ರಲ್ಲಿ ಈ ಕುರಿತು ಅರ್ಜಿ ಹಾಕಿದೆ.

ಸ್ಕಿಲ್ ಸಂಸ್ಥೆ ಬಯಸುವ ೧೨,೩೫೦ ಎಕರೆಯಲ್ಲಿ ೪,೭೪೫ ಎಕರೆ ಪ್ರದೇಶ ಸರ್ಕಾರೀ ಭೂಮಿ ಎಂಬುದು ಗಮನಾರ್ಹ. ಕಂಪನಿ ಸರ್ಕಾರದಿಂದ ಬಯಸುವ ಸಹಕಾರಗಳೆಂದರೆ (೧) ಸರ್ಕಾರೀ ಭೂಮಿಯನ್ನು ಇಬ್ಬರಿಗೂ ಸಮ್ಮತವಾದ ಬೆಲೆಗೆ ಒದಗಿಸಿ ಕೊಡಬೇಕು (೨) ಸರ್ಕಾರ ಮತ್ತು ಕೈಗಾರಿಕಾ ಪ್ರದೇಶ ಅಭಿವೃದ್ಧಿ ನಿಗಮದ ಸಹಾಯದಿಂದ, ಕಂಪನಿ ನೇರವಾಗಿ ರೈತರಿಂದ ಭೂಮಿಯನ್ನು ಕೊಳ್ಳಲು ಸಹಕಾರ (೩) ಭಾರತ ಸರ್ಕಾರಕ್ಕೆ ಈ ಕಂಪನಿಯ ಬೇಡಿಕೆಯನ್ನು ಶಿಫಾರಸು ಮಾಡಬೇಕು (೪) ಎಸ್.ಇ.ಜೆಡ್. ಕಾನೂನು ೨೦೦೫ ಮತ್ತು ೨೦೦೬ರನ್ವಯ ಎಲ್ಲ ಸರ್ಕಾರಿ ಸಹಕಾರ (೫) ಪರಿಸರಕ್ಕೆ ಸಂಬಂಧಪಟ್ಟ ಅನುಮೋದನೆಗಳನ್ನು ದೊರಕಿಸಿ ಕೊಡಬೇಕು (೬) ನಂದಗುಡಿಯನ್ನು ಮುಖ್ಯ ರೈಲ್ವೆ ಲೈನಿಗೆ ಸಂಪರ್ಕಿಸುವಂತೆ ೩೫

# ನಂದಗುಡಿ ವಿಶೇಷ ಆರ್ಥಿಕ ವಲಯ - ಅಧಿಕೃತ ಮಾಹಿತಿಗಳು

ಈ ಹಿಂದೆ ಭೂಹೀನರಿಗೆ ಸರ್ಕಾರಿ ಭೂಮಿಯನ್ನು ಹಂಚಿ ಎಂದಾಗ, ಕಾಡನ್ನು ರಕ್ಷಿಸಬೇಕು, ಅಲ್ಲಿಯ ಭೂಮಿಯನ್ನು ನೀಡಲಾಗದು ಎಂದವರು, ಇಂದು ಕೈಗಾರಿಕೆಗಾಗಿ ಸರ್ಕಾರದ ವಶದಲ್ಲಿ ಎಷ್ಟೊಂದು ಭೂಮಿ ಇದೆ ಎಂದು ಅಚ್ಚರಿಯಾಗುವಷ್ಟು ಪ್ರಮಾಣದಲ್ಲಿ ಬಹಿರಂಗವಾಗುತ್ತಿದೆ. ಇದನ್ನು ಉದ್ಯಮಿಗಳಿಗೆ ಉಚಿತವಾಗಿ, ಗೇಣಿಯ ರೂಪದಲ್ಲಿ, ಉಚಿತ ಬೆಲೆಯ ಹೆಸರಿನಲ್ಲಿ ಪರಭಾರೆ ಮಾಡುವುದು, ಅದೇ ಭೂಮಿಯ ಬೆಲೆಯನ್ನು ಉದ್ಯಮಿ ಮಾರುಕಟ್ಟೆಯ ಬೆಲೆ ಎಂದು ಬಲು ಹೆಚ್ಚು ಬೆಲೆ ನಿರ್ಧರಿಸಿ, ಅದರ ಆಧಾರದ ಮೇಲೆ ಸಾರ್ವಜನಿಕ ಬ್ಯಾಂಕುಗಳಿಂದ (ಯಾವ ಬ್ಯಾಂಕು ಸಾರ್ವಜನಿಕವಲ್ಲ!) ಅಪಾರವಾದ ಸಾಲ ಪಡೆಯುವುದು, ಇದೆಲ್ಲಾ ಗಮನಿಸಿದರೆ ಒಂದು ವಿಷಯ ಸ್ಪಷ್ಟ : ಸರ್ಕಾರಗಳು ಪಟ್ಟಣಿಗರಿಗೆ, ಉದ್ಯಮಿಗಳಿಗೆ, ವಾಣಿಜ್ಯಕ್ಕೆ ಏನು ಬೇಕಾದರೂ, ತ್ವರಿತವಾಗಿ ಮಾಡುತ್ತವೆ. ಅದೇ, ರೈತರಿಗೆ, ಗ್ರಾಮೀಣ ಪ್ರದೇಶಕ್ಕೆ ಏನು ಮಾಡಬೇಕೆಂದರೂ ಹಲವು ನೆಪಗಳನ್ನು ಒಡ್ಡಿ ಅಡ್ಡಗಾಲು ಹಾಕುತ್ತವೆ, ಎಳೆದಾಡುತ್ತವೆ.

ಕಿ.ಮೀ. ರೈಲ್ವೆ ಹಳಿ ನಿರ್ಮಾಣವನ್ನು ಕೇಂದ್ರ ಸರ್ಕಾರಕ್ಕೆ ಭೂಮಿ ನೀಡಿ, ಮಾಡಿಸಿಕೊಡಬೇಕು.

ಭಾರತ ಸರ್ಕಾರ ಈ ಕುರಿತು ಜವಾಬ್ದಾರಿ ವಹಿಸಿರುವ ಮಂತ್ರಿಗಳ ಗುಂಪು ಕೆಲವು ನಿಯಮಗಳನ್ನು ಗುರುತಿಸಿದೆ. (೧) ರೈತರಿಂದ ಸರ್ಕಾರ ಯಾವ ರೀತಿಯಲ್ಲೂ ತನ್ನ ಅಧಿಕಾರ ಉಪಯೋಗಿಸಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಕೂಡದು. ಅದೇನಿದ್ದರೂ ತಾನೇ ನೇರವಾಗಿ ನಡೆಸುವ ವಿಶೇಷ ಆರ್ಥಿಕ ವಲಯಕ್ಕೆ ಮಾತ್ರ ಹಾಗೆ ಮಾಡಬಹುದು. (೨) ಕಂಪನಿ ನೇರವಾಗಿ ರೈತರಿಂದ ಭೂಮಿ ಕೊಳ್ಳಬೇಕು. (೩) ಶೇ. ೫೦ರಷ್ಟು ಭೂಮಿಯನ್ನು ಕೈಗಾರಿಕಾ ವಲಯಕ್ಕೆ ಮೀಸಲಿಡಬೇಕು. ಸಂತ್ರಸ್ತರ ಪುನರ್ವಸತಿ ಮತ್ತು ಉದ್ಯೋಗಕ್ಕೆ ಸಂಬಂಧಪಟ್ಟಂತೆ ಸರ್ಕಾರ ರೂಪಿಸಲಿರುವ ಕ್ರಮಕ್ಕೆ ಒಳಗಾಗಬೇಕು. ಅದರಂತೆ ಸಂತ್ರಸ್ತ ಕುಟುಂಬಗಳಲ್ಲಿ ಒಬ್ಬೊಬ್ಬರಿಗಾದರೂ ಒಂದು ಉದ್ಯೋಗವನ್ನು ನೀಡಬೇಕು. ೧೦-೨-೨೦೦೬ರ ನಂತರ ಸರ್ಕಾರ ವಶಪಡಿಸಿಕೊಂಡ ಭೂಮಿ ಇದ್ದರೆ ಅದನ್ನು ಈ ಉದ್ದೇಶಕ್ಕೆ ನೀಡುವಂತಿಲ್ಲ.

ಮತ್ತೊಂದು ವರದಿಯಂತೆ ಕೇಂದ್ರ ಸರ್ಕಾರ ತನ್ನ ನೀತಿಯನ್ನು ಸಡಿಲಗೊಳಿಸಿದೆ. (೧) ನೇರವಾಗಿ ಭೂಮಿಯನ್ನು ರೈತ ಮಾರಲು ಒಪ್ಪಿದ ನಂತರ, ಅದನ್ನು ಸರ್ಕಾರ ಸ್ವಾಧೀನಪಡಿಸಿಕೊಡಬೇಕು. (೨) ಈಗಾಗಲೆ ಸ್ವಾಧೀನವಾಗಿದ್ದರೆ ಅವುಗಳನ್ನು ಪುನರ್ವಿಮರ್ಶಿಸುವಂತಿಲ್ಲ (೩) ಈಗಾಗಲೆ ಸರ್ಕಾರ ಅಧಿಕಾರ ಉಪಯೋಗಿಸಿ ಕಡ್ಡಾಯವಾಗಿ ಸ್ವಾಧೀನ ಪಡಿಸಿಕೊಂಡಿದ್ದರೆ ಅದನ್ನು ಪುನರ್ ಪರಿಶೀಲಿಸಬೇಕಾಗಿಲ್ಲ.

ರೈತರಿಗೆ ನ್ಯಾಯಯುತವಾದ ಪರಿಹಾರ ಎಂಬಲ್ಲಿ, ಈ ಕಂಪನಿ ರೈತರಿಗೆ ಒಂದು ಉದ್ಯೋಗ ಅಥವಾ ಪ್ರತಿ ಎಕರೆಗೆ ೪೦' x ೭೫' ನಿವೇಶನವನ್ನು (೧೦ ನಿವೇಶನದ ಮಿತಿ) ಕೊಡುವುದು, ಮನೆ ಕಳೆದುಕೊಂಡಿದ್ದರೆ ಮನೆಯನ್ನು ಕಟ್ಟಿಕೊಡುವುದು ಮುಂತಾದ ವಿಷಯಗಳನ್ನು ಸೂಚಿಸಿ, ಸಾಧ್ಯವಿದ್ದೆಡೆಯಲ್ಲಿ ಸಾಮಾಜಿಕ ಸೌಕರ್ಯಗಳು, ಶಾಲೆ, ಸಾಮೂಹಿಕ ಭವನ, ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನೆಲ್ಲಾ ಸಂಘಟಿಸುವುದಾಗಿ ಹೇಳಿಕೊಂಡಿದೆ.

ಕಂಪನಿಯ ಈ ಯೋಜನೆಯನ್ನು ತಮ್ಮ ತಮ್ಮ ದೃಷ್ಟಿಯಿಂದ ಗಮನಿಸಿ ವಿವಿಧ ಇಲಾಖೆಗಳು ಹೀಗೆ ಹೇಳಿವೆ: (೧) ರೆವಿನ್ಯೂ ಇಲಾಖೆ ಅಷ್ಟೊಂದು ಪ್ರಮಾಣದ ಸರ್ಕಾರೀ ಭೂಮಿಯನ್ನು ಗೇಣಿಯ ಆಧಾರದ ಮೇಲೆ ನೀಡಲಾಗುವುದಿಲ್ಲ ಎನ್ನುತ್ತದೆ. (೨) ನಗರಾಭಿವೃದ್ಧಿ ಸಂಸ್ಥೆ ತಾನೇ ಈ ಯೋಜನೆಗಳನ್ನು ಕೈಗೆತ್ತಿಕೊಂಡಿದ್ದು, ಇದಕ್ಕೆ ತನ್ನ ಒಪ್ಪಿಗೆ ಇಲ್ಲ ಎಂದಿದೆ. (೩) ಇದೇ ರೀತಿಯ ಕಾರಣ ಒಡ್ಡಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇದಕ್ಕೆ ಒಪ್ಪಿಗೆ ನೀಡಿಲ್ಲ. (೪) ನೀರು ಮತ್ತು ಒಳಚರಂಡಿ ನಿಗಮ ತನ್ನಿಂದ ಈ ಕ್ಷೇತ್ರಕ್ಕೆ ಸೇವೆ ನೀಡಲು ಸಾಧ್ಯವಿಲ್ಲ ಎಂದಿದೆ. (೫) ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇದು ತನಗೆ ಸಂಬಂಧಪಡದ ವಿಷಯ ಎಂದಿದೆ! (೬) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಉದ್ದೇಶಿತ ಭೂಪ್ರದೇಶಗಳಲ್ಲಿ ಹಲವಾರು ತನ್ನದೇ ಯೋಜನೆಗೆ ಸಂಬಂಧಿಸಿರುವುದರಿಂದ ತಾನು ಒಪ್ಪಿಗೆ ಕೊಡಲು ನಿರಾಕರಿಸಿದೆ. (೭) ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ಪ್ರದೇಶದ ಪ್ರಾಧಿಕಾರ ಈ ಕ್ಷೇತ್ರ ತನ್ನ ಸೀಮಿತ ಪ್ರದೇಶಕ್ಕೆ ಒಳಪಟ್ಟಿಲ್ಲ ಎಂದಿದೆ. (೮) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಉದ್ದೇಶಿತ ಗ್ರಾಮಗಳ ಪರಿಮಿತಿ ತನ್ನ ಯಾವ ಭೂಸ್ವಾಧೀನ ಯೋಜನೆಯಲ್ಲೂ ಸೇರಿಲ್ಲ ಎಂದಿದೆ. (೯) ಅರಣ್ಯ, ಪರಿಸರ, ಜೀವಿಶಾಸ್ತ್ರ ಇಲಾಖೆ, ಇದಕ್ಕೆ ಸಂಬಂಧಪಟ್ಟಂತೆ ಕೇಂದ್ರ ಸರ್ಕಾರದಿಂದ ಅನುಮತಿ ಪಡೆಯಬೇಕು ಎಂದಿದೆ. (೧೦) ನಗರಾಭಿವೃದ್ಧಿ ಇಲಾಖೆ ಉದ್ದೇಶಿತ ವಿಶೇಷ ಆರ್ಥಿಕ ವಲಯದ ಯೋಜನೆಯನ್ನು ಕೈಬಿಡುವುದು ಸೂಕ್ತ ಎಂದಿದೆ.

ಹೀಗಾಗಿ ಈ ಯೋಜನೆಯ ಒಪ್ಪಿಗೆಯನ್ನು ಮಂತ್ರಿಸಂಪುಟ ಮಾತ್ರ ನೀಡಬಲ್ಲದು ಎಂದಾಯ್ತು. ದಿನಾಂಕ ೧೦-೪-೨೦೦೬ರಲ್ಲಿ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಹೈ ಲೆವೆಲ್ ಕ್ಲಿಯರೆನ್ಸ್ ಸಮಿತಿಯಲ್ಲಿ (ಎಸ್.ಹೆಚ್.ಎಲ್.ಸಿ.ಸಿ.), ಸ್ಕಿಲ್ ಸಂಸ್ಥೆಯ ಪ್ರತಿನಿಧಿಗಳೂ ಭಾಗವಹಿಸಿದ್ದರು. ಸ್ಕಿಲ್ ಸಂಸ್ಥೆ ನಂದಗುಡಿಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ವಿಶೇಷ ಆರ್ಥಿಕ ವಲಯಕ್ಕೆ ತತ್ವಶಃ ಒಪ್ಪಿಗೆ ನೀಡಲಾಯ್ತು.

ಇದರಲ್ಲಿ ಗಮನಿಸಬೇಕಾದ ವಿಷಯಗಳೆಂದರೆ (೧) ಫೆಬ್ರವರಿಯಿಂದ ಏಪ್ರಿಲ್ ಒಳಗೆ ಅಷ್ಟೊಂದು ತ್ವರಿತವಾಗಿ ಸರ್ಕಾರದ ಎಲ್ಲಾ ಇಲಾಖೆಗಳೂ ಪ್ರತಿಕ್ರಿಯಿಸಿ, ಒಂದು ಗಂಭೀರವಾದ ಯೋಜನೆಗೆ ತೀರ್ಮಾನ ನೀಡಿದ್ದು. (೨) ಈ ಪ್ರಕ್ರಿಯೆಯಲ್ಲಿ ಸಂಬಂಧಪಟ್ಟ ರೈತರಿಗೆ ಪತ್ರಿಕೆಯಲ್ಲಿ ಸುದ್ದಿ ಬರುವವರೆಗೂ ಏನನ್ನೂ ತಿಳಿಸದೆ ಇದ್ದದ್ದು. (೩) ಸರ್ಕಾರದ ವಿವಿಧ ಅಂಗಸಂಸ್ಥೆಗಳ ವಿರೋಧವನ್ನೂ ತಳ್ಳಿಹಾಕಿದ್ದು (೪) ೩೦ ಸಾವಿರ ಎಕರೆ ಭೂಮಿ ಬೇಕೆಂದು ಪ್ರಾರಂಭಿಸಿ ಈಗ ಸರ್ಕಾರಿ ಭೂಮಿ ಸಾಕು ಎನ್ನುವುದೂ ಒಂದು ವಿಷಯ. (೫) ೧೨,೫೦೦ ಎಕರೆಯ ಮಿತಿ ಎಂದೊಡನೆಯೆ ಒಂದೇ ಕಂಪನಿ ಆ ಮಿತಿಯ ಹಲವಾರು ಬಿಡಿಬಿಡಿ ವಲಯಗಳ ಹೆಸರಿನಲ್ಲಿ ಲಕ್ಷಾಂತರ ಎಕರೆ ಭೂಮಿ ಕೇಳುವುದೂ ಒಂದು ವಿಷಯ. ಹಾಗೆಯೇ ರಿಲೈಯನ್ಸ್ ಅಂಥ ದೈತ್ಯ ಕಂಪನಿಗಳು, ಬೇರೆ ಬೇರೆ ಸಣ್ಣ ಮುಖವಾಡದ ಕಂಪನಿಗಳನ್ನು ಮುನ್ನೊಡ್ಡುತ್ತಿವೆಯೇ ಎಂಬ ಸಂದೇಹ.

ಈಗ ಹಲವು ರೀತಿಯ ಆಂದೋಳನಗಳೂ ವಿರೋಧವೂ ಪ್ರಕಟವಾಗುತ್ತಿರುವ ಹಿನ್ನೆಲೆಯಲ್ಲಿ, ಸ್ಕಿಲ್ ಸಂಸ್ಥೆ ಸರ್ಕಾರದ ವಶದ ಭೂಮಿಯನ್ನು ಸದ್ಯಕ್ಕೆ ಕೊಟ್ಟರೆ ಸಾಕು, ಅದರೊಳಗೇ ತನ್ನ ಕೆಲಸ ಮಾಡುವುದಾಗಿ ಹೇಳುತ್ತಿದೆ. ಈ ಸರ್ಕಾರಿ ಭೂಮಿ ಎನ್ನುವುದು ಇಲ್ಲಿಯ ಗ್ರಾಮಗಳ ಆಸುಪಾಸಿನ ರಿಸರ್ವ್ ಕಾಡುಗಳು, ಗೋಮಾಳ, ಸಾಮಾಜಿಕ ಅರಣ್ಯ ಅಭಿವೃದ್ಧಿಗೆ ಸಂಬಂಧಪಟ್ಟದ್ದವು. ಈ ಹಿಂದೆ ಭೂಹೀನರಿಗೆ ಸರ್ಕಾರಿ ಭೂಮಿಯನ್ನು ಹಂಚಿ ಎಂದಾಗ, ಕಾಡನ್ನು ರಕ್ಷಿಸಬೇಕು, ಅಲ್ಲಿಯ ಭೂಮಿಯನ್ನು ನೀಡಲಾಗದು ಎಂದವರು, ಇಂದು ಕೈಗಾರಿಕೆಗಾಗಿ ಸರ್ಕಾರದ ವಶದಲ್ಲಿ ಎಷ್ಟೊಂದು ಭೂಮಿ ಇದೆ ಎಂದು ಅಚ್ಚರಿಯಾಗುವಷ್ಟು ಪ್ರಮಾಣದಲ್ಲಿ ಬಹಿರಂಗವಾಗುತ್ತಿದೆ. ಇದನ್ನು ಉದ್ಯಮಿಗಳಿಗೆ ಉಚಿತವಾಗಿ, ಗೇಣಿಯ ರೂಪದಲ್ಲಿ, ಉಚಿತ ಬೆಲೆಯ ಹೆಸರಿನಲ್ಲಿ ಪರಭಾರೆ ಮಾಡುವುದು, ಅದೇ ಭೂಮಿಯ ಬೆಲೆಯನ್ನು ಉದ್ಯಮಿ ಮಾರುಕಟ್ಟೆಯ ಬೆಲೆ ಎಂದು ಬಲು ಹೆಚ್ಚು ಬೆಲೆ ನಿರ್ಧರಿಸಿ, ಅದರ ಆಧಾರದ ಮೇಲೆ ಸಾರ್ವಜನಿಕ ಬ್ಯಾಂಕುಗಳಿಂದ (ಯಾವ ಬ್ಯಾಂಕು ಸಾರ್ವಜನಿಕವಲ್ಲ!) ಅಪಾರವಾದ ಸಾಲ ಪಡೆಯುವುದು, ಇದೆಲ್ಲಾ ಗಮನಿಸಿದರೆ ಒಂದು ವಿಷಯ ಸ್ಪಷ್ಟ: ಸರ್ಕಾರಗಳು ಪಟ್ಟಣಿಗರಿಗೆ, ಉದ್ಯಮಿಗಳಿಗೆ, ವಾಣಿಜ್ಯಕ್ಕೆ ಏನು ಬೇಕಾದರೂ, ತ್ವರಿತವಾಗಿ ಮಾಡುತ್ತವೆ. ಅದೇ, ರೈತರಿಗೆ, ಗ್ರಾಮೀಣ ಪ್ರದೇಶಕ್ಕೆ ಏನು ಮಾಡಬೇಕೆಂದರೂ ಹಲವು ನೆಪಗಳನ್ನು ಒಡ್ಡಿ ಅಡ್ಡಗಾಲು ಹಾಕುತ್ತವೆ, ಎಳೆದಾಡುತ್ತವೆ. ರೈತರು ತಮ್ಮದೇ ಛೇಂಬರ್ ಆಫ್ ಕಾಮರ್ಸ್ ಮಾಡಿಕೊಳ್ಳುವ ಕಾಲ ಬಂದಿಲ್ಲವೆ ?

ಸರ್ಕಾರ ಗುರುತಿಸಲು ಒಲ್ಲದ ಮತ್ತೆ ಕೆಲವು ಸಂಗತಿಗಳು: ನಂದಗುಡಿ ಪ್ರದೇಶದಲ್ಲಿ ಕಳೆದ ನಲವತ್ತು ವರ್ಷದಲ್ಲಿ ಕೃಷಿ ಮತ್ತು ಕೃಷಿ ಆಧಾರಿತ ಬದುಕು ಬಹಳಷ್ಟು ಅಭಿವೃದ್ಧಿಯಾಗಿದೆ. ಬೆಂಗಳೂರಿನ ಸಾಮೀಪ್ಯ ಒಂದು ಕಾರಣ. ಅಲ್ಲಿಯ ಕೃಷಿ ಮೂಲಭೂತ ಸೌಕರ್ಯಗಳಲ್ಲಿ ಅಪಾರ ಬಂಡವಾಳವನ್ನು ಹೂಡಲಾಗಿದೆ. ಇಲ್ಲಿ ಕಚ್ಚಾ ರೇಷ್ಮೆಯ ಉತ್ಪಾದನೆ ವಾರ್ಷಿಕ ೨೦ ಕೋಟಿ ರೂ.ಗಳಷ್ಟು. ೩೨ ಹಾಲು ಉತ್ಪಾದಕರ ಸಹಕಾರ ಸಂಘಗಳಿವೆ. ಮೂವತ್ತು ಸಾವಿರ ಲೀಟರ್ ದಿನಂಪ್ರತಿ ಹಾಲು ಉತ್ಪಾದನೆ, ಮೂವತ್ತು ಸಾವಿರ ಕೆ.ಜಿ.ಗೂ ಮಿಕ್ಕ ದಿನಂಪ್ರತಿ ತರಕಾರಿ ಉತ್ಪಾದನೆ. ಸರ್ಕಾರ ತನ್ನದೆನ್ನುವ ಬಗೈರ್ ಹುಕುಂ ಜಮೀನಿನಲ್ಲಿ ನಾಲ್ಕಾರು ದಶಕಗಳಿಂದ ಸಾಗುವಳಿ ಮಾಡುತ್ತಿರುವ ಸಹಸ್ರಾರು ಸಣ್ಣ ರೈತರಿದ್ದಾರೆ. ಈ ಸಾಗುವಳಿಯನ್ನು ಸರ್ಕಾರವೇ ಒಪ್ಪಿ ಕೊಂಡಿರುವ ನೀತಿಯನ್ವಯ ಸಕ್ರಮಗೊಳಿಸುವ ಪ್ರಾರ್ಥನೆಯನ್ನು ಇನ್ನೂ ಮನ್ನಿಸಿಲ್ಲ. ನೇರವಾಗಿ ಭೂಮಿಯ ಒಡೆತನವಿಲ್ಲದೆ, ಆದರೂ ಅದರ ಮೇಲೆ ಜೀವನಕ್ಕೆ ಅವಲಂಬಿಸಿರುವ ಕುಟುಂಬಗಳ ಸಂಖ್ಯೆಯೇ ಹೆಚ್ಚು. ಗ್ರಾಮೀಣ ಪ್ರದೇಶದಲ್ಲಿ ಮಳೆಯಿಲ್ಲದ ಕಡೆಯೂ ಬಂಡವಾಳ ಸಾಕಷ್ಟು ಹೂಡಿದರೆ ಹೇಗೆ ಅಭಿವೃದ್ಧಿಯನ್ನು ಸಾಧಿಸಬಹುದೆಂಬುದಕ್ಕೆ ಈ ಕ್ಷೇತ್ರ ಒಂದು ಮಾದರಿ. ಇಲ್ಲಿ ಎಸ್.ಇ.ಜೆಡ್. ಬಂದರೆ, ಹತ್ತಾರು ಸಹಸ್ರ ಕುಟುಂಬಗಳು ಏನಾಗಬೇಕು ?

ಗ್ರಾಮೀಣ ಪ್ರದೇಶವೆಂದರೆ ಕೇವಲ ಭೂಮಿಯ ಒಡೆತನ ಪಡೆದ ರೈತ ಮಾತ್ರನಲ್ಲ. ಅದರ ಸುತ್ತ ಅವಲಂಬಿಸಿದ ಕಸಬುದಾರರು ಇದ್ದಾರೆ: ಕಂಬಾರ, ಕಮ್ಮಾರ, ಬಡಗಿ ಮುಂತಾಗಿ. ಇವರದೆಲ್ಲಾ ಸಣ್ಣ ಸಂಪಾದನೆಯ, ಆದರೂ ಸಾಕಷ್ಟು ತೃಪ್ತಿಯ ಸಹಬಾಳ್ವೆಯ ಜೀವನ. ಇವರೆಲ್ಲರನ್ನು ಗುಳೆಹೋಗುವಂತೆ ಮಾಡುವ ಈ ಭೂಸ್ವಾಧೀನ ಕ್ರಮ ಹೇಗೆ ತಾನೆ ಅಭಿವೃದ್ಧಿಯಾದೀತು? ಕೈಗಾರಿಕೆಗಳು ಬೇಕು. ಅವುಗಳ ವಿಕೇಂದ್ರೀಕರಣವಾಗಬೇಕು. ಕೃಷಿಗೆ ಸರಿಯಲ್ಲದ, ಬಂಜರು ಭೂಮಿಗಳನ್ನು ಇದಕ್ಕೆ ಉಪಯೋಗಿಸಬೇಕು. ನಂದಗುಡಿಯ ಭೂಮಿ ಈ ಥರದ ಭೂಮಿಯಲ್ಲ.

ಕೆ. ಎಸ್. ಪಾರ್ಥಸಾರಥಿ
ಸಿ-೨, 'ಐಕ್ಯತಾ', ಸಂ. ೬೦/೨, ೧೭ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ [illegible]

# ಕನ್ನಡ

# ಸುವರ್ಣ ಚೌಕಟ್ಟಿನಿಂದ ಸುವರ್ಣ ಪಥದತ್ತ ಸಾಗಬೇಕು

ಕನ್ನಡ-ಕನ್ನಡಿಗ-ಕರ್ನಾಟಕಗಳು ಎದುರಿಸುತ್ತಿರುವ ಎಲ್ಲ ಸಮಸ್ಯೆಗಳನ್ನೂ ಪ್ರಸ್ತಾಪಿಸಲು ವಿಸ್ತಾರವಾದ ಅಧ್ಯಯನ ಅಗತ್ಯ. ಗೊತ್ತಿರುವ ಸಮಸ್ಯೆಗಳನ್ನು ಪ್ರಸ್ತಾಪಿಸಿದರೇ ಕಿರುಹೊತ್ತಿಗೆಯಾಗಿಬಿಡುತ್ತದೆ. ಕನ್ನಡ ಭಾಷೆಗೆ ಸಂಬಂಧಿಸಿದಂತೆಯೇ ಹೇಳಬಹುದಾದ ಮಾತುಗಳು ಸಾಕಷ್ಟಿವೆ. ನನ್ನ ಉದ್ದೇಶ ಕನ್ನಡನಾಡು-ನುಡಿಗಳಿಗೆ ಸಂಬಂಧಿಸಿದ ಸಮಸ್ಯೆಗಳು ಪರಿಹಾರ ಕಾಣಬೇಕಾದರೆ ಸ್ಪಷ್ಟ ಮತ್ತು ಖಚಿತ ಸಂಗತಿ-ಉದ್ದೇಶಗಳನ್ನಿಟ್ಟುಕೊಂಡು ಒಂದು ಕನ್ನಡಪರ ಚಳವಳಿ ರೂಪುಗೊಂಡು ನಿರಂತರವಾಗಿ ಕಾರ್ಯಪ್ರವೃತ್ತವಾಗಬೇಕು ಎಂಬುದು. ಈಗಿರುವ ಚಳವಳಿಯ ಒಳದಾರಿಗಳು ಮುಚ್ಚಿ ಹೆದ್ದಾರಿಯಲ್ಲಿ ಚಳವಳಿ ನಡೆಯಬೇಕು. ಸದ್ಯದ ಪರಿಸ್ಥಿತಿಯಲ್ಲಿ ಇದು ಒಂದು ಆದರ್ಶ, ಕನಸು, ಎಂಬ ಅರಿವಿನಿಂದಲೇ ಈ ಮಾತುಗಳನ್ನು ದಾಖಲಿಸಿದ್ದೇನೆ.

**ರಾ. ನಂ. ಚಂದ್ರಶೇಖರ**



**ಭಾ**ಷಾನ್ವಯ ರಾಜ್ಯಗಳು ರಚನೆಯಾಗಿ ಅರ್ಧಶತಮಾನ ಕಳೆದ ನಂತರವೂ ಕರ್ನಾಟಕದಲ್ಲಿ ಕನ್ನಡ ಭಾಷೆಯ ಸ್ಥಾನ ಅಭದ್ರವಾಗಿಯೇ ಇರುವುದು ಆತಂಕಪಡಬೇಕಾದ ಸಂಗತಿ. ಅರ್ಧ ಶತಮಾನ ಅನ್ನುವುದು ಒಂದು ನಾಡಿನ ಇತಿಹಾಸದಲ್ಲಿ ಸುದೀರ್ಘವಾದದ್ದಲ್ಲ; ಆದರೆ, ಮಹತ್ವದ್ದು. ಕರ್ನಾಟಕ ಏಕೀಕರಣವಾಗಿ ೫೦ ವರ್ಷಗಳು ತುಂಬಿದ ಸಂದರ್ಭವನ್ನು ಕನ್ನಡಿಗರು ಸಡಗರದಿಂದಲೇ ಆಚರಿಸಿದರು. ರಾಜ್ಯ ಸರ್ಕಾರವೂ ಹಿಂದೆಬೀಳಲಿಲ್ಲ. ಶತಕೋಟಿ ವೆಚ್ಚದಲ್ಲಿ 'ಸುವರ್ಣ ಕರ್ನಾಟಕ ವರ್ಷಾಚರಣೆ' ಕಾರ್ಯಕ್ರಮವನ್ನು ಪ್ರಕಟಿಸಿತು. ಕಾವೇರಿ ನ್ಯಾಯ ಮಂಡಲಿಯ ತೀರ್ಪು ಸರ್ಕಾರದ ಉತ್ಸವ ಆಚರಣೆಗೆ ಅಡ್ಡಿಯಾಯಿತು. ಇದರಿಂದಾಗಿ ಕನ್ನಡ ಜಾಗೃತಿಗೆ ದೊಡ್ಡ ನಷ್ಟವೇನೂ ಆಗದಿದ್ದರೂ ಕೆಲವು ಅಧಿಕಾರಿಗಳಿಗೆ ಮತ್ತು 'ರಾಜಪೂಜಿತ ನುಡಿಸೇವಕ'ರಿಗೆ ನಷ್ಟವಾಯಿತು. ಕನ್ನಡದ ಹಿತರಕ್ಷಣೆಗೆ ಬದ್ಧವಾದ ಸರ್ಕಾರ ಸುವರ್ಣ ಕರ್ನಾಟಕ ವರ್ಷದ ಕೊಡುಗೆಯಾಗಿ ಶಿಕ್ಷಣ ತಜ್ಞರು, ನೈಜ ಕನ್ನಡಾಭಿಮಾನಿಗಳ ವಿರೋಧದ ನಡುವೆಯೂ ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಕಲಿಸುವ ಆದೇಶವನ್ನು ಹೊರಡಿಸಿದ್ದು ಮಾತ್ರವಲ್ಲ, ಅದನ್ನು ಅನುಷ್ಠಾನಗೊಳಿಸಿದೆ. ಸುವರ್ಣ ಸಂಭ್ರಮದ ನಡುವೆಯೇ ಕನ್ನಡ ನಾಡು-ನುಡಿಗಳ ಸ್ಥಿತಿ-ಗತಿಯನ್ನು ಕುರಿತು ಆತಂಕದ ದನಿಗಳು ಗಟ್ಟಿಯಾಗಿಯೇ ಕೇಳಿಬಂದವು. ಶಾಸಕ 'ಮುಖ್ಯಮಂತ್ರಿ' ಚಂದ್ರು ಸಂಚಾಲಕತ್ವದಲ್ಲಿ 'ಕನ್ನಡ ನುಡಿ-ಕನ್ನಡ ಗಡಿ ಜಾಥಾ' ರಾಜ್ಯಾದ್ಯಂತ ಸಂಚರಿಸಿ ಶಿಕ್ಷಣ, ಆಡಳಿತ, ಉದ್ಯೋಗ, ಗಡಿ, ಪ್ರಾದೇಶಿಕ ಅಸಮಾನತೆಗಳ ವಿಚಾರದಲ್ಲಿ 'ಕನ್ನಡ-ಕನ್ನಡಿಗ-ಕರ್ನಾಟಕ'ಗಳು ಎದುರಿಸುತ್ತಿರುವ ಆತಂಕಗಳ ಬಗ್ಗೆ ಜನರ, ಸರ್ಕಾರದ, ಗಮನ ಸೆಳೆಯುವ ಪ್ರಯತ್ನ ಮಾಡಿತು. ಜಾಥಾಕ್ಕೆ ನಾಡಿನ ಬಹುತೇಕ ಗಣ್ಯರ, ಕನ್ನಡ ಪರ ಸಂಘಟನೆಗಳ ಬೆಂಬಲವಿತ್ತು. ಉತ್ಸವದ ಜೊತೆಗೆ ಈ ೫೦ ವರ್ಷಗಳಲ್ಲಿ ಕರ್ನಾಟಕದ ಸಾಧನೆ-ಸೋಲುಗಳ ಬಗ್ಗೆ ವಸ್ತುನಿಷ್ಠ ಸಮೀಕ್ಷೆ ನಡೆಯಬೇಕೆಂಬ ಒತ್ತಾಯವೂ ಕೇಳಿ ಬಂದಿತು. ರಾಜ್ಯದ ಭಾಷಾ ನೀತಿಯಲ್ಲಿ ಗೊಂದಲವಿರುವ ಬಗ್ಗೆ ಸರ್ಕಾರವೇ ಒಪ್ಪಿದೆ. ಒಟ್ಟಿನಲ್ಲಿ ಕನ್ನಡಕ್ಕೆ 'ಸುವರ್ಣ ಚೌಕಟ್ಟು' ಇದೆಯೇ ಹೊರತು ಮುನ್ನಡೆಯಲು 'ಸುವರ್ಣ ಪಥ'ವಿಲ್ಲ. ಆತಂಕದ ನೆರಳಿನಲ್ಲಿರುವ 'ಕನ್ನಡ-ಕನ್ನಡಿಗ- ಕರ್ನಾಟಕ'ಗಳನ್ನು ಅನಾತಂಕದ ಬೆಳಕಿನತ್ತ ಕೊಂಡೊಯ್ಯಲು ಸವೆಸಿದ ಹಾದಿಯಲ್ಲಿ ತಪ್ಪಾದುದು ಎಲ್ಲಿ ಎಂಬುದನ್ನು ಮರುಚಿಂತನೆಗೆ ಗುರಿಪಡಿಸುವ ಅಗತ್ಯವಿದೆ.

**ಅಂದುಕೊಂಡದ್ದು - ಆದದ್ದು:** ಕರ್ನಾಟಕದಲ್ಲಿ ಏಕೀಕರಣ ಮತ್ತು ಸ್ವಾತಂತ್ರ್ಯ ಚಳವಳಿಗಳು ಜೊತೆಯಾಗಿಯೆ ನಡೆದವು. ಸ್ವಯಂ ಅಧಿಕಾರವುಳ್ಳ ಆಡಳಿತವು ದೇಶಭಾಷೆಗಳ ಬೆಳವಣಿಗೆಗೆ ಮುಂದಾಗಿ ಆ ಭಾಷೆಗಳು ಸರ್ವಾಂಗೀಣ ಬೆಳವಣಿಗೆ ಸಾಧಿಸಲು ಸಹಕಾರಿಯಾಗುತ್ತದೆ ಎಂದು ಕನಸು ಕಾಣಲಾಗಿತ್ತು. ಸಂವಿಧಾನ ಅಂಗೀಕರಿಸಿದ ಮುಖ್ಯ ಭಾಷೆಗಳ ಪಟ್ಟಿಯಲ್ಲಿ ಇಂಗ್ಲಿಷ್ ಮತ್ತು ಹಿಂದಿಗಳು ಮಾತ್ರ ವಿಶೇಷ ಸ್ಥಾನ ಪಡೆದವು. ರಾಷ್ಟ್ರ ಬಹುಮತದಿಂದ ಒಪ್ಪಿದ ತ್ರಿಭಾಷಾ ಸೂತ್ರ ಕನ್ನಡಿಗರನ್ನು ಇರಿಯುವ ತ್ರಿಶೂಲವಾಗಿದೆ. ನಿರ್ಲಜ್ಜ ಹಿಂದಿ ಹೇರಿಕೆಯಿಂದಾಗಿ ದೇಶ ಚಿಂದಿಯಾಗಿಲ್ಲದಿರುವುದೊಂದು ವಿಶೇಷ. ರಾಷ್ಟ್ರಭಾಷೆ ಹೆಸರಿನಲ್ಲಿ ರಾಜ್ಯದಲ್ಲಿರುವ ಕೇಂದ್ರ ಸರ್ಕಾರಿ ಕಚೇರಿ-ಉದ್ಯಮಗಳಲ್ಲಿ ಮಿತಿಮೀರಿದ ಹಿಂದಿ ಹೇರಿಕೆಯಿಂದಾಗಿ ಕನ್ನಡ ಕಾಣವುದಿಲ್ಲ; ಕೇಳುವುದಿಲ್ಲ. ಆಕ್ರಮಣಶೀಲರಾದ ಅನ್ಯಭಾಷಿಕರು ಎಲ್ಲ ಸವಲತ್ತುಗಳನ್ನು ಕಬಳಿಸುತ್ತಿದ್ದಾರೆ. ಕೇಂದ್ರ ಸರ್ಕಾರ ಕೆಲವೇ ಭಾಷೆಗಳಿಗೆ ಸವಲತ್ತುಗಳನ್ನು ನೀಡುತ್ತಿರುವುದರಿಂದ ಉಳಿದ ದೇಶಭಾಷೆಗಳು ಹಲವು ಇಕ್ಕಟ್ಟನ್ನು ಎದುರಿಸುತ್ತಿವೆ. (ಅವುಗಳಲ್ಲಿ ಕನ್ನಡವೂ ಸೇರಿದೆ). ಏಕೀಕರಣ ಹುಟ್ಟುಹಾಕಿದ ಕನಸುಗಳು ಕರ್ನಾಟಕದಲ್ಲಿ ಇಂದಿಗೂ ಕನಸಾಗಿಯೆ ಉಳಿದಿವೆ. ಒಂದು ಭಾಷೆ ಆಧುನಿಕ ಜಗತ್ತು ಒಡ್ಡುವ ಸವಾಲುಗಳನ್ನು ಎದುರಿಸಿ ತನ್ನ ಅಸ್ತಿತ್ವ ಉಳಿಸಿಕೊಳ್ಳಬೇಕಾದರೆ ಆಡಳಿತ, ಶಿಕ್ಷಣ ಹಾಗೂ ಸಮುದಾಯದಲ್ಲಿ ವ್ಯಾಪಕವಾಗಿ ಬಳಕೆಯಾಗಬೇಕು. ಭಾಷಾವಾರು ಪ್ರಾಂತ್ಯಗಳ ರಚನೆಯಾಗಿ ಅರ್ಧಶತಮಾನ ಕಳೆದ ನಂತರವೂ ಪ್ರಾಥಮಿಕ ಶಿಕ್ಷಣದಲ್ಲೂ ಮಾಧ್ಯಮವಾಗಿ ಕನ್ನಡ ಅನುಷ್ಠಾನಗೊಂಡಿಲ್ಲ. ಕನ್ನಡದ ಸ್ಥಾನಮಾನವನ್ನು ಕುರಿತು - ಅದರಲ್ಲಿಯೂ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ – ಮಾತನಾಡಬೇಕಾದ ದುಃಸ್ಥಿತಿಯಿರುವುದು ಕನ್ನಡಿಗರ ದೌರ್ಭಾಗ್ಯವೇ ಸರಿ. ವ್ಯವಹಾರದ ಮಾಧ್ಯಮವಾಗಿ 'ತಾಯಿ ನುಡಿ' ಅಥವಾ ಸ್ಥಳೀಯ ಭಾಷೆಯನ್ನು ಜಾರಿಗೆ ತರಬೇಕೆ ಬೇಡವೆ, ಎಂಬ ಚಿಂತನ-ಮಂಥನ ನಮ್ಮ ದೇಶವೊಂದನ್ನು ಬಿಟ್ಟು ಜಗತ್ತಿನ ಇನ್ನಾವ ದೇಶದಲ್ಲೂ ನಡೆಯುತ್ತಿಲ್ಲ. ಏಕೀಕರಣವಾಗಿ ೫೦ ವರ್ಷಗಳು ಕಳೆದ ನಂತರವೂ ಕನ್ನಡ ಭಾಷೆ-ಜನರಿಗೆ ಅಗ್ರಸ್ಥಾನ ದೊರೆತಿಲ್ಲ ಎಂಬುದು ಅಪಮಾನದ ಸಂಗತಿ. ಅದಕ್ಕಿಂತಲೂ ವಿಷಾದದ ಸಂಗತಿಯೆಂದರೆ ಭೌಗೋಳಿಕವಾಗಿ

ಒಂದಾದ ಕನ್ನಡಿಗರು ಭಾವನಾತ್ಮಕವಾಗಿಯೂ ಒಂದಾಗಲು ಸಾಧ್ಯವಾಗದಿರುವುದು. ಪ್ರಾದೇಶಿಕ ಅಸಮಾನತೆ, ಪ್ರಾತಿನಿಧ್ಯದಲ್ಲಿ ತಾರತಮ್ಯಗಳಿಂದಾಗಿ ಪ್ರತ್ಯೇಕತೆಯ ಧ್ವನಿಗಳು ಕೇಳಿಬರುತ್ತಿವೆ ಎಂದರೆ 'ಸುವರ್ಣ ಕರ್ನಾಟಕ ವರ್ಷ' ಆಚರಣೆ ಯಾವ ಪುರುಷಾರ್ಥಕ್ಕೆ ?

**ಕನ್ನಡ ಆಡಳಿತ ಭಾಷೆ : ಮುನ್ನೂರು ಆದೇಶಗಳ ಅನುಷ್ಠಾನ ?**

ಕರ್ನಾಟಕ ಸರ್ಕಾರ ಕನ್ನಡವನ್ನು ಆಡಳಿತ ಭಾಷೆ ಎಂದು ಘೋಷಿಸಿದ್ದು ೧೯೬೩ರಲ್ಲಿ. ಈ ೪೪ ವರ್ಷಗಳಲ್ಲಿ ಕನ್ನಡವನ್ನು ಆಡಳಿತದಲ್ಲಿ ಜಾರಿಗೆತರುವ ನಿಟ್ಟಿನಲ್ಲಿ ಸುಮಾರು ೩೦೦ ಆಜ್ಞೆಗಳು ಬಂದಿವೆ; ಕನ್ನಡವನ್ನು ಆಡಳಿತದಲ್ಲಿ ಬಳಸದ ನೌಕರರ ಮೇಲೆ ಶಿಸ್ತುಕ್ರಮ ಜರುಗಿಸುವ ಆದೇಶಗಳೂ ಬಂದಿವೆ; ಆದರೂ ಜಿಲ್ಲಾ ಮಟ್ಟದಲ್ಲಿ ಕೂಡ ಕನ್ನಡ ಬಳಕೆ ಸಂಪೂರ್ಣವಾಗಿ ಆಗುತ್ತಿಲ್ಲ, ಏಕೆ ? ಗಮನಿಸಬೇಕಾದ ಮಹತ್ವದ ಸಂಗತಿಯೆಂದರೆ, ನಮ್ಮ ಸರ್ಕಾರ ಹೊರಡಿಸುವ ರಾಜ್ಯ ಪತ್ರ (ಗೆಜೆಟ್) ಇಂಗ್ಲಿಷಿನಲ್ಲಿ ಪ್ರಕಟವಾಗಿ ನಂತರ ಕನ್ನಡಕ್ಕೆ ಅನುವಾದವಾಗುತ್ತದೆ. ಇದಕ್ಕೆ ಕಾರಣ ನಮ್ಮ ಸಂವಿಧಾನ ಇಂಗ್ಲಿಷಿಗೆ ಒದಗಿಸಿರುವ ಅಧಿಕೃತತೆ. ಆಡಳಿತದಲ್ಲಿ ಕನ್ನಡ ಭಾಷೆ ನಿರೀಕ್ಷಿತ ಪ್ರಮಾಣದಲ್ಲಿ ಬಳಕೆಯಾಗುತ್ತಿಲ್ಲ ಎಂಬುದನ್ನು ಆಳುವವರೇ ಒಪ್ಪುತ್ತಾರೆ. ಕನ್ನಡವನ್ನು ಆಡಳಿತ ಭಾಷೆಯಾಗಿ ಅನುಷ್ಠಾನಕ್ಕೆ ತರುವ ಉದ್ದೇಶದಿಂದ ಕನ್ನಡ ಕಾವಲು ಸಮಿತಿ ರಚನೆಯಾಯಿತು. ಈಗ ಆಡಳಿತದ ಜೊತೆಗೆ ಮಹಿಷಿ ವರದಿಯನ್ನು ಅನುಷ್ಠಾನಕ್ಕೆ ತರುವ ಜವಾಬ್ದಾರಿ ಹೊತ್ತು 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ದ ಅಧ್ಯಕ್ಷರಿಗೆ ದಂಡನಾಧಿಕಾರವೂ ಇದೆ. ಆದರೆ, ಕನ್ನಡದ ವಿಚಾರದಲ್ಲಿ ಅದು ಮಾಡಿರುವ ಮಾಡುತ್ತಿರುವ ಕೆಲಸ ತೃಪ್ತಿದಾಯಕವಾಗಿಲ್ಲ. ಅದೂ ಇನ್ನೊಂದು ಸರ್ಕಾರಿ ಇಲಾಖೆಯಾಗಿದೆಯಷ್ಟೆ. ಸಾರ್ವಜನಿಕವಾಗಿ ಪ್ರದರ್ಶಿತವಾಗುವ ಎಲ್ಲ ನಾಮಫಲಕಗಳಲ್ಲಿ ಕನ್ನಡಕ್ಕೆ ಅಗ್ರಸ್ಥಾನವಿರಬೇಕೆಂದು ಆಜ್ಞೆ ಬಂದು ಸರಿಯಾಗಿ ೨೦ ವರ್ಷಗಳಾಯಿತು. ಅನುಷ್ಠಾನಕ್ಕೆ ಬಂದಿಲ್ಲವೆಂಬುದಕ್ಕೆ ಪುರಾವೆ ಬೇಕಿಲ್ಲ, ಇದು ಆಳುವವರ 'ಕನ್ನಡ ಬದ್ಧತೆ'ಯ ಕೊರತೆಗೆ ಜ್ವಲಂತ ಸಾಕ್ಷಿ.

ಅರವತ್ತರ ದಶಕದಲ್ಲಿ ಕನ್ನಡವನ್ನು ಉನ್ನತ ಶಿಕ್ಷಣದ ಮಾಧ್ಯಮವನ್ನಾಗಿ ಮಾಡುವ ಪ್ರಾಮಾಣಿಕ ಪ್ರಯತ್ನಗಳು ನಡೆದವು. ಅದನ್ನು ಆಗುಮಾಡಲು ಬೃಹತ್ ಪ್ರಮಾಣದಲ್ಲಿ ಪಠ್ಯಪುಸ್ತಕ, ಪರಾಮರ್ಶನ ಗ್ರಂಥಗಳು ಕನ್ನಡದಲ್ಲಿ ಬಂದವು. ಬಳಕೆ ಮಾತ್ರ ಆಗಲಿಲ್ಲ, ಇಂದು ಅವೆಲ್ಲ ಧೂಳು ನಡುವೆ ಸೇರಿ ಹೋಗಿವೆ. ಒಟ್ಟಿನಲ್ಲಿ ಇಂಗ್ಲಿಷ್ ವ್ಯಾಮೋಹದಲ್ಲಿ ಕನ್ನಡವು ಶಿಕ್ಷಣ ಕ್ಷೇತ್ರದಲ್ಲಿ ದಿನದಿಂದ ದಿನಕ್ಕೆ ಕ್ಷಯಿಸುತ್ತಿದೆ. ಹೀಗೆ ಕನ್ನಡದ ದುಃಸ್ಥಿತಿಯ ಬಗ್ಗೆ ಎಷ್ಟು ಬೇಕಾದರೂ ಹೇಳಬಹುದು. ಒಟ್ಟಿನಲ್ಲಿ ಹೇಳುವುದಾದರೆ ಕರ್ನಾಟಕದಲ್ಲಿ 'ಕನ್ನಡ ಅನಾಥ' ಮತ್ತು ಕನ್ನಡಿಗ 'ಸ್ಥಳೀಯ ನಿರಾಶ್ರಿತ'.

**ಸುವರ್ಣ ಕರ್ನಾಟಕ ವರ್ಷದಲ್ಲೂ ಕನ್ನಡದ ಅವಗಣನೆ**

ತಮಿಳಿಗೆ ಶಾಸ್ತ್ರೀಯ ಭಾಷೆ ಸ್ಥಾನ-ಮಾನ ನೀಡಿದ ಕೇಂದ್ರ ಸರ್ಕಾರವು ತಮಿಳಿನಷ್ಟೇ ಅರ್ಹತೆಯುಳ್ಳ ಕನ್ನಡಕ್ಕೆ ಆ ಸ್ಥಾನವನ್ನು ನೀಡಲು ಮೀನ-ಮೇಷ ಎಣಿಸುತ್ತಿದೆ. ರೈಲ್ವೆ ಇಲಾಖೆಯಲ್ಲಿ ಕನ್ನಡ ಅಳಿಸಿ ಹಿಂದಿ-ಇಂಗ್ಲಿಷ್ ಮಾತ್ರ ಬಳಸಲು ಆದೇಶ ಹೊರಡಿಸಲಾಯಿತು. ಪ್ರತಿಭಟನೆಯ ನಂತರ ಕನ್ನಡ ನಾಮಫಲಕ ಅಳಿಸುವುದನ್ನು ನಿಲ್ಲಿಸಿತು. ಆದರೆ, ಅಳಿಸಿದ ಕನ್ನಡವನ್ನು ಮತ್ತೆ ಬರೆದಿಲ್ಲ. ಇದಾದ ಸ್ವಲ್ಪದಿನದಲ್ಲೇ ಬೆಂಗಳೂರು ನಗರ ರೈಲ್ವೆ ನಿಲ್ದಾಣದಲ್ಲಿ ತಮಿಳಿನ ಕಾದಿರಿಸುವ ಚೀಟಿಗಳು ಕಾಣಿಸಿಕೊಂಡವು. ಇವು ಬೇಡ, ಕನ್ನಡದಲ್ಲಿರುವ ಚೀಟಿಗಳನ್ನು ಕಳಿಸಿರೆಂದು ಅಧಿಕಾರಿಗಳು ಕೇಳಲಿಲ್ಲ! ಕೇಂದ್ರ ಸರ್ಕಾರ ಬಿಡಿ, ಕರ್ನಾಟಕ ಸರ್ಕಾರವೇ ಜಾಗೃತ ಕನ್ನಡಿಗರ ಕೂಗನ್ನು ಕಡೆಗಣಿಸಿ, ಇಂಗ್ಲಿಷ್‌ಅನ್ನು ಒಂದನೇ ತರಗತಿಯಿಂದಲೇ ಕಲಿಸಲು ಆರಂಭಿಸಿದೆ. ಐದನೇ ತರಗತಿಯ ಸಮಾಜ ವಿಜ್ಞಾನದಲ್ಲಿ ಕರ್ನಾಟಕ ಇತಿಹಾಸಕ್ಕೆ ಅಪಚಾರವೆಸಲಾಗಿದೆ. ಪ್ರತಿಭಟನೆಯ ನಂತರವೂ ತಪ್ಪುಗಳನ್ನು ಸರಿಪಡಿಸಲಿಲ್ಲ, ಒಂದರಿಂದ ಹತ್ತನೇ ತರಗತಿಯವರೆಗಿನ ಪಠ್ಯದಲ್ಲಿ ಹೇರಳವಾಗಿ ತಪ್ಪುಗಳಿವೆ. ಬ್ಯಾರಿ ಅಕಾಡೆಮಿಯನ್ನು ಸ್ಥಾಪಿಸಲಾಗಿದೆ; ಸಂಸ್ಕೃತ ನಿರ್ದೇಶನಾಲಯ ಸ್ಥಾಪಿಸಲಾಗುವುದು ಎಂದು ಶಿಕ್ಷಣ ಸಚಿವರು ಹೇಳಿದ್ದಾರೆ. ಕೊಂಕಣಿಯನ್ನು ಪ್ರಥಮ ಭಾಷೆಯಾಗಿ ಕಲಿಸುವ ಆದೇಶ ಹೊರಡಿಸಿದ್ದಾರೆ. ಆದರೆ ಕನ್ನಡದ ಬಗ್ಗೆ ಉಪೇಕ್ಷೆ. 'ಸಮಸ್ಯೆ ಇಲ್ಲದ ಕಡೆ ಒಂದು ಸಮಸ್ಯೆ ಸೃಷ್ಟಿಸು' ಎನ್ನುವ ಮಾತನ್ನು ಕನ್ನಡದ ವಿಚಾರದಲ್ಲಿ ಸರ್ಕಾರಗಳು ಅನುಷ್ಠಾನಗೊಳಿಸಿವೆ.

**ಕನ್ನಡದ ಆತಂಕ ನಿವಾರಣೆ ಹೇಗೆ ?**

ಎರಡು ಸಾವಿರ ವರ್ಷಗಳಿಂದ ಉಳಿದುಬಂದಿರುವ ಕನ್ನಡದ ಅಸ್ತಿತ್ವಕ್ಕೆ ಯಾವುದೇ ಅಪಾಯ ಬಾರದು ಎಂಬ ಅಭಿಪ್ರಾಯವಿದೆ. ಸಂಸ್ಕೃತ, ಪ್ರಾಕೃತದಂತಹ ಭಾಷೆಗಳನ್ನು ಎದುರಿಸಿ ಕನ್ನಡ ತನ್ನ ಅನನ್ಯತೆಯನ್ನು ಉಳಿಸಿಕೊಂಡು, ಆ ಭಾಷೆಗಳನ್ನು ಅಡಕಮಾಡಿಕೊಂಡು, ಬೆಳೆಯಿತು. ಆದರೆ ಇಂದು ಇಂಗ್ಲಿಷ್ ವಿಶ್ವವ್ಯಾಪಿಯಾಗಿರುವುದು ಮಾತ್ರವಲ್ಲ, ಹಲವು ದೇಶಗಳ ಅಲ್ಲಿನ ಭಾಷೆಗಳನ್ನು ನುಂಗಿ ಇಂಗ್ಲಿಷ್ ವಿರಾಜಮಾನವಾಗಿದೆ. ಹಿಂದಿ ಸಾಮ್ರಾಜ್ಯಶಾಹಿ ಧೋರಣೆ ನಿಜವಾಗಿಯೂ ಆತಂಕ ಹುಟ್ಟಿಸುತ್ತಿದೆ. ಇಂದು ಕನ್ನಡ ಅನನ್ಯತೆಯನ್ನು ಉಳಿಸಿಕೊಳ್ಳಬೇಕಾದರೆ ಜ್ಞಾನದ ಜೊತೆಗೆ ಅದು ಅನ್ನವನ್ನು ಗಳಿಸಿಕೊಡುವ ಶಕ್ತಿಯನ್ನು ಗಳಿಸಿಕೊಳ್ಳಬೇಕು. ಸಾಹಿತ್ಯಕವಾಗಿ ಮಾತ್ರ ಕನ್ನಡ ಶ್ರೀಮಂತವಾಗಿದೆ, ಉಳಿದ ಜ್ಞಾನಶಾಖೆಗಳಲ್ಲಿ ಕನ್ನಡ ಶೈಶವಾವಸ್ಥೆಯನ್ನು ದಾಟಿಲ್ಲ. ಕನ್ನಡ ಭಾಷೆಯ ಬೆಳವಣಿಗೆಯೆಂದರೆ ಸಾಹಿತ್ಯದ ಬೆಳವಣಿಗೆ ಮಾತ್ರವಲ್ಲ ಎನ್ನುವುದನ್ನು ಅರಿತು ಕನ್ನಡವನ್ನು ಎಲ್ಲ ಕ್ಷೇತ್ರಗಳಲ್ಲಿ ಸಜ್ಜುಗೊಳಿಸುವ ಕೆಲಸ ಆಗಬೇಕು. ಇಲ್ಲಿ ಭಾವನಾತ್ಮಕ ಸ್ಪಂದನಕ್ಕಿಂತ ಬೌದ್ಧಿಕ ಸ್ಪಂದನ ಬೇಕು. ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡಲು ಸಹ ಇಚ್ಛಾಶಕ್ತಿ ಪ್ರದರ್ಶಿಸದ ಸರ್ಕಾರದಿಂದ ಈ ಕೆಲಸ ಮಾಡಿಸಬೇಕಾದರೆ ಕನ್ನಡ ಜನ ಹೆಚ್ಚು ಸಂಘಟಿತರಾಗಬೇಕು. ವ್ಯವಸ್ಥಿತ ಯೋಜನೆಯ ಮೂಲಕ ಕನ್ನಡದ ಸಾಧ್ಯತೆಯನ್ನು ಹೆಚ್ಚಿಸಿ ಆಧುನಿಕತೆಯ ಎಲ್ಲ ಅಗತ್ಯಗಳನ್ನೂ ಕನ್ನಡವು ಪೂರೈಸುವಂತೆ ಸಶಕ್ತಗೊಳಿಸುವ ಕಾಲಬದ್ಧ ಯೋಜನೆಯನ್ನು ರೂಪಿಸಲು ಸರ್ಕಾರದ ಮೇಲೆ ಒತ್ತಡ ತರಬೇಕು. ಈ ಕೆಲಸವನ್ನು ಮಾಡಬೇಕು ಎಂದು ಕನ್ನಡಾಭಿಮಾನಿಗಳು ನಿರೀಕ್ಷಿಸುವ 'ಕನ್ನಡ ಚಳವಳಿ'ಗೆ ಆ ಶಕ್ತಿಯಿಲ್ಲ. ಚಳವಳಿ ಎನ್ನುವುದು ಚಲನಶೀಲವಾದದ್ದು. ಚಲನವಲನವೇ ಚಳವಳಿ. ಇದನ್ನು ಇಂಗ್ಲಿಷ್‌ನಲ್ಲಿ 'ಮೂವ್‌ಮೆಂಟ್' ಎನ್ನುತ್ತಾರೆ. ಕನ್ನಡಪರ ಹೋರಾಟದ ಇತಿಹಾಸವನ್ನು ಅವಲೋಕಿಸಿದರೆ ಕನ್ನಡ ಚಳವಳಿ ಎಂದೂ ಒಂದು ಆಂದೋಲನವಾಗಿ ರೂಪುಗೊಳ್ಳದಿರುವುದು ವೇದ್ಯವಾಗುತ್ತದೆ. ಕನ್ನಡ ಚಳವಳಿ (ಹೋರಾಟ) ಪ್ರತಿಕ್ರಿಯಾತ್ಮಕವಾದದ್ದೇ ಹೊರತು ಕ್ರಿಯಾತ್ಮಕವಾದದ್ದಲ್ಲ. ಕೆಲವು ನಿರ್ದಿಷ್ಟ ಘಟನೆ, ಸಂದರ್ಭಗಳನ್ನು ಬಿಟ್ಟರೆ ಕನ್ನಡ ಹೋರಾಟ ಭಾವನಾತ್ಮಕ ನೆಲೆಯಲ್ಲಿ ರಕ್ಷಣಾತ್ಮಕವಾಗಿ ನಡೆದಿದೆ. ಕನ್ನಡಪರ ಹೋರಾಟದಲ್ಲಿ ಜಾತೀಯತೆ, ಗುಂಪುಗಾರಿಕೆ, ಕನ್ನಡ ನಿಷ್ಠೆಯನ್ನು ಮೀರಿದ ಸ್ವಾರ್ಥ ಹಾಗೂ ವ್ಯಕ್ತಿ ನಿಷ್ಠೆ ಎಂಬುವೂ ಸ್ವಲ್ಪ ಪ್ರಮಾಣದಲ್ಲಿ ಸೇರಿಕೊಂಡಿರುವುದು ಕನ್ನಡ ಚಳವಳಿ ವ್ಯಾಪಕತೆಯನ್ನು ಪಡೆದುಕೊಳ್ಳದಿರುವುದಕ್ಕೆ ಒಂದು ಕಾರಣ. ಇಷ್ಟೆಲ್ಲ ಮಿತಿಗಳ ನಡುವೆಯೂ ಕರ್ನಾಟಕದಲ್ಲಿ ಆಗಿರುವ ಎಲ್ಲ ಕನ್ನಡ ಪರ ಕೆಲಸಗಳೂ ಕನ್ನಡ ಚಳವಳಿಯಿಂದಲೇ ಆಗಿವೆ ಎಂಬುದನ್ನು ಮರೆಯಲಾಗದು. ಕನ್ನಡ ಕಾರ್ಯಕರ್ತರಲ್ಲಿ ಕನ್ನಡ ನಾಡು-ನುಡಿಯ ಬಗ್ಗೆ ಅಪಾರ ನಿಷ್ಠೆಯಿದೆ, ಅಭಿಮಾನವಿದೆ. ಇವನ್ನು ಬಳಸಿಕೊಂಡು ಸ್ಪಷ್ಟ-ನಿರ್ದಿಷ್ಟ ಗುರಿಯನ್ನಿಟ್ಟುಕೊಂಡು ಕಾರ್ಯಶೀಲವಾಗುವ ಸಂಘಟನೆಯೊಂದು ರೂಪುಗೊಂಡರೆ ಕನ್ನಡದ ಆತಂಕದ ನೆರಳು ಚದುರಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಕನ್ನಡ ಸಮಸ್ಯೆ ಎಂದರೆ ಕನ್ನಡಭಾಷೆ, ಕನ್ನಡಿಗರು, ಕರ್ನಾಟಕಗಳನ್ನು ಒಳಗೊಂಡದ್ದು. ಕನ್ನಡ ಚಳವಳಿ ಎಂದೂ ಬರೀ ಭಾಷಾ ಸಮಸ್ಯೆಗೇ ಸೀಮಿತವಾಗಿಲ್ಲ, ನೆಲ-ಜಲ-ಜನ ಹೀಗೆ ಎಲ್ಲ ಸಮಸ್ಯೆಗೂ ಸ್ಪಂದಿಸುವುದು ಅದರ ಲಕ್ಷಣ. ಇಲ್ಲಿ ನೇರವಾಗಿ ಕನ್ನಡ ಭಾಷೆಗೇ ಸೀಮಿತವಾಗಿ ಭಾಷಿಕನೆಲೆಯ ಸಮಸ್ಯೆಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಕನ್ನಡ-ಕನ್ನಡಿಗ-ಕರ್ನಾಟಕಗಳು ಎದುರಿಸುತ್ತಿರುವ ಎಲ್ಲ ಸಮಸ್ಯೆಗಳನ್ನು ಪ್ರಸ್ತಾಪಿಸಲು ವಿಸ್ತಾರವಾದ ಅಧ್ಯಯನ ಅಗತ್ಯ. ಗೊತ್ತಿರುವ ಸಮಸ್ಯೆಗಳನ್ನು ಪ್ರಸ್ತಾಪಿಸಿದರೇ ಕಿರುಹೊತ್ತಿಗೆಯಾಗಿಬಿಡುತ್ತದೆ. ಕನ್ನಡ ಭಾಷೆಗೆ ಸಂಬಂಧಿಸಿದಂತೆಯೇ ಹೇಳಬಹುದಾದ ಮಾತುಗಳು ಸಾಕಷ್ಟಿವೆ. ನನ್ನ ಉದ್ದೇಶ ಕನ್ನಡ ನಾಡು-ನುಡಿಗಳಿಗೆ ಸಂಬಂಧಿಸಿದ ಸಮಸ್ಯೆಗಳು ಪರಿಹಾರ ಕಾಣಬೇಕಾದರೆ ಸ್ಪಷ್ಟ ಮತ್ತು ಖಚಿತ ಸಂಗತಿ-ಉದ್ದೇಶಗಳನ್ನಿಟ್ಟುಕೊಂಡು ಒಂದು ಕನ್ನಡಪರ ಚಳವಳಿ ರೂಪುಗೊಂಡು ನಿರಂತರವಾಗಿ ಕಾರ್ಯಪ್ರವೃತ್ತವಾಗಬೇಕು ಎಂಬುದು. ಈಗಿರುವ ಚಳವಳಿಯ ಒಳದಾರಿಗಳು ಮುಚ್ಚಿ ಹೆದ್ದಾರಿಯಲ್ಲಿ ಚಳವಳಿ ನಡೆಯಬೇಕು. ಸದ್ಯದ ಪರಿಸ್ಥಿತಿಯಲ್ಲಿ ಇದು ಒಂದು ಆದರ್ಶ, ಕನಸು, ಎಂಬ ಅರಿವಿನಿಂದಲೇ ಈ ಮಾತುಗಳನ್ನು ದಾಖಲಿಸಿದ್ದೇನೆ.

ಡಾ. ಸಂ. ಚಂದ್ರಶೇಖರ
ನಂ.೧, 'ಶ್ರೀ ನಿಲಯ', ಮಾರಮ್ಮ ದೇವಸ್ಥಾನದ ರಸ್ತೆ, ಕತ್ರಿಗುಪ್ಪೆ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦೦೮೫

**ಪಾಠ**

ಕಪ್ಪೆಯೇ ನಿನ್ನ ಇಡೀ ದೇಹ
ಸಿಲುಕಿದೆ ಹಾವಿನ ಬಾಯಿಗೆ
ಕಲಿತುಕೋ ಹಾರುವುದ
ನಿನ್ನ ನಾಲಿಗೆಯ ಕೀಟದ ಹಾಗೆ

ವಾಸುದೇವ ನಾಡಿಗ್
ಜವಾಹರ್ ನವೋದಯ ವಿದ್ಯಾಲಯ
ಏನಿಗದಲೆ - ೫೬೩ ೧೨೫
ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ

# ಮಕ್ಕಳ ಸೈಕಲ್ ಲೋಕ



ನಮ್ಮ ಎಲೆ, ಚಿಗುರು, ಹಸಿರು ಸಮೃದ್ಧ ಜಯನಗರದ ೮ನೇ ಬಡಾವಣೆಯ ದೃಶ್ಯ ವೈಭವ, ನೋಡಿ, ಓಡಾಡಿಯೇ ಆನಂದಿಸಬೇಕು. ಇಲ್ಲಿಯ ೪೨ನೇ ಅಡ್ಡರಸ್ತೆಯ ವಿಶೇಷ ಇನ್ನೊಂದು ಬಗೆಯದು. ಇಲ್ಲಿಯ ಚಿಲ್ಟುಪಿಲ್ಟುಗಳು ಸಂಜೆಯಾದೊಡನೆ ಸೈಕಲ್ ಏರಿ, ಬಾಲ್ಯದ ಆನಂದ ಸವಿಯುವ ದೃಶ್ಯ ಮನಮೋಹಕ. ಇವಕ್ಕೆಲ್ಲಾ ನಾಯಕಿ ನಮ್ಮ ಮನೆಯ ಮೇಧಾ. ಅವಳು ಏಳನೇ ತರಗತಿಯಲ್ಲಿದ್ದರೂ, ಮಿತ್ರವರ್ಗದವರ್‍ಯಾರೂ ನಾಲ್ಕನೇ ಕ್ಲಾಸ್ ದಾಟದವರೇ. ಈಪಾಟಿ ಸೈಕಲ್‌ಗಳು ರೋಡಿನಲ್ಲಿ ಮಕ್ಕಳನ್ನು ಹೊತ್ತು ತಿರುಗೋಕೆ ಮೇಧಾಳೇ ಮೂಲ ಸ್ಫೂರ್ತಿ. ಇವರ ನಡುವೆ ಅನಘ, ಸಿಂಧು, ಹರ್ಷಿತಾ, ಅನಿರುದ್ಧ, ಲಿಖಿತ್ ಹೀಗೆ ಒಂದು ಹದಿನೈದು ಬಾಲಸದಸ್ಯರಾದರೂ ಇದ್ದಾರೆ. ಮಹಡಿಮನೆ ಹರ್ಷಿತಾ ಅಜ್ಜಿ ಕಮಲಮ್ಮ ಬಲು ಕಕ್ಕುಲತೆಯಿಂದ ಹೇಳುವುದುಂಟು,

''ಮಕ್ಕಳಿಗೇನಾದ್ರೂ ಎಲೆಕ್ಷನ್ ಇದ್ದಿದ್ರೆ, ನಮ್ಮ ರೋಡಿನ ಪುಟಾಣಿಗಳೆಲ್ಲಾ, ಈ ಮೇಧಾಳನ್ನೆ ಲೀಡರ್ ಆಗಿ ಆರಿಸಿರೋವ್ರು'' ಎಂದು.

ಮೇಧಾ ಮಾತ್ರ ಈ ಯಾವ ಪರಿವೆ ಇಲ್ಲದೆ, ಈ ರಸ್ತೆಯ ಬಾಲವೃಂದಕ್ಕೆ, ವೈಯಕ್ತಿಕ ಗಮನಕೊಟ್ಟು, ಸೈಕಲ್ ತುಳಿಯುವುದನ್ನು ಕಲಿಸಿ, ಅವುಗಳಲ್ಲಿ ಸ್ವಾಭಿಮಾನದ ಕೆಚ್ಚು ತುಂಬಿದ್ದಾಳೆ.

''ಮೇಧಕ್ಕ, ಟರ್ನ್ ಹೀಗೆ ತೆಗೊಳ್ಳಲಾ ? ಸ್ಟಾಂಡ್ ಹೀಗೆ ಹಾಕಬಹುದಾ ? ಬೆಲ್ ಯಾವಾಗ ಮಾಡಬೇಕು ? ಎದುರಿಗೆ ಲಾರಿ, ಬಸ್ಸು ಬಂದರೆ ಏನು ಮಾಡೋದು ?'' ಇಂತಹ ಪ್ರಶ್ನೆಗಳು.

ಇವು ಮುಗ್ಧವಾಗಿ ಕೇಳುವುದು ಸರ್ವೇಸಾಮಾನ್ಯ. ದಿವ್ಯ ಆತ್ಮಾಭಿಮಾನದಿಂದ ಮೇಧಾ ಉತ್ತರಿಸುತ್ತಾಳೆ. 'ಸಿಂಗಲ್' ಚೆನ್ನಾಗಿ ತುಳಿಯುವ ಮಕ್ಕಳಿಗೆ 'ಡಬಲ್ಸ್' ಕಲಿಸಿ, ಸ್ವತಃ ತಾನೇ ಪರೀಕ್ಷಕಳಂತೆ ಹಿಂದೆ ಕುಳಿತು ಟೆಸ್ಟ್‌ರೈಡ್ ತೆಗೆದುಕೊಂಡು, ತೃಪ್ತಿಯಾದಲ್ಲಿ ಮಾತ್ರ, ನಂತರ ಇತರರನ್ನು ಕೂರಿಸಿಕೊಳ್ಳಲು, ಪರವಾನಗಿ ನೀಡುತ್ತಾಳೆ. ಈ 'ಡಬಲ್ಸ್' ಪರೀಕ್ಷೆಯಲ್ಲಿ ಈಚೆಗೆ ಜಯಶಾಲಿಯಾಗಿ ಬಂದವಳು ಅನಘ. ನಾಲ್ಕನೇ ಕ್ಲಾಸ್ ವಿದ್ಯಾರ್ಥಿನಿ. ಇವಳಿಗೂ ಮೇಧಾಗೂ, ಬರಿಯ ಸೈಕಲ್ ಮಾತ್ರವಲ್ಲ, ಅನೇಕ ಬೊಂಬೆಗಳು ಇವರ ಆಟದ ಆಸ್ತಿ. ಅಂತಹ ಗಾಢ ಸ್ನೇಹ. ಅನಘ ಮಾತಲ್ಲಿ ಬಲು ಜಾಣೆ. ಅವಳ 'ಡಬಲ್ಸ್' ಪ್ರಾವೀಣ್ಯದ ಬಗ್ಗೆ ಗುರು ಮೇಧಾಗೂ ಬಲು ಹೆಮ್ಮೆ. ಈ ಪುಟ್ಟ ಮಾಸ್ತರಿಣಿಯನ್ನು ಮೆಚ್ಚಿಸಲು, ಅವಳು ಸೈಕಲ್ ತುಳಿದಿದ್ದೇ ತುಳಿದಿದ್ದು.

ಮೊನ್ನೆ ನಮ್ಮ ಎಸ್ಟೀಮ್ ಕಾರು ಎದುರು ಮನೆಯ ಇದಿರಿನ ಮರದಡಿ, ಗಾಂಭೀರ್ಯದಿಂದ ಶೋಭಿಸುತ್ತಿತ್ತು. ಪಕ್ಕದ ಪುಟಾಣಿ ಮಯೂರನ ಮನೆ ಮುಂದೆ, ಆಗತಾನೇ ಬಂಧುವಿನ ಒಂದು ಕಾರು ಬಂದು ನಿಂತು, ಈ ಎರಡು ಕಾರಿನ ನಡುವಿನ ರಸ್ತೆ ಕಿರಿದೋ ಕಿರಿದು. ಸರಿ ಬಾಲ ಸೈಕಲ್ ಪ್ರಜೆಗಳ 'ಸೈಕಲ್ ಆಟ' ಶುರುವಾಗೇಬಿಟ್ಟಿತು. ಈ ಕಿರಿದಾದ, ಎರಡು ಕಾರಿನ ನಡುವೆ ಹಾಯುವಾಗ ಸ್ವಲ್ಪ ಹುಷಾರಾಗೇ ಓಡಿಸುತ್ತಿದ್ದವು. ಅನಘ ರಸ್ತೆಯ ಆ ತುದಿಯಿಂದ 'ಡಬಲ್ಸ್'ನಲ್ಲಿ, ಆತ್ಮವಿಶ್ವಾಸದಿಂದ ಬರುತ್ತಿದ್ದವಳಿಗೆ, ಇನ್ನು ಸ್ವಲ್ಪ ದೊಡ್ಡ ಹುಡುಗರು, ಹಿಂಬಾಲಿಸಿದಂತೆ ಬಂದಿದ್ದು ಭಯ ಮೂಡಿಸಿತೇನೋ! 'ಮೇಧಾ, ಮೇಧಾ' ಎಂಧು ಗಾಬರಿಯಿಂದ ಕೂಗುತ್ತಾ, ಮುಂದಿದ್ದ ನಮ್ಮ ಎಸ್ಟೀಮ್ ಕಾರಿನ ಹಿಂಬದಿಯ ಲೈಟ್‌ಗೆ ಗುದ್ದಿಯೇಬಿಟ್ಟಳು. ಅಷ್ಟು ಚಂದವಾದ, ಸೂರ್ಯಪ್ರಕಾಶದಂತೆ ಬೆಳಕು ಹೊಮ್ಮಿಸುತ್ತಿದ್ದ, ಆ ಲೈಟು ಸೀಳಿ, ಹೊರಬಂತು. ಅಲ್ಲಾಡತೊಡಗಿತು. ಅನಘಳ ಕಣ್ಣಲ್ಲಿ ಬಳಬಳ ನೀರು. ಮೇಧಾಳ ಕಣ್ಣಾಲಿಗಳು ತುಂಬಿಬಂದಿವೆ. ತನ್ನ ಗುರುತ್ವದ ಗುರುತರ ಪರಿಣಾಮ, ಭಯದ ತರಂಗಗಳೆಬ್ಬಿಸಿದವು. ಆಗಷ್ಟೇ ವಾಕಿಂಗ್‌ನಿಂದ ವಾಪಸ್ಸಾಗುತ್ತಿದ್ದ ಅಪ್ಪ ಅಮ್ಮನನ್ನು ತಬ್ಬಿ, ಅನಘ ಅಳಲಾರಂಭಿಸಿದಳು. ಅವರ ಸಮಾಧಾನದ ಮಾತು ''ಅಳಬೇಡಾ ಪುಟ್ಟಾ, ಅಂಕಲ್ ಏನೂ ಅನ್ನೋಲ್ಲ. ಬಹಳ ಒಳ್ಳೇವ್ರು ಮೇಧೂ ಅಪ್ಪಾ, ಸಾರಿ ಹೇಳಿಬಿಡು. ಏನೂ ಅನ್ನೋಲ್ಲ.''

ಮೇಧಾಳ ಅಪ್ಪ ಹಿರಿಯ ಮಗಳನ್ನು ಟ್ಯೂಷನ್‌ಗೆ ಬಿಡಲು ಹೋಗಿದ್ದರು. ಮಹಡಿಯಿಂದ ಎಲ್ಲವನ್ನು ವೀಕ್ಷಿಸುತ್ತಿದ್ದ ನಾನು ತುಸು ಖಾರವಾಗಿಯೇ ಹೇಳಿದೆ, ''ಮೊನ್ನೆ ತಾನೇ ಕಾರಿಗೆ ಮೂರು ಸಾವಿರ ಖರ್ಚುಮಾಡಿ ಲಕಲಕ ಹೊಳೆಯೊ ಹಾಗೆ ನಿಲ್ಲಿಸಿದ್ದರು. ಪಾಪ!''

ಅಷ್ಟರಲ್ಲಿ ಮರಳಿದ ಕಾರೊಡೆಯ, ಇಡೀ ಪ್ರಸಂಗದ ನಿವೇದನೆ, ತಪ್ಪೊಪ್ಪಿಗೆಗೆ ಬಂದ ಅನಘಳ ಸಂಸಾರಕ್ಕೆ ''ಪರ್ವಾಗಿಲ್ಲ ಬಿಡಿ. ಏನು ಮಾಡೋಕಾಗತ್ತೆ? ನಮ್ಮನೆ ಮಗೂನೇ ಒಡೆದಿದ್ರೆ ?'' ಎಂದು ಕಾಫಿ ಉಪಚಾರವೂ ಮಾಡಿ ಕಳಿಸಿ, ಶೋರೂಂಗೆ ಫೋನ್ ಮಾಡಿದರು ಈ ಟೈಲ್-ಲ್ಯಾಂಪ್ ಬೆಲೆ ತಿಳಿದುಕೊಳ್ಳಲು. ಕೇವಲ ೧೫೭೦ ರೂಪಾಯಿ ಎಂದು ತಿಳಿಯಿತು. ಮೇಧಾಳಿಗಂತೂ ಅಪರಾಧಿ ಭಾವ.

''ನಾನೇ ಎಲ್ಲರಿಗೂ ಸೈಕಲ್ ಕಲಿಸಿದ್ದು, ನಮ್ಮನೆ ಕಾರಿಗೆ ಸುಮ್ಮನೆ ಪೆಟ್ಟಾಯಿತು. ಅಪ್ಪಾ, ಸಾರಿ ನಾನು ಇನ್ನು ಮೇಲೆ ಬರಿ ಓದಕೋತೀನಿ, ಸೈಕಲ್ ಆಡೋದಿಲ್ಲ'' ಎಂಬ ಮಾತುಕೊಟ್ಟಳು.

ಈ ವಾಗ್ದಾನವನ್ನು ಮೇಧಾ ಮಾರನೆಯ ದಿನ ಸಂಜೆಯೇ ಗಾಳಿಗೆ ತೂರಿಬಿಟ್ಟಳು. ಅವಳ ಅಚ್ಚರಿ ಹೆಚ್ಚಿದ್ದು, ಅನಘ ೧೬೦೦ ರೂ. ಕೊಟ್ಟುತಂದು ತುಳಿಯುತ್ತಿದ್ದ, ಕೆಂಪು ಬಣ್ಣದ, ಹೊಸ ವಿನ್ಯಾಸದ ಶೋರೂಂ ಸೈಕಲ್. ಅದನ್ನೊಮ್ಮೆ ಪ್ರೀತಿಯಿಂದ ಸವರಿದ ಮೇಧಾ, ಒಂದು ರೌಂಡ್ ಹೋಗಿಬಂದು, ಸಂಭ್ರಮಪಟ್ಟಳು. ಆಶ್ಚರ್ಯವೆಂದರೆ, ನಮ್ಮ ಟೈಲ್-ಲ್ಯಾಂಪ್ ಬೆಲೆಗೆ ಹೆಚ್ಚುಕಮ್ಮಿ ಯಾವ ತೊಂದರೆಯೂ ಇಲ್ಲದೆ ಅನಘಳ ಸೈಕಲ್ ಬಂದಾಗಿತ್ತು. ಸೈಕಲ್ ತುಳಿಯುವ ಮಕ್ಕಳಿಗೆ ತಾಯಂದಿರ ಗೃಹಕೃತ್ಯದ ಖರೀದಿಯಲ್ಲಿ ಸಹಕಾರ ನೀಡುವ ಆಸೆ. ಮೊನ್ನೆ ಮೇಧಾ ಹತ್ತಿರದ ಬೇಕರಿಗೆ ಹೋಗಿಬಂದಳು. ''ಅಮ್ಮಾ ನೋಡಮ್ಮಾ, ಬೇಕರಿ ಹತ್ತಿರ ಈ ಸೈಕಲ್ ನಿನಗೆ ಯಡಿಯೂರಪ್ಪ ತೆಕ್ಕೊಟ್ಟರಾ ? ಅಂತಾ ಕೇಳಿದರು. ಅದಕ್ಕೆ ಯಾಕ್ರೀ, ನಿಮಗೆ ನಮ್ಮಪ್ಪ ಯಡಿಯೂರಪ್ಪನ ಹಾಗೆ ಕಾಣ್ತಾರಾ ?'' ಅಂತ ಕೇಳಿದೆ ಅಂದಳು.

ಹೆಣ್ಣುಮಕ್ಕಳಿಗೆ ಸೈಕಲ್ ವಿತರಿಸುತ್ತಿರುವ ಯಡಿಯೂರಪ್ಪನವರ ದಿನಪತ್ರಿಕೆಯ ಪ್ರಚಾರ ಚಿತ್ರ, ನೆನಪಿಗೆ ಬಂದು ನಗು ಬಂತು.

''ಸರಿಯಾಗೇ ಹೇಳಿದೆ ಮರಿ, ಇನ್ನು ಈ ಸೈಕಲ್ ಕಲಿಸೋ ಗೀಳು ಬಿಟ್ಟುಬಿಡು ಪುಟ್ಟಾ'' ಎಂದು ಅವಳಿಗೆ ಬುದ್ಧಿ ಹೇಳಿದರು.

''ಒಂದು ನಿಮಿಷ ಬಂದೆ ಇರಮ್ಮಾ'' ಎಂದು ರೋಡಿಗೆ ಓಡಿದ ಮೇಧಾ, ಎಷ್ಟು ಹೊತ್ತು ಜಾರಿದರೂ ಬರಲಿಲ್ಲ. ಬಾಗಿಲಿಗೆ ಬಂದೆ.

ರಸ್ತೆಯ ತುಂಬಾ ತುಂಬಾ ಚಿಲ್ಟುಗಳು, ಸೈಕಲ್ ಹತ್ತಿ, ತಮ್ಮದೇ ಲೋಕದಲ್ಲಿ ನಲಿಯುತ್ತಿದ್ದರೆ, ಮೇಧಾ ಮತ್ತೊಂದು ಮಗುವನ್ನು 'ಡಬಲ್ಸ್' ಪರೀಕ್ಷೆಗೆ ಗುರಿಮಾಡಿ ನಿರ್ದೇಶಿಸುತ್ತಿದ್ದಳು. ಅವಳ ಕಂಗಳ ತುಂಬಾ ತೃಪ್ತಿಯ ಬೆಳದಿಂಗಳು. ಬಾಲ್ಯಕ್ಕೆ ಜಾರುವ ಆಸೆ ಮೂಡಿತು ಆ ಕ್ಷಣ. ಸರಿದುಹೋದ ಬಾಲ್ಯದ ಬೆರಗನ್ನು, ನೆನಪಿನ ಬೊಗಸೆಯಲ್ಲಿ ಹಿಡಿಯಲಾರಂಭಿಸಿದೆ. ಮಕ್ಕಳ ಲೋಕವೇ ಲೋಕ !

---

ಸಾಯಿಲಕ್ಷ್ಮಿ ಎಸ್. ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ, ಬೆಂಗಳೂರು - ೫೬೦ ೦೦೧

**ಈ** ಟ್ರೇನು ಓಡುತ್ತಲೇ ಇದೆ. ನಾನು ರಿಜರ್ವೇಶನ ಮಾಡಿಸಿಕೊಂಡು ಈ ಬೋಗಿ ಹತ್ತಿದ ತಪ್ಪಿಗೆ ಬಾಯಿ ಹೊಲಿದುಕೊಂಡು ಹಲ್ಲಿನ ಮೇಲೆ ಹಲ್ಲಿಟ್ಟುಕೊಂಡು ಮಾತಾಡದ ಮೂಕಿಯಂತಾಗಿ ಸುಮ್ಮನೇ ಕಣ್ಣುಗುಡ್ಡೆ ಹೊರಳಾಡಿಸುವ ಸಂಕಷ್ಟಕ್ಕೆ ಒಡ್ಡಿಕೊಂಡಿದ್ದೇನೆ. ನನ್ನ ಪಾಲಿಗೆ ಮಾತು ಬಾಂಧವ್ಯ ಬೆಸೆಯುವ ಕೊಂಡಿ. ಮನಸ ಮಾತುಗಳನ್ನು ತಲುಪಿಸಲು ಮಾಧ್ಯಮವಾಗಿ ಭಾಷೆ ಬೇಕು ಅಷ್ಟೆ.

ಒಂದಿಬ್ಬರು ಹೊರತುಪಡಿಸಿದರೆ ಈ ಸುತ್ತಲಿನವರು ಕನ್ನಡಿಗರೆ. ಆದರೆ ಒಬ್ಬ ಹೆಂಗಸು ಬಿಟ್ಟರೆ ಉಳಿದವರೆಲ್ಲ ಗಂಡಸರು. ಅವರಲ್ಲಿ ಇಬ್ಬರು ಉನ್ನತ ಅಧಿಕಾರಿಗಳೆಂಬುದನ್ನು ನಾನು ಗುರುತಿಸಿದ್ದೇನೆ. ಅವರೂ ನನ್ನನ್ನು ಗುರ್ತಿಸಿದ್ದಾರೆ. ಬೋಗಿ ಹತ್ತಿದಕೂಡಲೇ ಸಾಮಾನುಗಳನ್ನು ಸೀಟಡಿಗೆ ಸೆಟ್ ಮಾಡಿ ಕರ್ಚೀಫಿನಿಂದ ಹನಿಗಟ್ಟಿದ ಹಣೆಯ ಬೆವರನ್ನು ನೀಟಾಗಿ ಒರೆಸಿಕೊಂಡು, ಅಧಿಕಾರದ ಗತ್ತಿನಲ್ಲಿಯೇ ಗಮನಿಸಿ, ತುಸುವೇ ತುಟಿಯಗಲಿಸಿ ಅವರು ನನಗೆ ಮಾತಾಡುವ ಕೃಪೆ ತೋರುತ್ತಿರುವರೇನೋ ಎಂಬಂತೆ, ''ಮತ್ತೇನ್ರಿ ಮೇಡಂ... ಮತ್ತಾವುದಾದ್ರೂ ಹೋರಾಟ, ಸ್ಟ್ರೈಕು ಇಲ್ಲೇನ್ರೀ... ?'' ಅಂತ ಅವರು ವಿಚಾರಿಸುವ ಪರಿಯೆ ಪೂರ್ವಗ್ರಹಪೀಡಿತ ದಂತಿತ್ತು. ಸಾಮಾನ್ಯವಾಗಿ ಹೀಗೆಲ್ಲ ಸಿಕ್ಕಾಗ, ''ಯಾವೂರಿಗಿ ? ಆರಾಮೇನ್ರಿ ? '' ಅಂತ ಮಾತು ಸುರು ಮಾಡುವ ಪರಿಪಾಠವಿರುತ್ತದೆ. ಆದರೆ ಈ ಅಧಿಕಾರಿಗಳಿಗೆ ಅದೆಲ್ಲದಕ್ಕೂ ಮೊದಲೆ ಮೆದುಳಿಗೆ ಬಂದಿದ್ದು ನಮ್ಮ ಸ್ಟ್ರೈಕು. ಹೌದು ಅದೇ ನಮ್ಮ ನಿಜವಾದ ಪೆಹೆಚಾನ್ ಆಗಿರಲಿಕ್ಕೆ ಸಾಕು. ''ಜನ್ರ ಕಷ್ಟ ಪರಿಹಾರ ಆಗಾತನ ಅದೆಲ್ಲ ಇದ್ದಿದ್ದೇ ಸರ್, ಎಲ್ಲಿಗಿ ಬೆಂಗಳೂರಿಗಿ ಹೊಂಟ್ರೇನು ?'' ಕೇಳಿದ್ದಕ್ಕೆ ಇಬ್ಬರೂ 'ಹೌದು ಹೌದು' ಅಂತ ತಲೆ ಹಾಕಿದರು. ಆನಂತರ ಅವರಿಬ್ಬರ ಮಾತುಗಳು ಅವರ ಡಿಪಾರ್ಟ್‌ಮೆಂಟ್ ಸುತ್ತ ಗಿರಕಿ ಹೊಡೆಯುತ್ತಿದ್ದವು. ನನಗೂ ಅವರೊಂದಿಗೆ ಹೆಚ್ಚು ಮಾತಿನ ಜರೂರಿ ಇರಲಿಲ್ಲ.

ನನ್ನ ಎದುರುಗಡೆ ಸೀಟಿನಲ್ಲಿ ಒಬ್ಬ ಹೆಂಗಸಿದ್ದಾಳೆ. ಅವಳು ಅನಾವಶ್ಯಕವಾದ ಮತ್ತು ವಿಚಿತ್ರವಾದ

# ಕರುಳಿರಿಯುವ ನೋವು

ಅಹಮ್ಮಿಶ್ರಿತ ಮೌನದ ಮುಖವಾಡ ಧರಿಸಿದ್ದಾಳೆ. ಖಂಡಿತ ಅದು ಭಾರದ ಮುಖವಾಡವೆಂಬುದು ಅವಳ ಅರಿವಿಗೆ ಬರುತ್ತಿಲ್ಲ. ಯಾವುದೋ ತತ್ವಪದ ನೆನಪಾಯ್ತು, ''ಮೂರು ದಿನದ ಸಂತಿ, ಮಾಡುವುದ್ಯಾಕ ಸುಮ್ಮನ ಚಿಂತಿ ?'' ನಾನು ತುಂಬ ಖುಷಿಪಟ್ಟು ಗುನುಗುವ ಖೈನೂರು ಕೃಷ್ಣಪ್ಪನ ತತ್ವಪದ ಬೆನ್ನಲ್ಲಿಯೇ ತೇಲಿ ಬಂತು :

*ಸಂಸಾರ ಎಂಬುವುದು ಬಲು ಕಷ್ಟ*
*ಇದು ಯಾವ ಸೂಳೆಮಗ ಮಾಡಿಟ್ಟ ?*
..........................................
*ಖಟಿಪಿಟಿ ಸಂಸಾರ ನೇಟಿಲ್ಲ*
*ಇದ ಕಟಕೊಂಡು ಯಾರೇನು ದಾಟಿಲ್ಲ.*

ಇದು ಕಡಕೋಳ ಮಡಿವಾಳಪ್ಪನದು. ಆದರೆ ಈ ಸಂಸಾರಕ್ಕೆ ತೇಪೆ ಹಚ್ಚುತ್ತಲೊ, ಹರಿದಲ್ಲಿ ಹೊಲಿಗೆ ಹಾಕುತ್ತಲೊ, ಹೊಸದಕ್ಕಾಗಿ ಹಂಬಲಿಸುತ್ತಲೊ ಒಟ್ಟಾರೆ ಈ ಸಂಸಾರ ಸಾಗರದಲ್ಲಿ ಈಜುತ್ತ 'ಈ ಸಂಸಾರ ಮಾಡಿಟ್ಟ ಸೂಳೆಮಗನಿಗೆ ಸವಾಲು ಹಾಕುತ್ತ' ಅಂತೂ ದಾಟಿ ದಡ ಸೇರುವವರ ನಡುವೆ ಬದುಕಿ ಬಾಳುತ್ತಿರುವ ನನ್ನಂಥವರಿಗೆ ಈ ಜಿಂದಗಾಣಿಯೆಂಬುದು ಅಪರೂಪಕ್ಕೆ ದೊರೆತ ಅವಕಾಶವೇ ಹೌದು. ಮಡಿವಾಳಪ್ಪನ ಇದೇ ತತ್ವಪದದ ಕಡೆಯ ಲೈನು ಹೇಳುವಂತೆ

*ಹಲವು ಚಿತ್ತ ಹಾರಿರಬೇಕೋ*
..........................................
*ಜ್ಞಾನದ ಕುಡಿ ಊರಿರಬೇಕು.*

ಈ ಮಾತು ಕಿಟಕಿಯೊಳಗಿನ ತಂಗಾಳಿಯಂತೆ ಸಳಸಳ ಹರಿದು ಬರ್ತದೆ. 'ಜ್ಞಾನದ ಕುಡಿ ಊರಿರಬೇಕು' ಅನ್ನುವ ವಾಕ್ಯ ಮೆದುಳ ಗ್ರಹಿಕೆಗೆ ಬಂದಿದ್ದೇ ತಡ ಥಟ್ಟಂತ ಗಾಬರಿಯಾದೆ. ಈ ಎದುರು ಕೂತವಳು ಅಹಂನ ಪರದೆ ಹೊದ್ದಿದ್ದಾಳೆ ಎಂದು ಭಾವಿಸಿದ ನಾನು, 'ನಾನು' ಅವಳಿಗೆ ಏನನ್ನಿಸಿರಬೇಕು ಅಂತ ಯಾಕೆ ಆಲೋಚಿಸಲಿಲ್ಲ? ಬಹುಶಃ ನನ್ನ ಮುಖದ ಮೇಲೂ ಅಂಥದೊಂದು ಮುಖವಾಡ ಅವಳಿಗೆ ಕಂಡಿದ್ದರೆ...? ತಕ್ಷಣ ತಲ್ಲಣಿಸಿದೆ. ಈ ಮನಸೇ ಇಂಥದು, ಯಾವಾಗಲೂ ಇನ್ನೊಬ್ಬರಲ್ಲಿ ದೋಷ ಹುಡುಕಿ ಪಟ್ಟಿ ಮಾಡುತ್ತದೆ. ಒಮ್ಮೊಮ್ಮೆ ನಮ್ಮೊಳಗಿನ ದೋಷಗಳ ಪಟ್ಟಿಯೇ ದೊಡ್ಡದಿರುವ ಬಗ್ಗೆ ಮನಸಿಗೆ ತಂದುಕೊಳ್ಳಲೂ ಇಚ್ಛಿಸುವುದಿಲ್ಲ.

ಈವರೆಗೆ ಕಿಟಕಿಯ ಹೊರಗೆ ದಿಟ್ಟಿ ನೆಟ್ಟ ನಾನು ಎದುರು ಕೂತವಳತ್ತ ಗಮನವಿಟ್ಟೆ. ಸಿರಿವಂತ ಹೆಂಗಸರು ಉಡು-ತೊಡುವುದೆಲ್ಲವನ್ನೂ ಧರಿಸಿದ್ದಳು. ನನಗಿಂತಲೂ ಚಿಕ್ಕವಳಂತೆ ತೋರುತ್ತಿದ್ದಳು. ಗಂಭೀರ ನೋಟ ಚೆಲ್ಲುತ್ತಿರುವ ಕಣ್ಣೊಳಗೆ ಹರಿವ ನೀರಲ್ಲಿ ತೇಲುತ್ತಿರುವಂತೆ ಭಾಸವಾಗುವ ಕರಿಗುಡ್ಡೆಯನ್ನು ದಿಟ್ಟಿಸುತ ''ಯಾವೂರಿಗ್ರಿ... ?'' ಕೇಳಿದೆ.

ಅವಳು ಬಹಳ ನಿಧಾನವಾಗಿ ಬೇಕೋ ಬೇಡವೋ ಎನ್ನುವಂತೆ, ನನ್ನ



ಕೇಳುವಿಕೆಗೆ ಯಾವ ಮಹತ್ವವೇ ಕೊಡುವ ಅವಶ್ಯಕತೆ ಇಲ್ಲದಂತೆ ಆದರೂ ಇನ್ನೇನು ತಪ್ಪಿಸಿಕೊಳ್ಳಲಿಕ್ಕಾಗದ ಕಾರಣದಿಂದ ''ಆಂ...?'' ಅಂತ ಮೊದಲು ಪೀಠಿಕೆ ಹಾಕಿ ಅನಂತರ, ''...ಬೆಂಗಳೂರಿಗೆ'' ಅಂದು ಹಣೆಗೆ ಬೀಳದ ಕೂದಲನ್ನು ಬಿದ್ದಂತೆ ಕಲ್ಪಿಸಿಕೊಂಡು ಬಲಗೈಯಿಂದ ಮುಂಗೂದಲನ್ನು ಹಿಂದಕ್ಕೆ ತಳ್ಳಿ ಮತ್ತೆ ಹಿಂದಿನ ದಿವ್ಯ ಮೌನ ಮತ್ತು ಧಿಮಾಕಿನ ಭಾವದ ಪೋಷಾಕು ತೊಟ್ಟು ಎತ್ತಲೊ ನೋಡತೊಡಗಿದಳು.

ನನಗೆ ಗಾಂಧೀ ಕ್ಲಾಸಿನ ಮಹಿಳಾ ಬೋಗಿ ನೆನಪಾಗತೊಡಗಿತು. ಬಾಜು ಕೂತವಳಿಗೆ 'ಯಾವೂರಿಗವ್ವಾ?'ಎಂದು ಕೇಳಿದರೂ ಸಾಕು, ಮಾತಿನ ಹಗ್ಗ ಹರಿಗಡಿದು ಭೂತ ವರ್ತಮಾನದ ಪ್ರಸಂಗಗಳತ್ತಲ್ಲೆಲ್ಲ ಹರಿದಾಡತೊಡಗುತ್ತದೆ. ಆ ಬೋಗಿಯಲ್ಲಾದರೂ ಸಮಯವು ನಮ್ಮನ್ನು ತಳ್ಳುತ್ತ ಧಾವಿಸುತ್ತಿದ್ದರೆ, ಇಲ್ಲಿ ಕಾಲಲ್ಲೇ ಬಿದ್ದು ಒದ್ದಾಡುವ ಟೈಮನ್ನು ನೂಕುವುದು ಹೇಗೆಂಬ ಚಿಂತೆಯಿರುತ್ತದೆ. ಆದರೂ ಛಲ ಬಿಡದಂತೆ, ''ಬೆಂಗಳೂರ್ನಾಗ ಯಾರಿರ್ತಾರ? ವಾಪಸ್ ಯಾವಾಗ?...'' ಅಂತ ಮಾತಿನ ದಾರಕ್ಕೆ ಒಂದೊಂದೇ ಮಣಿ ಪೋಣಿಸ ತೊಡಗಿದೆ. ಮಾತಿನ ನಡುವಿಗೆ ''ನಿಮ್ ಹೆಸರೇನು?'' ಕೇಳಿ, ಅನಂತರ ಪರಸ್ಪರ ಹೆಸರು ಹಿಡಿದೇ ಹರಟೆ ಹೊಡೆವ ಹಂತಕ್ಕೆ ತಲುಪಿದೆವು. ಸಂಗೀತಾ ಬಾಜು ಕೂತ ಆಜಾನುಬಾಹು ಮನುಷ್ಯ ಅವಳ ಗಂಡ ಎಂಬುದೂ ಗೊತ್ತಾಯ್ತು. ಶರೀರದ ಬೇರೆಲ್ಲ ಭಾಗಕ್ಕಿಂತಲೂ ಹೊಟ್ಟೆಯ ಸುತ್ತವೇ ಸುತ್ತಿಕೊಂಡ ಬೊಜ್ಜಿನ ಮೇಲೆ ಎರಡೂ ಕೈಗಳನ್ನು ಕಟ್ಟಿಕೊಂಡು ತಲೆಯನ್ನು ಹಿಂದಕ್ಕೆ ಆನಿಸಿ, ಕಣ್ಮುಚ್ಚಿದ್ದ, ದೊಡ್ಡ ವ್ಯಾಪಾರಿ ಎಂದು ಸಂಗೀತಾ ಹೇಳುತ್ತಿದ್ದಳು.

ರಾತ್ರಿ ಊಟದ ಹೊತ್ತಿಗೆ ಸಂಗೀತಾ ನನಗೂ ಊಟಕ್ಕೆ ಒತ್ತಾಯಿಸಿದಳು. ಅಡಿಗೆ ಮನೆಯನ್ನೇ ಹೊತ್ತು ತಂದಂತಿತ್ತು. ಗಂಗಾಳು, ಚಮಚ, ಗ್ಲಾಸು, ತರಹೆವಾರಿ ಅಡಿಗೆ, ಹಸಿ ತರಕಾರಿ, ಹಣ್ಣು... ನೀರಿನ ಕ್ಯಾನು! ಅಷ್ಟೊತ್ತಿಗಾಗಲೇ ಸಂಗೀತಾ ಗಂಡ ಆ ಇಬ್ಬರು ಅಧಿಕಾರಿಗಳ ಒಡನಾಟಕ್ಕೆ ಸೇರಿದ್ದ. ನಮ್ಮೊಂದಿಗೆ ಊಟಕ್ಕೆ ಬರಲಿಲ್ಲ, ಆ ಮೂವರೂ ಎದುರು ಸೀಟಿನ ಮೇಲೆ ಊಟಕ್ಕೆ ತೊಡಗಿದರು. ಅದ್ಹೇಗೆ ಇಷ್ಟು ಬೇಗ ಗೆಳೆಯರಾದರು? ನಾನು ಸಂಗೀತಾ ಅದೂ ಇದೂಂತ ಮಾತಾಡುತ್ತ ಉಣ್ಣತೊಡಗಿದೆವು. ಅದ್ಯಾಕೊ ನನ್ನ ದೃಷ್ಟಿ ಆ ಮೂರು ಜನರ ಕಡೆಗೆ ಸರಿಯಿತು. ನಡುವಿಗೆ ಊಟ ಇಟ್ಟುಕೊಂಡ ಆ ಮೂವರು ನೀರನ್ನು ಬಟ್ಟೆ ಸುತ್ತಿದ ಒಂದೇ ಬಾಟಲಿಯಿಂದ ಕುಡಿಯುತ್ತಿದ್ದರು. ನನ್ನೊಳಗೆ ಪ್ರಶ್ನೆ ಮತ್ತು ಅನುಮಾನ ಹಣಿಕು ಹಾಕಿತು. ನೋಡಿಯೂ ನೋಡದಂತೆ ಚಿತ್ತವಿಟ್ಟು ಗಮನಿಸಿದಾಗ ನನಗೆ ಗ್ಯಾರಂಟಿಯಾಯಿತು, ಅವರು ಸಾರಾಯಿ ಕುಡಿಯುತ್ತಿರುವರೆಂದು. ಸುತ್ತಮುತ್ತ ಜನರನ್ನಿಟ್ಟುಕೊಂಡು ಹೀಗೆ ಬಿಡುಬೀಸಾಗಿ ಕುಡಿಯುವ ಅವರ ಭಂಡತನಕ್ಕೆ ಏನನ್ನಬೇಕು...? ನಾನು ಸಂಗೀತಾ ಮುಖ ನೋಡಿದೆ. ಹೇಳಲೇ...? ಬೇಡ ಆಕೆಯ ಮನಸಿಗೆ ನೋವಾದಾತು ಅನ್ನಿಸಿ ಸುಮ್ಮನಾದೆ. ಹಿಂದೆ ಅನೇಕ ಸಾರಿ ಇಂಥ ಪ್ರಸಂಗಗಳು ಘಟಿಸಿದಾಗ ಜಗಳ ಮಾಡಿದ್ದಿದೆ.

ಬೋಗಿಯಲ್ಲಿ ಉಣ್ಣುವವರು ಉಂಡು, ಕುಡಿಯುವವರು ಕುಡಿದು ಕಟ್ಟಕಡೆಗೆ ನಿದ್ದೆ ಹೊದ್ದು ಮಲಗಿ, ಬೋಗಿಯೊಳಗಿನ ಲೈಟುಗಳು ಕಣ್ಮುಚ್ಚಿದ್ದಾಯ್ತು. ಶಬ್ದದ ಸೆರೆಗೊದ್ದ ನಿಶ್ಶಬ್ದವು ಅಮೀಬಾಸ್ವರೂಪದಲ್ಲಿ ಬಿಚ್ಚಿಕೊಳ್ಳುತ್ತಿರುವಾಗಲೇ ಸಂಗೀತಾ ಸಹ ಚಿತ್ತಾರದ ಬೆಡ್‌ಶೀಟಿನೊಳಗೆ ಕಾಲು ತೂರಿ, ಒಂದು ಮಗ್ಗುಲಿಗೆ ಹೊರಳಿ ಅಂಗೈಯನ್ನು ಕಪಾಳಿನಾಸರೆಗೆ ಇಟ್ಟುಕೊಂಡು, ಅಲ್ಲಿ ಹರಿದಾಡುವ ವಿಚಿತ್ರಮೌನಕ್ಕಿಂತಲೂ ಕೆಟ್ಟದಾದ ಮೌನವನ್ನು ಮುಖದ ತುಂಬ ಲೇಪಿಸಿಕೊಂಡು ಮಲಗಿದ್ದಳು. ಆ ಮೌನದ ಮಡಿಲೊಳಗೆ ಏನೇನೊ ತಳಮಳಗಳು ಕಳಕಳಿಸುತ್ತಿರುವಂತೆ ಭಾಸವಾಗುತ್ತಿತ್ತು. ನಾನು ಕಿಟಕಿ ಹೊರಗಿನ ಕತ್ತಲೆಯ ಆಟವನ್ನು ಕಣ್ತುಂಬಿಕೊಳ್ಳಲೆಂದು ಚಿತ್ತ ಸರಿಸಿದೆ. ಅಷ್ಟರಲ್ಲಿ ಸಂಗೀತಾ ಗಂಡ ಜಿಗ್‌ಜಾಗ್ ನಡಿಗೆಯೊಂದಿಗೆ ಬಂದ. ಊಟ-ಗೀಟದ ತರುವಾಯ ಶೌಚದ ಹತ್ತಿರ ಹೋಗಿ ಸಿಗರೇಟ್ ಸೇದಿರಬೇಕು, ಗಪ್ಪೆಂದು ಅಡರಿಕೊಂಡ ಸಿಗರೇಟ್ ವಾಸನೆಗೆ ಸಂಗೀತಾ ಮೂಗಿನವರೆಗೂ ಮುಸುಕೆಳೆದಳು. ಊಟಕ್ಕೂ ಮೊದಲಿನವರೆಗೆ ಒಂದೇ ಒಂದು ಮಾತಾಡದ ಆತ ಈಗ ಅದ್ಯಾವ ಶಕ್ತಿಯನ್ನು ಆವಾಹಿಸಿಕೊಂಡಿದ್ದನೋ... ಸೋನೆ ಮಳೆಯಂತೆ ಒಂದೇ ಸಮನೆ ವಟವಟಿಸತೊಡಗಿದ. ಸುತ್ತಲಿನವರು ಅವನ ಈ ಹುಂಬಾಟಕ್ಕೆ ಗಮನಿಸಿಯಾರೆಂಬ ಮುಜುಗರ ಮತ್ತು ಸಿಟ್ಟಿನಿಂದ ಸಂಗೀತಾ ಒದ್ದಾಡತೊಡಗಿದಳೆನಿಸುತ್ತದೆ. ಅವನೊಂದಿಗೆ ಕುಡಿದ ಉಳಿದಿಬ್ಬರು ತುಟಿಯಗಲಿಸಿ ಗೊರಕೆ ಚೆಲ್ಲುತ ಇನ್ನೊಂದು ನಮೂನೆಯ ಬಾಟಲಿ ಮಹಿಮೆಗೆ ಬಲಿಯಾಗಿದ್ದರು. ನಾನು ನನ್ನ ಪುಟ್ಟ ಲಗೇಜನ್ನೇ ತಲೆದಿಂಬಾಗಿಸಿಕೊಂಡು ಕತ್ತಲೆಯೊಂದಿಗೆ ಕಣ್ಣ ದಿಟ್ಟಿಯ ಕೊಂಡಿ ಹೆಣೆದು, ನಿದ್ದೆ ಬಾರದಿದ್ದರೂ ಹೊರಳಿ ಮಲಗಿದೆ. ನಾನೇನೂ ಗಮನಿಸುತ್ತಿಲ್ಲ ಎಂಬುದು ಸಂಗೀತಾಗೆ ಮನದಟ್ಟಾಗಿಸುವ ಸಾಹಸವಿದು.

ನಿಜವಾಗಿಯೂ ಸಂಗೀತಾ ಬಹಳ ಇಕ್ಕಟ್ಟಿನ ಪರಿಸ್ಥಿತಿಗೆ ಪಕ್ಕಾಗಿ ನೋವನುಭವಿಸುತ್ತಿದ್ದಳು. ಸ್ವಲ್ಪ ಹೊತ್ತಿನ ಮೊದಲು ಮೌನದ ನೆರಳಲ್ಲಿ ತಾನೊಬ್ಬ ಪ್ರತಿಷ್ಠೆಯ ಸಂಸ್ಕಾರದವಳು ಎಂದು ಅಹಂನಿಂದ ಸಾರಿದಾಕೆ, ಗಂಡನ ಈ ನಡವಳಿಕೆಯಿಂದ ಕುಗ್ಗಿ ಹೋದಂತೆ...''ಸುಮ್ಮುಕ ಮಕ್ಕೊರಿ, ಯಾಕ ಅಂದಿದ್ದೆ ಅಂತೀರಿ...? ಹೋದಲ್ಲಿ ಬಂದಲ್ಲಿ ಕುಡದು ನನ್ನ ಜೀವ ತಿಂದು ಜೀರಗಿ ಮಾಡ್ತೀ. ನೋಡದವ್ರು ಏನಂತಾರಾ...? ನೀವ್ ಹಿಂಗ ಬರಗೆಟ್ಟಿದ್ದಕ್ಕ ಚೋಟ್ ಪಾರ ಹನಾ ನಿಮ್ ಮಗಾ, ಅದೂ ಸೈತ್ ಸಿಗರೇಟ್ ಸೇದಾದು ಕಲ್ತದ. ನೀವ್ ಹಿಂಗೆ ಮಾಡದೂರ ಮುಂದ ಮಗಾನೂ ನಾಕದಿಂದಾಗ ಬಾಟಲಿ ಅಲ್ಲ, ಪಾಕೀಟ್ ಕುಡಿತಾನ ಪಾಕೀಟ್ ತಿಕ್ಕೋರಿ ...ಹಾಂ... ಇದ್ದೊಬ್ಬ ಮಗ ಹಾಳಾಗಿ ಬೀದಿಗಿ ಬಂದ್ರ ನಿಮಗ ಛೆಂದಿರ್ತದ ಅಲಾ? ಹಡದ ಹೊಟ್ಟ್ಯಾಗ ಬೆಂಕಿ ಹಾಕಬೇಕಂತೀರಿ...''

ಸಂಗೀತಾ ಅಳುತಿರುವಳೇ? ಹೌದು. ಯಾರಿಗೂ ಗೊತ್ತಾಗದ ಅಳುವದು. ತನ್ನ ಸಣ್ಣ ವಯಸ್ಸಿನ ಮಗ ಸಿಗರೇಟು ಸೇದಿದ್ದಾನೆಂದು ಹೇಳುವಾಗಿನ ಮಾತುಗಳೂ ಕರುಳಿರಿಯುವ ನೋವುಗಳಾಗಿದ್ದವು. ಹೆತ್ತೊಡಲ

ಸಂಕಟದ ತುಣುಕುಗಳಾಗಿದ್ದವು. ಅಖಂಡ ಬದುಕಿನೊಳಗಿನ ಜೀವಸೆಲೆಯೇ ಬತ್ತಿಹೋಗುವ ಭಯದ ವಾಹಕಗಳಾಗಿದ್ದವು. ಈ ಹರಿದಾಡುವ ಗಾಳಿಗೊಂದು ಹೃದಯವಿದ್ದರೆ, ಅವಳ ಕಣ್ಣೀರಿನ ಆಳ ಅರಿಯುವ ತಾಖತ್ತಿದ್ದರೆ...? ಏನಾಗುತ್ತಿತ್ತು? ಅವಳ ಮೌನದ ಬಿಕ್ಕುವಿಕೆಗಳು ಮಾತಾಗುತ್ತಿದ್ದವೆ? ಎಲ್ಲರ ಎದೆಗೆ ಈ ಮಾತು ಮುಟ್ಟಿ ಒಂದು ಪರಿಣಾಮಕಾರಿ ಪ್ರತಿಕ್ರಿಯೆ ಎದ್ದು ಬರುತ್ತಿತ್ತೆ? ಯಾಕಿಲ್ಲ? ಎಷ್ಟೊಂದು ವೈಯಕ್ತಿಕ ನೋವುಗಳು ಸಮೂಹ ಸಂಚಲನೆಯಲ್ಲಿ ಕೊಚ್ಚಿಹೋಗಿಲ್ಲ? ಆದರೆ ಏನನ್ನೂ ತೋರಗೊಡದಂತ ಹುಸಿ ನಿಯಮಗಳ ಈ ಕಟಿಪಿಟಿ ಸಂಸಾರಕ್ಕೆ ಎಷ್ಟು ಪರದೆಗಳು...?

ರಾತ್ರಿ ಬಹು ಹೊತ್ತಿನವರೆಗೂ ಸಂಗೀತಾಳ ಗಂಡ ಅವಲಕ್ಕಿ ಕುಟ್ಟಿದಂತೆ ಕಿಟಿಕಿಟಿಸುತ್ತಿದ್ದನು. ಒಮ್ಮೆ ಎದ್ದು ಹೋಗಿ ವಾಂತಿ ಮಾಡಿಕೊಂಡು ಬಂದ ಎಂದೆನಿಸುತ್ತದೆ. ಕುಡಿದು ಹೈರಾಣು ಮಾಡುತ್ತಿರುವ ಗಂಡನಿಗಿಂತಲೂ ತನ್ನ ಏಕೈಕ ಮಗ ಹಾಳಾದರೆ ಹೇಗೆಂಬ ಚಿಂತೆಯೇ ಅವಳನ್ನು ಕಾಡುತ್ತಿತ್ತೆನಿಸುತ್ತದೆ.

ರೈಲಿನ ಚಕ್ರಗಳು ಯಾವ ದಿಕ್ಕಿನತ್ತ ದೌಡಾಯಿಸುತ್ತಿವೆಯೊ ಗೊತ್ತಾಗುತ್ತಿಲ್ಲ. ಆದರೆ ಒಂದು ಏರುಗತಿಯ ವೇಗದಿಂದ ಚಲಿಸುತ್ತಿದೆ. ಸಂಗೀತಾಳ ಕರುಳೊಳಗಿನ ನಿಶ್ಶಬ್ದದ ಅಳುವು ಕಣ್ರೆಪ್ಪೆ ಮುಚ್ಚಿದರೂ ಅಂತರಂಗದ ಕದವನ್ನು ಒದ್ದು ಒಳನುಗ್ಗಿತು. ಕ್ರಮೇಣ ಆ ಅಳುವು ನಾನಾ ಸ್ವರೂಪ ಪಡೆದು ಅಸಂಖ್ಯ ಮುಖಗಳ ಕಣ್ಣೊಳಗಿನ ಹನಿಯಾಗಿ ಕಾಡತೊಡಗಿತು. ಯಾರ ಮುಖಗಳು...? ಸಂಗೀತಾಳ ಮುಖವೊಂದೇ ಅಲ್ಲ... ಇಲ್ಲೆಲ್ಲ ಎಷ್ಟು ಮುಖಗಳು...? ಓ ! ನಡುವಲ್ಲಿ ಒಂದು ಮುಖ ಕಾಣುತ್ತಿದೆ. ಯಾರ ಮುಖವದು ? ಮುಖದ ಮೇಲೆ ಕಾಣುವ ಎರಡು ಕಣ್ಣುಗಳಲ್ಲಿ ಆಕ್ರೋಶ ದುಃಖ ಮಾತ್ರ ಮಡುಗಟ್ಟಿದಂತಿದೆ. ಹೌದು ಅದು ಸಂಗವ್ವನ ಮುಖ. ಆಕ್ರೋಶ ಮತ್ತು ದುಃಖದ ಹೊರತು ಸಂಗವ್ವನ ಕಣ್ಣಲ್ಲಿ ಏನಿರಬೇಕು ?...

ಎದೆಗಾತಿ ಸಂಗವ್ವ ಕುಡಿಕುಡಿದು ಹಾಳಾದ ಭಂಡ ಗಂಡನನ್ನು ಎದುರಿಸಿದಳು. ಬಡತನದ ಜಂದಗಾಣಿಗೆ ಛಲದಿಂದ ಹೆಗಲು ಕೊಟ್ಟಾಕಿ. ಇದ್ದೊಬ್ಬ ಮಗನನ್ನು ಕಣ್ಣಗುಡ್ಡೆಯಂತೆ ಕಾಪಾಡುವ ಎರಡೂ ಕಣ್‌ರೆಪ್ಪೆಯ ಜವಾಬ್ದಾರಿಯನ್ನು ತಾನೊಬ್ಬಳೇ ನಿಭಾಯಿಸಿದಳು. ಮಗ ಮೂರನೇ ಕ್ಲಾಸು ಪಾಸಾದ ಸುದ್ದಿಯನ್ನು ಊರ ತುಂಬಾ ಸಾರಿ ಹರಿದಾಡುವ ಗಾಳಿಯ ಕಾಲುಗಳಿಗೂ ತನ್ನೆದೆಯ ಖುಷಿಯ ಗೆಜ್ಜೆ ಕಟ್ಟಿದ್ದಳು. ಐದನೆಯ ಕ್ಲಾಸು ಪಾಸಾದಾಗ ಮಗನ ಮಾರಿಯ ದಿಟ್ಟಿ ನಿವಾಳಿಸಿ ಮೆಣಸಿನ ಕಾಯಿಯನ್ನು ಮುಗಿಲ ಅಂಗಳದ ಚಂದ್ರಾಮನ ಮುಖದತ್ತ ಚೆಲ್ಲಿದ್ದಳು.

ಕುಡಿದು ಕುಡಿದು ಸತ್ತು ತಮ್ಮನ್ನು ಅನಾಥರನ್ನಾಗಿಸಿ ಭೂತಾಯಿ ಸೆರಗಿಗೆ ಚೆಲ್ಲಿಹೋದ ತನ್ನ ಅಪ್ಪನ ಬಗ್ಗೆ ಹುಟ್ಟಿಕೊಂಡ ಕುಡಿತದ ಜಿಗುಪ್ಸೆಯು ಕಟ್ಟಿಕೊಂಡ ಗಂಡನೂ ಮೊದಲ ರಾತ್ರಿನೇ ನಶೆಯಲ್ಲಿ ಬಂದಾಗ ಆ ಜಿಗುಪ್ಸೆಯು ಹೇಸಿಗೆಯಾಗಿ, ಅವತ್ತೇ 'ಛಿ' ಎಂದಾಕಿ, ಉಡಿಯೊಳಗೊಂದು ಕೂಸು ಕೈಕಾಲಾಡಿಸಿದ್ದೆ ತಡ ಜೋಲಿ ಹೊಡೆವ ಗಂಡನನ್ನು ಸರಿದಾರಿಗೆ ತರಲು ಹೈರಾಣಾಗಿ, ಕಡೆಗೆ ನಾಯಿ ಬಾಲದಂತೇ ಇರುವ ಹಟತೊಟ್ಟ ಆತನನ್ನು ಕ್ಯಾರೇ ಅನ್ನದೇ ತನ್ನ ಪಾಡಿಗೆ ತಾನು ಕೂಲಿ-ನಾಲಿ ಮಾಡುತ್ತ ಬದುಕತೊಡಗಿದಳು. ''ಕಟಗೊಂಡ ಗಂಡ ಹ್ಯಾಂಗಿಟ್ಟಂಗಿರಬೇಕು...'' ಅಂತ ಉಪದೇಶ ಮಾಡಿದವರ ಮಾರಿಗೆ ಮಂಗಳಾರತಿ ಎತ್ತಿದಳು. ಮೀಸಿ ತಿರುವಿ ಕೈ ಎತ್ತಿದ ಗಂಡನಿಗೆ ''ಕುಡ್ಯಾದ ಬಿಡು. ಇಲ್ಲಂದ್ರ ನಿಂಗ ಬೇಕಾದವರ ಬಲ್ಲಿ ಹ್ವಾಗು. ಗಂಣಸ ಅಂತ ಧಿಮಾಕ ತೋರಸ್ಬ್ಯಾಡ. ನಿಂಗ ಮಾರಿ ಮ್ಯಾಲ ಮೀಸಿ ಇದ್ರ, ನಂಗ ಎದ್ಯಾಗ ಅವಾ. ರಟ್ಟಿ ಮುರದು ದುಡದು ತಿಂತೀನಿ... ನಿನ್ನಂಗ ಸರಗ್ಯಾಡಿ ಅಲ್ಲ...'' ಅಂತ ಸವಾಲ ಹಾಕಿ ಹಂಗೇ ಬದುಕು ಸುರುಮಾಡಿದ್ದಳು. ಮೊದಮೊದಲಿಗೆ ಸಂಗವ್ವಗೇ ಉಪದೇಶ ಹೇಳಿದವರು ಬರಬರುತ್ತ ಆಕಿಯ ಧೈರ್ಯಕ್ಕೆ ಹೊಗಳತೊಡಗಿದ್ದರು.

ಹೀಗೆ ಕುಡಿತದ ವಿರುದ್ಧ ಸೆಟೆದು ನಿಂತ ಸಂಗವ್ವ ಮಗನಿಗೆ ಸಚ್ಚಾರಿತ್ರ್ಯ ಸಜ್ಜನನಾಗಿ ಬೆಳೆಸಲು ಹೈರಾಣಾಗುತ್ತಿದ್ದಳು. ಮಗನ ಸಲುವಾಗಿ ಆಕಿ ಮಾಡದ ಕಟಿಪಿಟಿಯಿರಲಿಲ್ಲ. ವಾರಕ್ಕೊಮ್ಮಾದರೂ ಸಾಲಿ ಮಾಸ್ತರನಿಗೆ ಭೇಟಿಯಾಗಿ ಬರ್‍ತಿದ್ದಳು. ಬಾಜು ಮನೆಯಲ್ಲಿ ಕುಡದವರು ಇದ್ರೆ ಮಗನಿಗೆ ಹೊರಗೆ ಬಿಡ್ತಿರಲಿಲ್ಲ ''ಈಕಿಂದು ಭಾಳ ಆಯ್ತು...'' ಅಂತ ಮೂಗು ಮುರಿದವರಿಗೆ ವಾಪಸ್ ಎಕ್ಕಿ ಮುರದು ಬಾಯಿ ಮುಚ್ಚಿಸಿದ್ದಳು



...ಪ್ರಖ್ಯಾತ ಟಿಂಬರ್ ಕಂಟ್ರಾಕ್ಟರ್
ಈ ಕಾರ್ಯಕ್ರಮದ
ಮುಖ್ಯ ಅತಿಥಿ ಕಣ್ರೀ...!!

ಸಂಗವ್ವ. ಅಂತೂ ಮಗನಿಗೆ ಹತ್ತನೇ ಕ್ಲಾಸು ಪಾಸು ಮಾಡಿಸೇ ಬಿಟ್ಟಳು. ಆಗಂತೂ ಆಕಿನ ಹಿಗ್ಗಿಗೆ ಪಾರವೇ ಇರಲಿಲ್ಲ.

ಒಂದಿನ ಏನಾಯ್ತು...? ನಾಡಿಗೆ ಎಲೆಕ್ಷನ್ ಬಂದಿತ್ತು. ಓಟಿನ ಭರಾಟಿ ನಡೆದಿತ್ತು. ಗೆಲ್ಲುವ-ಸೋಲಿಸುವ ಹಿಕಮತುಗಳು ದಿನಗಳೆದಂತೆ ಕ್ರೂರ ಸ್ವರೂಪ ಧರಿಸಿ ತಾಂಡವವಾಡುತ್ತಿದ್ದವು. ಹಗಲು-ರಾತ್ರಿಗಳು ಚುನಾವಣೆಯ ಕಾಲ್ತುಳಿತಕ್ಕೆ ಸಿಕ್ಕು ಕಕ್ಕಾವಿಕ್ಕಿ ಯಾಗುತ್ತಿದ್ದವು. ಪುಗಸಟ್ಟೆ ಕುತ್ತಾಛಾಪ್ ಪಾಕೀಟ್‌ಗಳಿಗೆ ಜೊಲ್ಲು ಸುರಿಸುವವರ ಸಂಖ್ಯೆಯು ನೋಡ ನೋಡುತ್ತಿದ್ದಂತೆಯೇ ರಕ್ತಬೀಜಾಸುರರಂತೆ ಬೆಳೆಯು ತ್ತಿತ್ತು. ಸಂಗವ್ವ ಕುಡಿವವರಿಗೆಲ್ಲ ಬೈಯ್ಯುತ್ತಿದ್ದಳು. ''ಉಚ್ಚಿ ಕುಡದು ನಶಾ ಆಗ್ತಿರಿ ...ನೀವ್ಯಾತರ ಮನಸೇರು ? ಕುಡಸಾ ಛಾಡಕಾವ್‌ಗನೂ ನಾಚಿಕಿಲ್ಲ, ಮನಿಮುರ್ಕರು, ಕುಡ್ಯಾವಕನೂ ಇಲ್ಲ...'' ಅಂತ ಬೈಯ್ಯುವ ಆಕಿನ ಎದುರು ಯಾರೂ ನಿಲ್ತಿರಲಿಲ್ಲ.

ಅವತ್ತು ಮಗ ರಾತ್ರಿ ಏಟೊತ್ತಾದರನೂ ಮನಿಗೆ ಬರಲಿಲ್ಲ. ಸಂಗವ್ವ ಹುಡುಕತೊಡಗಿದಳು. ಈಗ ಬಂದಾನು. ಎಲ್ಲಿ ಹೋದಾನು ? ಅಂತ ಸಂತೈಸಿಕೊಂಡಳು. ಕತ್ತಲು ಢಾಳಾಗು ತ್ತಿದ್ದಂತೆಯೇ ಗಾಬರಿಗೊಳಗಾದಳು. ಆಕಾಶ-ಪಾತಾಳವೆಲ್ಲ ಏಕಕಾಲದಲ್ಲಿ ಕುಂಚಿಗೆಯಂತೆ ಜಾಡಿಸುವ ತಾಖತ್ತಿದ್ದ ಸಂಗವ್ವನಿಗೆ ಕಡೆಗೂ ಮಗ ಸಿಕ್ಕ. ಆಗ ರಾತ್ರಿ ಹನ್ನೆರಡು ಹೊಡೆದುಹೋಗಿತ್ತು. ಹತ್ತಾರು ಹುಡುಗರನ್ನು ಪೋಲ್‌ಚೀಟ್ಸ್ ಬರೆಯಲು ಬಲ್ಲ ವಿದ್ಯಾರ್ಥಿಗಳಿಗೆ ಹಚ್ಚಿದರು ರಾಜಕೀಯ ಪಾರ್ಟಿಯವರು. ಅವರಲ್ಲಿ ಸಂಗವ್ವನ ಮಗನೂ ಸೇರಿದ್ದ. ಬರೆವಷ್ಟು ಬರೆದು ಆಮೇಲೆ ಎಲ್ಲರೊಂದಿಗೆ ಉಂಡು ತಿಂದು ಕುಡಿದು ಕುಂತಿದ್ದ ಮಗನನ್ನು ಸಂಗವ್ವ ನೋಡಿದಳು. ಅಲ್ಲೇನಿದೆ ? ಮಗ ಥೇಟ್ ತನ್ನ ಗಂಡನಂತಾಗಿದ್ದಾನೆ, ಕಣ್ಣುಗಳೂ ಕೆಂಪಾಗಿವೆ. ತನ್ನ ಜೀವನವೇ ಭಸ್ಮ ಮಾಡುವ ಕೆಂಡದಂತೆ. ಅವ್ವನನ್ನು ಕಂಡು ಗಾಬರಿಬಿದ್ದು ಏಳಬೇಕೆಂದರೂ ಜೋಲಿ ಬಂದು ಆಗದೆ, ಅಂಜಿ ಚೆಡ್ಡಿ ಹಸಿ ಮಾಡಿಕೊಂಡ.

ಸಂಗವ್ವನಿಗೆ ಕಾಲ ಕೆಳಗಿನ ನೆಲ ಕುಸಿದು ಪಾತಾಳ ಸೇರುತ್ತಿರುವಂತಾಯ್ತು. ತನ್ನೆದುರೇ ತಾ ಕಟ್ಟಿದ ಸೌಧ ಕುಸಿಯತೊಡಗಿತು. ನೋಡಿ ಹೌಹಾರಿ, ಎದೆ ಒಡೆದು ಕಣ್ ರೆಪ್ಪೆ ಬಡಿಯದೆ, ಗುಡ್ಡೆ ಮಿಲುಕಿಸದೇ ಕಲ್ಲಾದಳು ಸಂಗವ್ವ.

ಯಾರೋ ಸಂಗವ್ವನಿಗೂ ನಶೆಯಲ್ಲಿದ್ದ ಮಗನಿಗೂ ಮನೆಗೆ ತಂದರು. ಆನಂತರದ ಸಂಗವ್ವ ಹುಚ್ಚಿಯೇ. ಅಂದು ನಿಂತುಹೋದ ಕಣ್‌ರೆಪ್ಪೆಗಳು ನಿಂತಂತೇ ಇವೆ. ಉಣ್ಣುತ್ತಾಳೆ. ಎಷ್ಟೊ ದಿನ ಅನ್ನದತ್ತ ಕಣ್ಣೆತ್ತಿಯೂ ನೋಡುವುದಿಲ್ಲ. ಗಂಟಲಿದೆ ಬಿಕ್ಕಲು ಮತ್ತು ಕೆಲವೊಮ್ಮೆ ಅಳಲು. ಮಾತುಗಳು ಸತ್ತು ಹೋಗಿವೆ. ಎಲೆಕ್ಷನ್ ಬಂದಾಗ ಮನೆಯ ತಲಬಾಗಿಲ ಮುಂದೆ ಕೂತು ಕಲ್ಲು ತೂರುತ್ತಾಳೆ ಒಂದೇ ಸವನೆ. ಪ್ರಚಾರಕ್ಕೆ ಅತ್ತ ಹಣಿಕುವ ಧೈರ್ಯ ಯಾರಿಗಿಲ್ಲ.

ತನ್ನವ್ವನ ಸ್ಥಿತಿಗೆ ತಾನೇ ಕಾರಣನೆಂದು ಮಗ ಮಮ್ಮಲ ಮರುಗುತ್ತಾನೆ. ಪಶ್ಚಾತ್ತಾಪದ ಕುಂಡದಲ್ಲಿ ಬೇಯುತ್ತಾನೆ. ಓದು ಬಿಟ್ಟು ದುಡಿಯಲು ನಿಂತಿದ್ದಾನೆ. ಎರಡು ಹೊಟ್ಟೆ ತುಂಬಬೇಕಲ್ಲ...! ಆದರೆ ಎದೆಗಾತಿ ಸಂಗವ್ವನನ್ನು, ಕೂಲಿ ಮಾಡಿ ಸಣ್ಣಕ್ಕಿ ತಂದು ಕೈತುತ್ತು ಕೊಡುವ, ಮಲಗಿದ ಮೇಲೂ 'ಕೂಸು ಹೈರಾಣ್ಯಾಗ್ಯಾದ ಒದಿ' ಅಂತ ತನ್ನ ಕಾಲೊತ್ತುತ್ತ ಕೂತಲ್ಲೇ ಜೊಂಪು ಬಂದು ಅಲ್ಲೇ ತೂಕಡಿಸುವ ತನ್ನವ್ವನನ್ನು ಕಳೆದುಕೊಂಡಿದ್ದಾನೆ...

ಈ ಟ್ರೇನು ಓಡುತ್ತಿದೆ. ಅಂಗಾತ ಮಲಗಿದ್ದೇನೆ. ಸಂಗವ್ವ ಮತ್ತು ಸಂಗೀತಾ ಎರಡು ಹನಿ ಬಿಂದುಗಳಾಗಿ ಕಣ್ಣ ಪಕ್ಕದಿಂದ ಕಪಾಳು ಸೋಕುತ ತಣ್ಣನೆಯ ತಲವಾರಿನಂತೆ ಸೀಳುತ ಹರಿಯುತ್ತಿದ್ದಾರೆ.

ಕೆ. ನೀಲಾ
ಜನವಾದಿ ಮಹಿಳಾ ಸಂಘಟನೆ
ಪಿ.ಡಬ್ಲ್ಯು.ಡಿ.ಕ್ವಾರ್ಟರ್ಸ್, ಗುಲಬರ್ಗಾ

# ‘ಹೆಂಡತಿ’ಯನ್ನು ಸುಟ್ಟ ಹಾಗೂ ಆಯ್ತು – ಚಳಿ ಕಾಯಿಸಿಕೊಂಡ ಹಾಗೂ ಆಯ್ತು

ಸತ್ತ ಗಂಡನ ಧಗ ಧಗ ಉರಿಯುವ ಚಿತೆಗೆ ಜೀವಂತವಿರುವಾಗಲೇ ಆತನ ಹೆಂಡತಿಯೂ ಜಿಗಿದು ಸುಟ್ಟು ಬೂದಿಯಾಗುವುದೇ ಸತಿಪದ್ಧತಿ. ಈ ಪದ್ಧತಿ ಬಹುತೇಕ ೧೯ನೇ ಶತಮಾನದಲ್ಲೇ ನಿಂತುಹೋಯಿತು ಎಂಬಂತಹ ಭಾವನೆಗಳು ಇವೆ. ಆದರೆ ವಾಸ್ತವ ಹಾಗಿಲ್ಲ. ಇಂದಿಗೂ ನಮ್ಮ ಸಮಾಜದಲ್ಲಿ ಆಗೊಂದು ಈಗೊಂದು ಸತಿ ಪದ್ಧತಿಯ ಆಚರಣೆಯ ವರದಿಗಳು ಬರುತ್ತಲೇ ಇವೆ. ೧೯೮೭ರಲ್ಲಿ ರಾಜಸ್ಥಾನದಲ್ಲಿ ನಡೆದ ‘ಸತಿ’ ಸುದ್ದಿಯಾಯಿತು. ಇತ್ತೀಚಿನ ದಿನಗಳಲ್ಲಿ ಮಧ್ಯಪ್ರದೇಶದಿಂದ ಇಂತಹ ವರದಿಗಳು ಬರುತ್ತಿವೆ.

ಕೇಂದ್ರದಲ್ಲಿ ಬಿಜೆಪಿ ನೇತೃತ್ವದ ಎನ್.ಡಿ.ಎ. ಸರ್ಕಾರ ಅಧಿಕಾರದಲ್ಲಿ ಇದ್ದಾಗ, ಸತಿಪದ್ಧತಿಯ ಬಗ್ಗೆ ಪಠ್ಯದಲ್ಲಿ ಬದಲಾವಣೆ ತರಲಾಯಿತು. ‘ಸತಿ’ ಒಂದು ಸಾಮಾಜಿಕ ಅನಿಷ್ಟ ಎಂಬ ರೀತಿಯಲ್ಲಿ ನಿರೂಪಿಸಲಾಗಿದ್ದ ಪಠ್ಯವನ್ನು ಬದಲಿಸಿ ‘ಸತಿ’ ಪದ್ಧತಿಯು ಹಿಂದೂ ಸಂಸ್ಕೃತಿಯ ಹಿರಿಮೆಯ ಪ್ರತೀಕ ಎಂಬಂತೆ ಬರೆಯಲಾಯಿತು. ‘ಸತಿ’ ಪದ್ಧತಿಯನ್ನು ಹಿಂದೂ ಮಹಿಳೆಯರ ‘ಸ್ವಾಭಿಮಾನ’, ‘ಧೈರ್ಯ’ ಎಂದೆಲ್ಲಾ ಹಾಡಿ ಹೊಗಳುವ ವಿಚಾರಗಳನ್ನು ಸೇರಿಸಲಾಯಿತು.

‘ಸತಿ’ ಪದ್ಧತಿಯನ್ನು ಹಿಂದೂ ಮಹಿಳೆಯ ‘ಸ್ವಾಭಿಮಾನ’, ‘ಧೈರ್ಯ’ ಎಂದೆಲ್ಲಾ ಹೊಗಳುವ ಆರೆಸ್ಸೆಸ್‌ನ ಚಿಂತನೆಯ ಬಾಣವು ಏಕಕಾಲಕ್ಕೆ ಎರಡು ಹಕ್ಕಿಗಳ ಕಡೆಗೆ ಗುರಿಯಿಟ್ಟಿದೆ. ಅಂದರೆ ಹೆಂಡತಿಯನ್ನು ಸುಟ್ಟ ಹಾಗೂ ಆಗಬೇಕು, ಚಳಿಯನ್ನು ಕಾಯಿಸಿಕೊಂಡ ಹಾಗೂ ಆಗಬೇಕು. ಅದರಲ್ಲಿ ಒಂದು ಗುರಿ ಪುರುಷಪ್ರಧಾನ ಮೌಲ್ಯಗಳ ಭಾಗವಾಗಿ ರೂಪುಗೊಂಡಿರುವ ಸತಿ ಪದ್ಧತಿಯಂತಹ ಕ್ರೌರ್ಯವನ್ನು, ಅನಾಗರಿಕ ಪದ್ಧತಿಯನ್ನು, ಮಹಿಳೆಯರ ಮೇಲೆ ಹೇರುವುದು. ಎರಡನೆಯದು ತಮ್ಮ ಎಂದಿನ ಮುಸ್ಲಿಂ ದ್ವೇಷದ ವಿಷ ಪ್ರಚಾರವನ್ನು ಸಮಾಜದಲ್ಲಿ ಹರಡಿ ಇಡೀ ಸಮಾಜದ ಚಿಂತನೆಯನ್ನೇ ಕೋಮುವಾದೀಕರಿಸಲು ‘ಸತಿ’ ವಿಚಾರವನ್ನು ಸಹ ಬಳಸುವುದು.

೧೯೮೭ರಲ್ಲಿ ರಾಜಸ್ಥಾನದಲ್ಲಿ ತನ್ನ ಪತಿಯನ್ನು ಕಳೆದುಕೊಂಡ ರೂಪ ಕನ್ವರ್ ಎಂಬ ೧೮ರ ವಯಸ್ಸಿನ ಹೆಣ್ಣುಮಗಳನ್ನು ಆಕೆಯ ಗಂಡನ ಚಿತೆಗೆ ನೂಕಿ ಸುಟ್ಟು ಹಾಕಲಾಯಿತು. ಪ್ರಜ್ಞಾವಂತರು, ಪ್ರಗತಿಪರರು ಈ ಘೋರ ಕೃತ್ಯವನ್ನು ಖಂಡಿಸಿ ಪ್ರತಿಭಟಿಸಿದರೆ, ಸಂಘಪರಿವಾರ ಇದು ಹಿಂದೂ ಸಂಸ್ಕೃತಿ ಪರಂಪರೆಯ ಮುಂದುವರಿಕೆ ಎಂದು ಸಂಭ್ರಮಿಸಿತು. ಇದು ಅಲ್ಲಿಗೆ ನಿಲ್ಲಲಿಲ್ಲ. ಅಂದಿನ ಬಿ.ಜೆ.ಪಿ. ಪಕ್ಷದ ರಾಷ್ಟ್ರೀಯ ನಾಯಕಿ ‘ರಾಜಮಾತಾ’ ವಿಜಯರಾಜೇ ಸಿಂಧಿಯಾ ಅವರು ರೂಪ ಕನ್ವರ್‌ಗೆ ದೇವಾಲಯ ನಿರ್ಮಿಸುವ ಚಳುವಳಿಯನ್ನು ಆರಂಭಿಸಿದರು. ಅವರು ರಾಷ್ಟ್ರೀಯ ಸ್ವಯಂ ‘ಸೇವಿಕಾ’ ಸಂಘದ ರಾಷ್ಟ್ರೀಯ ನಾಯಕಿಯಾಗಿದ್ದರು. ಇದು ಆರೆಸ್ಸೆಸ್‌ನ ಅಂಗ.

ಎಲ್ಲ ಪ್ರಕರಣಗಳಲ್ಲೂ ಮಹಿಳೆಯನ್ನು ಬಲಾತ್ಕಾರವಾಗಿ ನೂಕಲಾಗುತ್ತದೆ ಎಂದೇನೂ ಇಲ್ಲ. ಆದರೆ ಮಹಿಳೆ ತಾನೇ ತಾನಾಗಿ ಚಿತೆಗೆ ಹೋಗಿಬೀಳುವಂತಹ ವಾತಾವರಣವನ್ನು ಈ ಸಮಾಜದಲ್ಲಿ ತಲೆತಲಾಂತರಗಳಿಂದಲೂ ಸೃಷ್ಟಿಸಲಾಗಿದೆ. ಗಂಡ ಸತ್ತಮೇಲೆ (ಯುವ ವಯಸ್ಸಿನ) ಹೆಂಡತಿ ಬದುಕುವುದೇ ಮಹಾಪಾಪ. ಅದು ಅನೈತಿಕ. ಬದುಕಿದರೂ ಆಕೆ ಸಮಾಜದ ನೈತಿಕತೆಯನ್ನು ಕೆಡಿಸುತ್ತಾಳೆ. ‘ಸತಿ’ ಹೋಗುವುದು ಪರಮ ಪವಿತ್ರವಾದ ಪೂಜನೀಯವಾದ ಕಾರ್ಯ – ಎಂಬಂತಹ ಪರಿಸರದಲ್ಲಿ, ವಿಧವೆಯಾಗಿ ಬದುಕುತ್ತಾ ಈ ಸಮಾಜದಲ್ಲಿ ಬದುಕಬೇಕಾದ ಘೋರ ಪರಿಸ್ಥಿತಿಯನ್ನು ಕಲ್ಪಿಸಿಕೊಂಡ ಹೆಣ್ಣು ಏನು ಮಾಡಬಹುದಿತ್ತು? ಬೆಂಕಿಯ ಉರಿಯ ಕೆನ್ನಾಲಿಗೆಗಿಂತ, ವಿಧವೆಯಾದ ತನ್ನ ಬಾಳು ಬಲು ಭೀಕರ ಎಂದು ಭಾವಿಸಿ, ತಾನೇ ಚಿತೆಗೆ ಹಾರುತ್ತಿದ್ದಿರಬೇಕು. ಗಂಡ ತನ್ನ ಹೆಂಡತಿ ಸತ್ತರೆ ಮರು ಮದುವೆಗೆ ಅವಕಾಶವಿದೆ. ಸತ್ತ ನಂತರವೇನು, ಬದುಕಿದ್ದಾಗಲೂ ಸಹ ಮರುಮದುವೆಗೆ ಅವಕಾಶವಿದೆ. ಆದರೆ ಈ ಸಮಾಜದಲ್ಲಿ ಗಂಡ ಸತ್ತ ಹೆಣ್ಣಿಗೆ ಮರು ಮದುವೆಯಾಗಿ ಗೌರವದ ಜೀವನ ನಡೆಸುವ ಅವಕಾಶವಂತೂ ಇಲ್ಲವಲ್ಲ. ಹೀಗೆ ‘ಸ್ವಯಂ’ ಪ್ರೇರಣೆಯಿಂದ ಸತಿ ಹೋದ ಮಹಾಸತಿಯನ್ನು ಹೊಗಳುವ ಸಾವಿರ ಸಾವಿರ ಮಾಸ್ತಿ (ಮಹಾಸತಿ)ಗಲ್ಲುಗಳು ನಮ್ಮ ನಾಡಿನಲ್ಲಿ ಸಿಗುತ್ತವೆ.

ಸತಿಪದ್ಧತಿಯಂತಹ ಒಂದು ಅನಾಗರಿಕ ಪದ್ಧತಿಯನ್ನು ಮನುಷ್ಯತ್ವವುಳ್ಳ ಯಾರೂ ಸಮರ್ಥಿಸುವುದು ಸಾಧ್ಯವಿಲ್ಲ. ತಮ್ಮ ವಾದವನ್ನು ಸಮರ್ಥಿಸಿಕೊಳ್ಳಲಾಗದಿರುವಾಗ ತಮ್ಮ ಮೇಲಿನ ಅಪವಾದವನ್ನು ಮುಸ್ಲಿಮರ ತಲೆಗೆ ಸುತ್ತಿಬಿಡುವುದು ಬಹು ಸುಲಭದ ಕೆಲಸ. ಸಂಘಪರಿವಾರದ ಪ್ರಕಾರ ‘ಸತಿ ಪದ್ಧತಿ’ಯ ಆರಂಭಕ್ಕೆ ಮುಸಲ್ಮಾನರೇ ಕಾರಣ. ವಿದೇಶಿ ಮುಸ್ಲಿಂ ದಾಳಿಕೋರರು ಭಾರತದ ಹಿಂದೂಗಳ ಮೇಲೆ ದಾಳಿ ಮಾಡಿದಾಗ ಯುದ್ಧಗಳಲ್ಲಿ ತಮ್ಮ ಗಂಡಂದಿರನ್ನು ಕಳೆದುಕೊಂಡ ಹಿಂದೂ ಮಹಿಳೆಯರು ತಮ್ಮ ಮಾನ ರಕ್ಷಣೆಗೆ ಬೇರೆ ದಾರಿ ಕಾಣದೆ ಈ ‘ಸತಿ’ ಹೋಗುವ ದಾರಿ ಕಂಡುಕೊಂಡರಂತೆ. ಇಂತಹ ಭಾವನೆ ಬೆಳೆಸಿ ಸಂಘಪರಿವಾರ ಸತಿಪದ್ಧತಿಯನ್ನು ‘ಸ್ವಾಭಿಮಾನ’, ‘ಧೈರ್ಯ’ ಎಂದೆಲ್ಲಾ ಹೊಗಳುತ್ತದೆ.

ಸತಿ ಪದ್ಧತಿಯ ಮೂಲ ಏನು ಎಂದು ಹುಡುಕಿದರೆ ಅದು ನಮ್ಮನ್ನು ಗುಪ್ತರ ‘ಸುವರ್ಣ ಕಾಲ’ಕ್ಕೆ ಕರೆದೊಯ್ಯುತ್ತದೆ. ‘ಮನುಸ್ಮೃತಿ’ಯಲ್ಲಿ ಸತಿ ಪದ್ಧತಿಯ ಸುಳಿವೇನೂ ದೊರೆಯುವುದಿಲ್ಲ. ಬದಲಿಗೆ ಗಂಡ ಸತ್ತ ಮಹಿಳೆ ತನ್ನ ಗಂಡನ ಸಹೋದರರನಿಂದ ಮಗುವನ್ನು ‘ಪಡೆಯುವ’ ಅವಕಾಶವನ್ನು ಮನುಸ್ಮೃತಿಯಲ್ಲಿ ನೀಡಲಾಗಿದೆ ಹಾಗೂ ಆಕೆಗೆ ಬದುಕುವ ಅವಕಾಶವನ್ನು ನೀಡಲಾಗಿದೆ. ‘ಸತಿ’ ಈ ಕಾಲಘಟ್ಟದ ನಂತರದ ಬೆಳವಣಿಗೆ.

ಸಮಾಜದ ಬೆಳವಣಿಗೆಯ ಹಾದಿಯಲ್ಲಿ ಖಾಸಗಿ ಆಸ್ತಿಯ ಸಂಚಯನ (ಸಂಗ್ರಹ) ಸೀಮಿತವಾಗಿದ್ದು, ಎಲ್ಲರೂ ದುಡಿಯಬೇಕಾಗಿದ್ದ ಹಂತದಲ್ಲಿ ಮಹಿಳೆಯರ ಸ್ಥಾನಮಾನವು ತಕ್ಕಮಟ್ಟಿಗೆ ಉತ್ತಮವಾಗಿತ್ತು. ಋಗ್ವೇದದ ಕಾಲದಲ್ಲಿ ಮಹಿಳೆಯರಿಗೆ ಸಾಮಾಜಿಕವಾಗಿ ಉತ್ತಮ ಸ್ಥಾನಮಾನಗಳಿದ್ದವು. ಸಮಾಜ ಬೆಳೆದಂತೆ, ಉತ್ಪಾದನೆ, ವ್ಯಾಪಾರ, ಸವಲತ್ತು ಹೆಚ್ಚಿದಂತೆ ಪರಿಸ್ಥಿತಿ ಬದಲಾಗುತ್ತಾ ಬಂತು. ಒಂದೊಮ್ಮೆ ವೈಶ್ಯರಾಗಿದ್ದ ‘ಗುಪ್ತ’ರನ್ನು ಬ್ರಾಹ್ಮಣರು ‘ಕ್ಷತ್ರಿಯರು’ ಎಂದು ಮಾನ್ಯ ಮಾಡಿದರು. ಹೀಗಾಗಿ ಗುಪ್ತರ ಸಾಮ್ರಾಜ್ಯದಲ್ಲಿ ಬ್ರಾಹ್ಮಣ ಸ್ಥಾನಮಾನಗಳೂ ಮತ್ತಷ್ಟು ಮೇಲೇರಿದವು. ಅವರು ಪಡೆಯುತ್ತಿದ್ದ ಭೂಮಿ ಮುಂತಾದ ದಾನ, ಕೊಡುಗೆಗಳು ಹೆಚ್ಚಿ ಬ್ರಾಹ್ಮಣರ ಸಂಪತ್ತು ಹೆಚ್ಚಿತು. ಈ ಖಾಸಗಿ ಆಸ್ತಿಯ ಮೇಲೆ ಒಡೆತನ ಹೊಂದಿರುವ ಪುರುಷರ ಪರವಾದ ಪುರುಷಪ್ರಧಾನ ಮೌಲ್ಯಗಳು ಹೆಚ್ಚಿದವು. ಈ ಆಸ್ತಿವಂತ ವರ್ಗದಲ್ಲಿ ‘ಮಹಿಳೆ’ಯನ್ನೂ ಒಂದು ಆಸ್ತಿ ಎಂದು ಪರಿಗಣಿಸಲಾಯಿತು ಹಾಗೂ ಪುರುಷರಲ್ಲಿ ಬಹುಪತ್ನಿತ್ವ ಹೆಚ್ಚಿತು. ಇಹಲೋಕದ ನಂತರ ಪರಲೋಕದಲ್ಲಿಯೂ ಬದುಕು ಇದೆ ಎಂಬ ನಂಬಿಕೆಯೂ ಬೆಳೆದಂತೆ ಸತ್ತ ಗಂಡನೊಂದಿಗೆ ಹೆಂಡತಿಯೂ ಪರಲೋಕಕ್ಕೆ ಹೋಗಬೇಕಾದವಳು ಎಂದು ಭಾವಿಸಲಾಯಿತು. ಈಜಿಪ್ಟ್‌ನ ಪಿರಮಿಡ್‌ಗಳಲ್ಲಿ ಸತ್ತವರ ಜೊತೆಯಲ್ಲಿ ಅವರು ಬಳಸುತ್ತಿದ್ದ ಎಲ್ಲಾ ವಸ್ತುಗಳನ್ನು ನಂತರದ ಬದುಕಿಗಾಗಿ ಎಂದು ಜೊತೆಗೆ ಇಡುತ್ತಿದ್ದರಲ್ಲವೆ? ಹೆಣ್ಣನ್ನು ಗಂಡಿಗೆ ಅಗತ್ಯವಾದ ಒಂದು ವಸ್ತು, ಒಂದು ಆಸ್ತಿ ಎಂದು ಭಾವಿಸುವ ಪುರುಷ ಪ್ರಧಾನ ಮೌಲ್ಯವೇ ಸತಿ ಪದ್ಧತಿಯ ಮೂಲ. ಕ್ರಿ. ಶ. ೫೧೦ರಲ್ಲಿ ಹೆಣ್ಣೊಬ್ಬಳು ಗಂಡನ ಚಿತೆ ಏರಿದ್ದಕ್ಕೆ ಇತಿಹಾಸದಲ್ಲಿ ದಾಖಲೆ ದೊರೆಯುತ್ತದೆ. ಖ್ಯಾತ ಇತಿಹಾಸಕಾರ ಆರ್. ಎಸ್. ಶರ್ಮಾರವರು ತಮ್ಮ ‘ಪ್ರಾಚೀನ ಭಾರತ’ ಕೃತಿಯಲ್ಲಿ ಇದನ್ನು ದಾಖಲಿಸಿದ್ದಾರೆ.

ಆ ಸಂದರ್ಭದಲ್ಲಿ ಹಿಂದೂ ಮಹಿಳೆಯರ ಮೇಲೆ ದಾಳಿ ಮಾಡಲು ಮುಸ್ಲಿಮರು ಎಲ್ಲಿದ್ದರು? ಇಸ್ಲಾಂ ಧರ್ಮವಾದರೂ ಎಲ್ಲಿತ್ತು? ಸತಿ ಪದ್ಧತಿ ಜಾರಿಯಲ್ಲಿದ್ದುದು ಬಹುತೇಕ ಮೇಲ್ಜಾತಿಯ ಜನರಲ್ಲಿ, ಖಾಸಗಿ ಆಸ್ತಿಯ ಸಂಗ್ರಹ ಇದ್ದುದು ಮೇಲ್ಜಾತಿಯವರಲ್ಲೇ. ಬಹುತೇಕ ದುಡಿಯುವ ವರ್ಗವಾಗಿದ್ದ ಶೂದ್ರರು ಮತ್ತು ದಲಿತ ವರ್ಗದಲ್ಲಿ ಸತಿ ಆಚರಣೆ ಇರಲಿಲ್ಲ ಎಂಬುದನ್ನು ಗಮನಿಸಬೇಕು. ನಮ್ಮ ಸಮಾಜದ ಸ್ವರೂಪ, ಸಂಸ್ಕೃತಿಯನ್ನು ನಿರೂಪಿಸುವಲ್ಲಿ ಆಸ್ತಿ ಪಾಸ್ತಿ ಆರ್ಥಿಕ ಅಂಶಗಳು ಪ್ರಧಾನ ಪಾತ್ರ ವಹಿಸುತ್ತವೆ ಎಂಬ ತತ್ವ ಎಷ್ಟು ಸತ್ಯ ಎಂಬುದನ್ನು ಇಲ್ಲಿ ಸಹ ನೋಡಬಹುದು.

ಆರ್. ರಾಮಕೃಷ್ಣ
೧೨, ೧೮ನೇ ಅಡ್ಡರಸ್ತೆ, ಸಂಪಂಗಿರಾಮನಗರ, ಬೆಂಗಳೂರು - ೫೬೦ ೦೨೭

# ತೀರ್ಮಾನ

ಮನೆ ಮುಂದಿನ ಕಟ್ಟೆಯ ಮೇಲೆ ಮಿಡಿಕಟ್ಟಿ ಚೀಲಕ್ಕೆ ತುಂಬಿಟ್ಟಿದ್ದ ರಕ್ಕಸ ಬಳ್ಳಿ ದಾರದಿಂದ ನಂಜ ಹುರಿ ಹೊಸೆಯುತ್ತಿದ್ದ. ಮಲ್ಲಾರಿಗೌಡರು ಮನೆ ದೇವರ ಸ್ತುತಿ ಪಂಚಾಯತಿ ಕಟ್ಟೆಗೆ ತಯಾರಿ ನಡೆಸಿದ್ದರೆ ವಿನಾ ಆ ವಿಷಯದ ಬಗ್ಗೆ ಮನೆಯಲ್ಲಿ ಪ್ರಸ್ತಾಪ ಮಾಡಿರಲಿಲ್ಲ. ಅವರು ಹೊರಡುವಾಗ ಹಿರೇಮಗ ನಂಜ,

''ಬಾಬ, ಈ ದಿನ ನೀವ್ ಕೊಡೋ ತೀರ್ಮಾನ ನಮ್ ಕಡಿಕ್ ಆಗ್ಬೇಕು'' ಅಂದ. ಇದುವರೆವಿಗೂ ಎದುರು ನಿಂತು ಮಾತನಾಡದ ಮಗ ತಾನಿಂದು ಕೊಡುವ ತೀರ್ಮಾನದ ಬಗ್ಗೆ ಮಾತನಾಡುತ್ತಿರುವನಲ್ಲ ಎಂದು ಅವನ ಮೇಲೆ ಹರಿಹಾಯಬೇಕೆನಿಸಿದರೂ ಅದು ತಕ್ಕ ಸಂದರ್ಭವಲ್ಲ ಎಂದು ಒಳಬಾಗಿಲ ಕಡೆ ದೃಷ್ಟಿ ಹಾಯಿಸಿದಾಗ ಬಾಗಿಲನ್ನು ಹಿಡಿದುಕೊಂಡು ನಿಂತಿದ್ದ ಪಾರಿ ಹಾಗೆಯೇ ಒಳಸರಿದಿದ್ದಳು. ಗೌಡರಿಗೆ ಎಲ್ಲವೂ ಅರ್ಥವಾಗಿತ್ತು. ಮಗನ ಮಾತಿಗೆ ಜವಾಬು ಕೊಡದೆ ಚಾವಡಿಕಟ್ಟೆ ಹಾದಿ ಹಿಡಿದಿದ್ದರು.

**ಪಿ. ಅಶೋಕ್ ಡಿಸಲೆ**

**ಚ**ಕ್ಕಡಿ ಹಾದಿಯಲ್ಲಿ ಗುಡಿಸಲು ಕೊಪ್ಪಕ್ಕೆ ಕೊಪ್ಪವೇ ಹೊತ್ತಿ ಉರಿದುಹೋಯಿತೇನೊ ಎಂಬಂತೆ ಬೊಬ್ಬೆ ಹೊಡೆಯುತ್ತಾ ಗೌಡರ ಹೊಲದ ಬದಿ ಹಿಡಿದು ಓಡಿ ಬರುತ್ತಿದ್ದ ಚೀಕನನ್ನು ಕಂಡು ಕಮ್ತಾ ಮಾಡುತ್ತಿದ್ದವರೆಲ್ಲಾ ಗರಬಡಿದವರಂತೆ ಚೀಕನಕಡೆ ಬರಲಾರಂಭಿಸಿದರು. ಇತ್ತ ಕೊಪ್ಪದಲ್ಲಿ ಗೌಡರ ಮುಖ ಕಂಡರೆ ತಲೆ ಕೆಳಹಾಕುತ್ತಿದ್ದ ಗಂಡಸರೆಲ್ಲಾ ಪಕ್ಕಕ್ಕೆ ನಿಂತು ಗೌಡನ ಹುಚ್ಚುತನವನ್ನು ನೋಡಲಾರಂಭಿಸಿದರು.ತಲೆ ಮೇಲಿನ ಸೆರಗು ಜಾರಿದರೂ ಅದರ ಅರಿವಿಲ್ಲದ ಹೆಂಗಸರೆಲ್ಲಾ ಮರೆಯಾಗಿ ನಿಂತು ನೋಡುತ್ತಾ ಹಪಹಪಿಸಲಾರಂಭಿಸಿದರು. ಚಾವಡಿ ಕಟ್ಟೆ ಮೇಲೆ ಕುಳಿತು ತೂಕದ ಮಾತಿನಲ್ಲಿ ಪಂಚಾಯಿತಿ ಮುಗಿಸುತ್ತಿದ್ದ ಗೌಡನಿಂದು ಕೊಪ್ಪದ ತುಂಬೆಲ್ಲಾ ಕೇಕೆ ಹಾಕುತ್ತಾ ಕರೇಕಾಳಿಂಗನನ್ನು ಎಡಗೈಯಲ್ಲಿ ಹಿಡಿದುಕೊಂಡು ಸಿಕ್ಕ ಸಿಕ್ಕ ಓಣಿಗೆಲ್ಲಾ ಹೊಕ್ಕತೊಡಗಿದ್ದ.

ಹುಲುಸಾಗಿ ಬೆಳೆದು ಬಿರಿದ ಹತ್ತಿಯನ್ನು ಬಿಡುಸುವಲ್ಲಿ ಆಳುಗಳೊಂದಿಗೆ ಹುದುಗಿಹೋಗಿದ್ದ ರೊಡ್ಡನಿಗೆ ಕೇಳಿ ಬರುತ್ತಿದ್ದ ದನಿ, ಕೊಪ್ಪದ ದನಗಳನ್ನೆಲ್ಲಾ ಮೇಯಿಸಲು ಹೋಗುತ್ತಿದ್ದ ಚೀಕನದೆ ಎಂದು ಅರಿವಾಗಿ ಬಿರಬಿರನೆ ಹೊಲದ ಬದುವನ್ನು ತುಳಿದುಕೊಂಡು ಚೀಕನೆಡೆಗೆ ಬಂದಿದ್ದ. ಚೀಕ ಏದುಸಿರು ಬಿಡುತ್ತಾ ವಿಷಯ ಪ್ರಸ್ತಾಪ ಮಾಡುವುದನ್ನು ನೋಡಿದಾಗ ರೊಡ್ಡನಿಗೆ ಹುಚ್ಚು ಹಿಡಿಯುವುದು ಬಾಕಿ ಉಳಿದಿತ್ತು. ಒಮ್ಮೆಲೆ ತಲೆ ಕೊಡವಿಕೊಂಡು ಚೀಕ ಬಂದ ದಾರಿಯನ್ನೇ ಹಿಡಿದು ಓಡತೊಡಗಿದ. ಅಲ್ಲೇ ನೆರಳಿಗೊರಗಿದ ಚೀಕನ ಸುತ್ತಲೂ ಜನ ಸೇರಿ ವಿಷಯವನ್ನು ತಿಳಿದುಕೊಳ್ಳುತ್ತಿದ್ದರು. ರೊಡ್ಡ ಗೌಡನ ಮನೆ ಮುಂದೆ ಬಂದಾಗ ಕೊಪ್ಪದಲ್ಲಿ ಏನೇನು ನಡೆದೇ ಇಲ್ಲವೇನೋ ಎನ್ನುವಷ್ಟು ನಿರಾತಂಕವಾಗಿ ಕಟ್ಟೆ ಮೇಲೆ ಕುಳಿತು ಮಲ್ಲಾರಿ ಗೌಡರ ಸೊಸೆ ಪಾರಿ ಚಹಾ ಹೀರುತ್ತಿದ್ದುದನ್ನು ಕಂಡ ರೊಡ್ಡ ಏನೊಂದೂ ಹೇಳಲಾಗದೆ ಓಣಿಯತ್ತ ಸಾಗಿದ.

ಪಿತ್ರಾರ್ಜಿತವಾಗಿ ಮಲ್ಲಾರಿಗೌಡರಿಗೆ ಹೊಲಕ್ಕಂಟಿಕೊಂಡಿದ್ದ ಒಂಬತ್ತಂಕಣದ ಮನೆ ಮತ್ತು ಮೊದಲಿನಿಂದಲೂ ಮನೆತನಕ್ಕೆ ಒಪ್ಪಿಕೊಂಡು ಬಂದಿದ್ದಂತಹ ಚಾವಡಿ ಕಟ್ಟೆಯ ನ್ಯಾಯಪೀಠ. ಈ ಮನೆತನಕ್ಕೆ ಆಳಾಗಿ ಅಂಟಿಕೊಂಡಿದ್ದವನೆಂದರೆ ರೊಡ್ಡ. ಯಾವುದೇ ಕೆಲಸವಾಗಲಿ ತನ್ನ ಎಡಗೈಯನ್ನೇ ಮುಂದುಮಾಡಿ ಆರಂಭಿಸುತ್ತಿದ್ದ. ಹಾಗಾಗಿ ಎಲ್ಲರ ಬಾಯಲ್ಲೂ ಲೊಡ್ಡನಾದರೆ ಗೌಡರ ಬಾಯಲ್ಲಿ 'ಲ'ಕಾರ ಹೊರಳದೆ ರೊಡ್ಡನಾಗಿ ಉಳಿದಿದ್ದ. ಹದಿನೆಂಟು ಮೊಳದ ರುಮಾಲು, ಸಾದಾ ಅಂಗಿ, ಕಚ್ಚೆ ತೊಟ್ಟು ಕೊಪ್ಪದ ಓಣಿಗಳಲ್ಲಿ ಮಲ್ಲಾರಿಗೌಡರು ಹೊರಟರೆಂದರೆ, ಆ ಕೆರದ ಸದ್ದು ಕೇಳಿದರೆ ಸಾಕು ಎದೆ ಸೆಟೆದು ನಡೆಯುತ್ತಿದ್ದ ಗಂಡಸರೆಲ್ಲಾ ತಲೆ ಕೆಳಗೆ ಹಾಕುತ್ತಿದ್ದರು. ಹೆಂಗಸರು ತಲೆ ಮೇಲಿನ ಸೆರಗನ್ನು ಮುಟ್ಟಿ ಇದೆಯೋ ಇಲ್ಲವೋ ಎಂದು ಖಾತರಿಪಡಿಸಿಕೊಂಡರೆ, ಎಲೆಯಡಿಕೆ ತಂಬಾಕು, ಚುಟ್ಟ ಸೇದುವ ಚಟವಿದ್ದವರೆಲ್ಲಾ ಕದ್ದು ಚಟವನ್ನು ತೀರಿಸಿಕೊಳ್ಳುತ್ತಿದ್ದರು. ಕೂದಲು ಬಿಟ್ಟರೆ ಭುಜದ ಬಲ ಕುಂದುವುದೆಂಬುದು ಗೌಡರ ವಾದ. ಈ ವಾದಕ್ಕೆ ಒಪ್ಪಿದ ಗಂಡಸರೆಲ್ಲಾ ನುಣ್ಣಗೆ ಬೋಳಿಸಿಕೊಳ್ಳುತ್ತಿದ್ದರು. ಇದಕ್ಕೆಲ್ಲಾ ಯಾರಾದರೂ ತಪ್ಪಿ ಗೌಡರ ಕೈಗೆ ಸಿಕ್ಕರೆ ಮೆಟ್ಟಿನಿಲ್ಲಿ ಹೊಡೆದಂತಹ ಹಾರಿಕೆಯ ಮಾತನ್ನು ಗೌಡರಿಂದ ಕೇಳಬೇಕಾಗುತ್ತಿತ್ತು. ಕೇಳಿಯೂ ಸದ್ದಿಲ್ಲದೆ ಸಾಗಿಹೋಗುತ್ತಿದ್ದರು ಕೊಪ್ಪದ ಜನ.

ಸುಣಗಿಯ ಕಲ್ಮೇಶ್ವರನ ಗುಡಿಯಲ್ಲಿ ನಡೆಸಿದ ವಾದಕ್ಕೆ ಅಗಸಿಕಲ್ ಓಣಿಯ ನಾಗನ್‌ಗೌಡರು ಒಪ್ಪದಿದ್ದರಿಂದ ಅವರ ಗೌಡಕಿ ಹೊಲದ ವಿಚಾರ ಪಂಚಾಯತಿ ಕಟ್ಟೆ ಹತ್ತಿತ್ತು. ಈ ವಿಷಯ ಮಲ್ಲಾರಿಗೌಡರ ಬೀಗರದ್ದಾಗಿದ್ದರಿಂದ ಓಲೆಕಾರನ ಮುಖಾಂತರ ತಿಳಿಸದೆ ತಾವೇ ಖುದ್ದಾಗಿ ಬಂದು ಪ್ರಸ್ತಾಪಿಸಿದ ಶ್ಯಾನುಭೋಗರು ಪಂಚಾಯತಿ ನಡೆಸುವ ದಿನವನ್ನು ಗೌಡರ ಅನುಮತಿ ಮೇರೆಗೆ ಗೊತ್ತುಮಾಡಿದ್ದರು. ತಳವಾರನ ಮುಖಾಂತರ ಕೊಪ್ಪದ ತುಂಬೆಲ್ಲಾ ಸುದ್ದಿ ಮಾಡಿದರೆ ಸುಣಗಿಗೆ ಓಲೆಕಾರನನ್ನು ಕಳುಹಿಸಿದ್ದರು.

ಮನೆ ಮುಂದಿನ ಕಟ್ಟೆಯ ಮೇಲೆ ಮಿಡಿಕಟ್ಟಿ ಚೀಲಕ್ಕೆ ತುಂಬಿಟ್ಟಿದ್ದ ರಕ್ಕಸ ಬಳ್ಳಿ ದಾರದಿಂದ ನಂಜ ಹುರಿ ಹೊಸೆಯುತ್ತಿದ್ದ. ಮಲ್ಲಾರಿಗೌಡರು ಮನೆ ದೇವರ ಸ್ತುತಿ ಪಂಚಾಯತಿ ಕಟ್ಟೆಗೆ ತಯಾರಿ ನಡೆಸಿದ್ದರೆ ವಿನಾ ಆ ವಿಷಯದ ಬಗ್ಗೆ ಮನೆಯಲ್ಲಿ ಪ್ರಸ್ತಾಪ ಮಾಡಿರಲಿಲ್ಲ. ಅವರು ಹೊರಡುವಾಗ ಹಿರೇಮಗ ನಂಜ,

''ಬಾಬ, ಈ ದಿನ ನೀವ್ ಕೊಡೊ ತೀರ್ಮಾನ ನಮ್ ಕಡಿಕ್ ಆಗ್ಬೇಕು'' ಅಂದ. ಇದುವರೆವಿಗೂ ಎದುರು ನಿಂತು ಮಾತನಾಡದ ಮಗ ತಾನಿಂದು ಕೊಡುವ ತೀರ್ಮಾನದ ಬಗ್ಗೆ ಮಾತನಾಡುತ್ತಿರುವನಲ್ಲ ಎಂದು ಅವನ ಮೇಲೆ



ಹರಿಹಾಯಬೇಕೆನಿಸಿದರೂ ಅದು ತಕ್ಕ ಸಂದರ್ಭವಲ್ಲ ಎಂದು ಒಳಬಾಗಿಲ ಕಡೆ ದೃಷ್ಟಿ ಹಾಯಿಸಿದಾಗ ಬಾಗಿಲನ್ನು ಹಿಡಿದುಕೊಂಡು ನಿಂತಿದ್ದ ಪಾರಿ ಹಾಗೆಯೇ ಒಳಸರಿದಿದ್ದಳು. ಗೌಡರಿಗೆ ಎಲ್ಲವೂ ಅರ್ಥವಾಗಿತ್ತು. ಮಗನ ಮಾತಿಗೆ ಜವಾಬು ಕೊಡದೆ ಚಾವಡಿಕಟ್ಟೆ ಹಾದಿ ಹಿಡಿದಿದ್ದರು.

ಸುಣಗಿಯ ನಾಗನ್‌ಗೌಡರಿಗೆ ನಾಕೆತ್ತಿನ ಕಮ್ತದ ವಿಶಾಲವಾದ ಗೌಡಕಿ ಹೊಲ ಒಂದು ತಲೆಮಾರಿನಿಂದ ಬಂದಿತ್ತು. ಮೂರ್‌ತಲಿ ನಿಂಗನೂ ನಾಗನ್‌ಗೌಡರು ಮೊದಲಿನಿಂದಲೂ ಗಳಸ್ಯಕಂಠಸ್ಯರಾಗಿದ್ದರಿಂದ ಗುಡ್ಡದ ಕಡೇಲಿರೋ ನಿಂಗನ ಮೇಲ್ಜಮೀನಿಗೆ ಹಳ್ಳದ ಕಡೆಯಿಂದ ಹೋಗುವ ದಾರಿ ದೂರವಾಗುತ್ತದೆಯೆಂದು ರಸ್ತೆಯಂಚಿನಿಂದ ಆರಂಭವಾಗುವ ತನ್ನ ಜಮೀನಿನಿಂದಲೇ ಚಕ್ಕಡಿ ಹಾದಿಯನ್ನು ಬಿಟ್ಟುಕೊಟ್ಟಿದ್ದ ನಾಗನ್‌ಗೌಡ. ಮೂರ್‌ತಲಿ ನಿಂಗ ತನ್ನ ಜಮೀನನ್ನು ನಾಗನ್‌ಗೌಡನ ಬಳಿ ಲಾವಣಿಗಾಗಿ ಬಿಟ್ಟು ಈಗಾಗಲೇ ಎಂಟು ವರ್ಷಗಳಾಗಿದ್ದವು. ಆ ಹೊತ್ತಿಗೆ ಸರಿಯಾಗಿ ದುಡಿಯಲು ಬಂದ ಮಗನನ್ನು ನೋಡಿ ಲೆಕ್ಕಾಚಾರ ಹಾಕಿ ಮಗನ ಬೆನ್ನು ತಟ್ಟಿದ್ದ ನಿಂಗ. ಲಾವಣಿಯ ಅವಧಿ ಇನ್ನೂ ಎರಡು ವರ್ಷವಿರುವಂತೆ ವ್ಯಾಜ್ಯ ತೆಗೆದು ತಮ್ಮ ಜಮೀನನ್ನು ಮಗ ಪಡೆದಿದ್ದನ್ನು ಕಂಡು ನಿಂಗನಿಗೆ ಕೋಡು ಮೂಡಿದಂತಾಗಿತ್ತು. ಕೇವಲ ಬಾಯಿ ಮಾತಿನಿಂದಲೇ ಪಂಚಾಯಿತಿ ನಡೆಸುತ್ತಿದ್ದ ನಾಗನ್‌ಗೌಡರ ಮಾತಿಗೆ ಬೆಲೆಯಿಲ್ಲದಂತಾಯಿತು. ಮೂರ್‌ತಲಿ ನಿಂಗ ಮಾಡಿದ್ದು ಸರಿಯಿಲ್ಲವೆಂದು ಹಿರಿಯರೆಲ್ಲರೂ ಹೇಳುತ್ತಿದ್ದರೆ ನಿಂಗನ ಮಗ ಹೊಲದಲ್ಲಿ ಪೂಜೆ ಮಾಡಿ ಕಮ್ತಾ ಆರಂಭಿಸಿದ್ದ.

ನಿನ್ನೆ ಮೊನ್ನೆ ಬೆಳೆದ ಹುಡುಗ ಹುರುಪಿನಿಂದ ತಾನು ಬಿಟ್ಟುಕೊಟ್ಟಿದ್ದ ಚಕ್ಕಡಿ ಹಾದಿಯಲ್ಲೇ ಹೋಗುತ್ತಿದ್ದುದನ್ನು ಕಂಡು ನಾಗನ್‌ಗೌಡರ ಹೆಡೆ ತುಳಿದಂತಾಗಿತ್ತು. ಎರಡು ದಿನದಿಂದ ಬಿಡದೆ ಬಿರಿಸುಯ್ಯುತ್ತಿದ್ದ ಮಳೆಯಲ್ಲಿ ತನ್ನ ಹೊಲದ ಫಸಲು ಏನಾಗಿದೆಯೊ ಏನೊ ಎಂಬುದನ್ನು ನೋಡಲು ನಿಂಗನ ಮಗ ಹೊಲದ ಕಡೆ ಚಕ್ಕಡಿ ತಿರುವಿದ್ದ. ಸರಾಗವಾಗಿ ಹರಿದುಹೋಗುತ್ತಿದ್ದ ಚಕ್ಕಡಿ ಸಾಗದೆ ನಿಂತಿತು. ಚಕ್ಕಡಿಯಿಂದಲೆ ನೋಡಿದಾಗ ಅಲ್ಲಿದ್ದ ಚಕ್ಕಡಿ ಹಾದಿ ಹೊಲದ ಬದುವಾಗಿತ್ತು. ನಾಗನ್‌ಗೌಡ ಸುಮಾರು ಆಳುಗಳನ್ನು ಬಿಟ್ಟು ಒಂದೇ ರಾತ್ರಿಯಲ್ಲಿ ಚಕ್ಕಡಿಯ ಹಾದಿಯನ್ನು ಕಡಿದು ಹೊಲದ ಬದುವನ್ನಾಗಿ ಮಾಡಿಸಿದ್ದ. ವಿಷಯ ತಿಳಿದ ಮೂರ್‌ತಲಿ ನಿಂಗ ಆರು ತಿಂಗಳಿಂದ ಪಟ್ಟ ಕಷ್ಟಕ್ಕೆ ದಕ್ಕಿದ ಫಲ ಅನ್ಯಾಯವಾಗುತ್ತಿದೆಯಲ್ಲ ಎಂದು ಗುಡಿಯಲ್ಲಿ ಪಂಚಾಯತಿ ಸೇರಿಸಿದ್ದ. ಸುಣಗಿಯ ಅನೇಕ ಹಿರಿಯರು ಇಬ್ಬರ ನಡುವಿದ್ದ ವೈಷಮ್ಯವನ್ನು ಒರೆ ಹಚ್ಚಿ ತಿದ್ದಿಹೇಳಿದರು. ಇಬ್ಬರೂ ಹಿರಿಯರ ಮಾತಿಗೆ ತಲೆಬಾಗಲಿಲ್ಲ. ಲಾವಣಿ ವಿಷಯದ ಸಂಬಂಧದಲ್ಲಿ ತನಗಾದ ಅನ್ಯಾಯವನ್ನು ಒದರುತ್ತಲೇ ಇದ್ದ ನಾಗನ್‌ಗೌಡ.

''ನೀವು ಹತ್ತೇ ವರ್ಷ ಲಾವಣಿ ಅಂತ ಹೇಳಿರಾಕೆ ಸಾಕ್ಷಿ ಏನೈತಿ ? ಪತ್ರ ಗಿತ್ರ ಇದ್ರ ನಾನೇ ಬಿಟ್‌ಕೊಡ್ತೀನಿ'' ಎಂದು ನಿಂಗನ ಮಗ ಜವಾಬು ಕೊಟ್ಟಾಗ ಅಲ್ಲಿರುವ ಹಿರೀಕರೆಲ್ಲಾ ಬಾಯಿ ಮಾತಿಗೆ ಬೆಲೆಯಿಲ್ಲದಾಯಿತಲ್ಲ ಎಂದು ಮನಸೋಇಚ್ಛೆ ತನ್ನ ಮಗನಿಗೆ ಬೈದು ತಮ್ಮ ತೆವಲನ್ನು ತೀರಿಸಿಕೊಳ್ಳುತ್ತಿರುವುದನ್ನು ಕಂಡ ಮೂರ್‌ತಲಿ ನಿಂಗನಿಗೆ ಅಂಗಾಲಿನ ಪಿತ್ತ ತಲೆ ತಟ್ಟಿತು.

''ಏಯ್ ಸೂ... ಮಕ್ಳ ರೊಕ್ಕ ಇರೋ ಕಡೇನೆ ಮಾತಾಡ್ತೀರಾ. ಇದನ್ನ ಇಲ್ಲೇ ಬಿಟ್ಟರೆ ನನಗೆ ನ್ಯಾಯ ಸಿಗಾಕಿಲ್ಲ. ಚಾವಡಿ ಕಟ್ಟೆಗೆ ಎಳಿತೀನಿ'' ಎಂದೊದರಿ ಗುಡಿಯಿಂದ ನಿಂಗ ಮಗನ ಸಮೇತ ಕೊಪ್ಪದಲ್ಲಿನ ಶ್ಯಾನುಭೋಗರ ಮನೆ ಹಾದಿ ಹಿಡಿದಿದ್ದ.

ಏಕಾಏಕಿ ಮೂರ್‌ತಲಿ ನಿಂಗನ ಈ ವರ್ತನೆಯನ್ನು ಕಂಡು ಕುಪಿತನಾಗಿ ಹೋಗಿದ್ದ ನಾಗನ್‌ಗೌಡ. ಚಾವಡಿ ಕಟ್ಟೆಯೆಂದರೆ ಎಲ್ಲರಿಗೂ ಒಂದು ರೀತಿಯ ನಡುಕ. ತಪ್ಪಿತಸ್ಥರಾರೂ ತಲೆಯೆತ್ತಿ ಪೀಠದ ಮೇಲೆ ಕುಳಿತಿದ್ದ ಮಲ್ಲಾರಿಗೌಡರನ್ನು ನೋಡುವ ಸಾಹಸ ಮಾಡುತ್ತಿರಲಿಲ್ಲ. ಮಲ್ಲಾರಿಗೌಡನೊಡನೆ ನೆಂಟಸ್ತನ ಬೆಳೆಸಿ ಒಂದೂವರೆ ವರ್ಷವೂ ಇಲ್ಲ. ಈಗ ಅವನೆದುರು ತಪ್ಪಿತಸ್ಥನಾಗಿ ನಿಲ್ಲಬೇಕೆಂದರೆ ತನ್ನ ಘನತೆ ಪ್ರತಿಷ್ಠೆ ಏನಾಗಬಹುದೆಂದು ಕಲ್ಪಿಸಿಕೊಂಡು ಒಮ್ಮೆಲೆ ಮೈಕೊಡವಿದ್ದ. ಆದರೂ ಒಂದು ಹುಚ್ಚು ಧೈರ್ಯ. ಆಸೆ. ತನ್ನ ಮಗಳು ಪಾರಿ ಅಲ್ಲೇ ಇರುವುದರಿಂದ ಮಲ್ಲಾರಿಗೌಡರಿಗೆ ಹೇಳಿಸಬಹುದಲ್ಲವೆಂದುಕೊಂಡು ಯೋಚಿಸುತ್ತಿದ್ದ. ಗುಡಿಯ ಕಟ್ಟೆ ಮೇಲೆ ಕುಳಿತಿದ್ದ ಮುದುಕ ಮಬ್ಬು ಬೆಳಕಿನಲ್ಲಿ ಇವನ ಪರಿಸ್ಥಿತಿಯನ್ನು ಗಮನಿಸಿ, ''ಒಂತಲಿ ಇರೋ ನೀನೇ ಇಷ್ಟು ವಿಚಾರ ಮಾಡ್ತಾ ಇದ್ರೆ, ಅವಗ ಮೂರ್‌ತಲಿ ಇನ್ನೆಷ್ಟು ವಿಚಾರ ಮಾಡಬ್ಯಾಡ. ಪಂಚಾಯತಿ ಕಾಗದದ್ ಪ್ರಕಾರ ದೊಡ್ಡ ಹಳ್ದ ಕಡೇಲಿಂದ ನೀನು ಅವತ್ತೇ ದಾರಿ ಬಿಡಬೇಕಿತ್ತು. ಅವ ಕೇಳ್ದ ಅಂತ ನೀನು ಊರ ಕಡೇಲಿಂದ ದಾರಿ ಬಿಟ್ಟೆ. ದಾರಿ ಬಿಟ್ಟ ಜಾಗದಾಗ ತೆಂಗಿನ ಮರಾನ ಉದ್ದೂಕು ಹಾಕಿಯಾ, ಈಗ ಅವ್ರ ಫಸಲು ಚಲೊ ಬಂದಾವು. ನೀನು ದಾರಿ ಕಡ್ದೀಯಾ. ಆ ನುಕ್‌ಸಾನಿನೂ ನೀನ ತುಂಬಿಕೊಡಬೇಕು. ಮತ್ತ ಫಸಲು ಬಂದಿರೊ ನಿನ್ನ ತೆಂಗಿನ ಮರಾನೆಲ್ಲಾ ಕಡ್ಸಿ ದಾರಿ ಮಾಡ್ ಕೊಡಾಕೇಬೇಕು. ಮಲ್ಲಾರಿ ಗೌಡ್ರು ಕೊಡೊ ತೀರ್ಮಾನಾನೂ ಇದ ಮತ್ತ'' ಚಾವಡಿ ಕಟ್ಟೆಯ ತೀರ್ಮಾನವನ್ನು ಸ್ಪಷ್ಟಪಡಿಸಿದ್ದ ಮುದುಕ. ಮನಸ್ಸು ಈ ಸತ್ಯವನ್ನು ಒಪ್ಪಿದರೂ ಮೇಲ್ನೋಟಕ್ಕೆ ಏನೇನೂ ಗೊತ್ತಿಲ್ಲದವನಂತೆ ನಾಟಕವಾಡಿ ಮೇಲೆದ್ದ ನಾಗನ್‌ಗೌಡ.

ಕೊಪ್ಪದ ಒಲೆಕಾರ ಚಾವಡಿಕಟ್ಟೆಯಲ್ಲಿ ನಾಗನ್‌ಗೌಡರ ಮತ್ತು ಮೂರ್‌ತಲಿ ನಿಂಗನ ನಡುವೆ ಪಂಚಾಯತಿ ನಡೆಯುವ ಕಾಲವನ್ನು ತಿಳಿಸುವ ಕೆಲಸ ಮುಗಿಸಿದ್ದ. ಮಲ್ಲಾರಿಗೌಡರು ತಮ್ಮ ಬೀಗರಿಗೆ ಯಾವ ರೀತಿಯಲ್ಲಿ ನ್ಯಾಯ ಕೊಡುತ್ತಾರೆಂಬುದೇ ಒಂದು ಕುತೂಹಲಕಾರಿಯಾದಂತಹ ವಿಷಯವಾಗಿ ಸುಣಗಿಯ ಹಿರಿಯರೆಲ್ಲರೂ ಚಾವಡಿಕಟ್ಟೆಗೆ ಮುಗಿಬಿದ್ದಿದ್ದರು. ನಾಗನ್‌ಗೌಡ ಮತ್ತು ಮೂರ್‌ತಲಿ ನಿಂಗ ನ್ಯಾಯ ಪೀಠದ ಮುಂದೆ ಉಪಸ್ಥಿತರಿದ್ದರು. ಚಾವಡಿ ಕಟ್ಟೆಯಲ್ಲಿ ಕುಳಿತಿದ್ದ ಮಲ್ಲಾರಿಗೌಡರೆದುರು ವಿಷಯ ಪ್ರಸ್ತಾಪವಾಯಿತು. ಮಲ್ಲಾರಿಗೌಡರು ನಾಗನ್‌ಗೌಡ ಮತ್ತು ಮೂರ್‌ತಲಿ ನಿಂಗನ ಹೇಳಿಕೆಯನ್ನು ಕೇಳಿ ತಮ್ಮ ನಿರ್ಣಯವನ್ನು ಮಂಡಿಸುತ್ತಿರುವಾಗ



ಮಬ್ಬು ಬೆಳಕಿನಲ್ಲಿ ಮುದುಕ ಹೇಳಿದ ಮಾತುಗಳೆಲ್ಲಾ ನಾಗನ್‌ಗೌಡನ ನೆನಪಿಗೆ ಬಂದಿದ್ದವು. ಹಿಂದೆ ಗೌಡಕಿ ಹೊಲವನ್ನು ಕೊಡುವಾಗ ಪತ್ರದಲ್ಲಿದ್ದಂತೆ ದೊಡ್ಡಳ್ಳದ ಕಡೆ ಚಕ್ಕಡಿ ದಾರಿ ಬಿಡಬೇಕಿತ್ತು. ಆದರೆ ಹಾಗೆ ಮಾಡದೆ ಮೂರ್‌ತಲೆ ನಿಂಗನ ಕೋರಿಕೆಯ ಮೇರೆಗೆ ಊರ ಕಡೆಯಿಂದಲೇ ಹಾದಿಯನ್ನು ಬಿಟ್ಟುಕೊಟ್ಟಿದ್ದ. ಮಲ್ಲಾರಿಗೌಡರ ಪ್ರಕಾರ ಇಂದಲ್ಲ ನಾಳೆ ಇದು ಮತ್ತೆ ಪಂಚಾಯತಿ ಕಟ್ಟೆಗೆ ಹತ್ತುವ ಈ ಗೌಡಕಿ ಹೊಲದ ವಿಷಯವನ್ನು ಇಷ್ಟಕ್ಕೆ ಮುಗಿಸಬೇಕೆಂದುಕೊಂಡು ಪತ್ರದ ಪ್ರಕಾರ ದಾರಿ ಇರಬೇಕಾಗಿದ್ದ ಜಾಗದಲ್ಲಿ ಹಾಕಿರುವ ಸಾಲು ತೆಂಗಿನ ಮರಗಳನ್ನು ಕಡಿಸಿ ಚಕ್ಕಡಿ ಹಾದಿ ಮಾಡಿಸಬೇಕೆಂದು ಮತ್ತು ಸಕಾಲದಲ್ಲಿ ಆಗದಿದ್ದರೆ ಮೂರ್‌ತಲಿ ನಿಂಗನ ಫಸಲಿನಲ್ಲಿ ಅವನಿಗಾಗುವ ನಷ್ಟವನ್ನು ಭರಿಸಿ ಕೊಡಬೇಕೆಂದು ನಾಗನ್‌ಗೌಡನಿಗೆ ತಿಳಿಹೇಳಿ ಪಂಚಾಯತಿಯನ್ನು ಮುಗಿಸಿದ್ದರು.

ಮೂರ್‌ತಲಿ ನಿಂಗನ ಮುಖದಲ್ಲಿ ಗೆಲುವು ಕಂಡಿತು. ಮಗಳಿಗೆ ಹೇಳಿದ್ದು ಏನೂ ಪ್ರಯೋಜನವಿಲ್ಲವೆಂದು ನಾಗನ್‌ಗೌಡನಿಗೆ ಕೊರಗತ್ತಿತ್ತು. ಕೊಪ್ಪದ ಪೂರ ಸುದ್ದಿಯನ್ನು ಹಬ್ಬಿಸುತ್ತಾ ಹೂಸ್‌ಬಸಯ್ಯ ಬಂದಿದ್ದ. ಪಾರಿಯ ಗಂಡ ನಂಜ ಹೂಸ್‌ಬಸಯ್ಯನನ್ನು ಕರೆದು ವಿಚಾರವನ್ನು ಕೇಳುವಾಗ ಬಾಗಿಲಿಗೆ ಬಂದಿದ್ದ ಪಾರಿಗೆ ಫಲಿತಾಂಶ ತಿಳಿಯಿತು. ತನ್ನ ಮನೆತನಕ್ಕಾದ ಅವಮಾನ ಸಹಿಸಲಾಗಲಿಲ್ಲ. ಪಡಸಾಲೆಯಲ್ಲಿ ಗೋಣಿತಾಟಿನ ಮೇಲೆ ಪಾರಿ ಬಿದ್ದುಕೊಂಡಿರುವುದನ್ನು ಹೊರಗಿನ ಕಟ್ಟೆಯಲ್ಲಿ ಕುಳಿತಿದ್ದ ನಂಜ ನೋಡಿ ಹತಾಶನಾಗಿಹೋಗಿದ್ದ.




ಪಂಚಾಯತಿ ಮುಗಿದು ಗಂಟೆ ಕಳೆದಿರಬಹುದು. ಮಲ್ಲಾರಿಗೌಡರು ಬರುವ ಸದ್ದು ನಂಜನನ್ನು ಎಚ್ಚರಿಸಿತು. ನಂಜನ ಎದುರಿನ ಕಟ್ಟೆಗೆ ಕುಳಿತ ಮಲ್ಲಾರಿಗೌಡರಿಗೆ ತಾವು ಚಾವಡಿಕಟ್ಟೆಗೆ ಹೋಗುವಾಗ ಮಗ ಹೇಳಿದ್ದನ್ನು ನೆನೆಸಿಕೊಂಡಾಗ ಮುಖ ಕೆಂಪೇರಿತು.

ಕೊಪ್ಪದಲ್ಲಿ ತಮಗೆ ಕೊಟ್ಟಿರುವ ನ್ಯಾಯಪೀಠದ ಸ್ಥಾನವನ್ನು ಹೇಗೆ ಉಳಿಸಿಕೊಳ್ಳಬೇಕೆಂದು ಸ್ವಲ್ಪ ಗಡುಸಾಗಿಯೆ ಮಗನೊಡನೆ ಚರ್ಚಿಸಲು ಮುಂದಾದ. ಈ ಮಾತುಗಳಿಗೆ ಮಗ ಸೊಪ್ಪು ಹಾಕದೆ ಪ್ರತಿವಾದಿಸಿದ. ಇಬ್ಬರ ನಡುವೆ ಮಾತಿನ ಬಲಾಬಲ ಬೆಳೆಯಿತು. ಮಲ್ಲಾರಿಗೌಡರ ಮನೆ ಮುಂದೆ ಬರಲು ಹೆದರಿದ ಜನ ಮರೆಯಾಗಿ ನಿಂತು ನೋಡಲಾರಂಭಿಸಿದರು.

''ನ್ಯಾಯ ನಮ್ ಕಡೀಕ್ ಆದ್ರೆ ಈ ಮನ್ಯಾಗ ದೀಪ ಹಚ್ತೆನಿ. ಇಲ್ಲ ಅಂತಂದ್ರ ನೀವ್ ಈ ಮನ್ಯಾಗ ಭಾಗ ಕೇಳ್ಬೇಕು. ನಾನು ಗೌಡಕಿ ಮನೆತನದಿಂದ ಬಂದದ್ದು.''

ಪಾರಿಯ ದೃಢ ನಿರ್ಧಾರದ ಈ ಮಾತುಗಳು ನಂಜನ ಮನಸ್ಸಿನಲ್ಲಿ ಬಲವಾಗಿ ನಾಟಿದ್ದವು. ಹಾಗಾಗಿ ತಂದೆಯ ಎದುರು ಎಂದಿಗೂ ನಿಂತು ಮಾತನಾಡದಿದ್ದವನು ಇಂದು ತನ್ನ ಒಂದು ನಿರ್ಧಾರವಾದ ಭಾಗದ ವಿಷಯವನ್ನು ಪ್ರಸ್ತಾಪ ಮಾಡಿ ಮನೆಯಿಂದ ಕಾಲುಕಿತ್ತ.

ಮಲ್ಲಾರಿಗೌಡ ಹೊಸ್ತಿಲೊಳಗೆ ಕಾಲಿಡಲಿಲ್ಲ. ಒಳಗೋದರೆ ಇಷ್ಟಕ್ಕೆಲ್ಲಾ ಕಾರಣಳಾದ ಪಾರಿಯ ದರ್ಶನವಾದೀತೆಂದು ಮನಸ್ಸೊಪ್ಪದ ಚೀಕನಿಂದ ಬಟ್ಟಲು ಹಾಲನ್ನು ತೆಗೆದುಕೊಂಡು ಕಣದ ಕಡೆ ಹೊರಟ. ಎಂದಿನಂತೆ ಬೇವಿನ ಮರದ ನೆರಳಲ್ಲಿ ವಿಶಾಲವಾಗಿ ಬೆಳೆದಿದ್ದ ಹುತ್ತದ ಬಳಿ ಬಟ್ಟಲು ಹಾಲನ್ನು ಇಟ್ಟು, ಕಣದಲ್ಲಿ ಒಂದು ಪಕ್ಕಕ್ಕಿದ್ದ ಕಟ್ಟಿಗಿ ಮಂಚದ ಮೇಲೆ ತನ್ನ ದೇಹವನ್ನು ಚಾಚಿದ್ದ. ಹುತ್ತದಲ್ಲಿದ್ದ ಕರೇಕಾಳಿಂಗ ಬಟ್ಟಲಿನಲ್ಲಿನ ಹಾಲನ್ನು ಕುಡಿದು ಹುತ್ತಕ್ಕೆ ಮರಳುತ್ತಿರುವ ದೃಶ್ಯವನ್ನು ಕಣ್ಣಾರೆ ನಿತ್ಯವೂ ಕಾಣುತ್ತಿದ್ದ ಗೌಡನಿಗೆ ಇಂದೇಕೊ ಅದು ಕೂಡ ಬೇಡವೆನಿಸಿತ್ತು. ತಮಗೆ ತಮ್ಮ ಪಿತ್ರಾರ್ಜಿತವಾಗಿ ಬಂದಿದ್ದ ಈ ನ್ಯಾಯಪೀಠದಲ್ಲಿ ಕುಳಿತು ಅನ್ಯಾಯದ ಪರ ಎಂದೂ ಮಾತನಾಡಿರಲಿಲ್ಲ. ಮಾತನಾಡಿದ್ದರೆ ಅದು ನ್ಯಾಯಯುತವಾದ ವಾದ. ನ್ಯಾಯದ ಪರ ಮಾತ್ರ. ವ್ಯಾಜ್ಯಕ್ಕೆ ಬಿದ್ದಿದ್ದ ಒಂದು ಚಕ್ಕಡಿ ಹಾದಿ ವಿಷಯವನ್ನು ನ್ಯಾಯಯುತವಾಗಿ ಪರಿಹರಿಸಿದ್ದಕ್ಕೆ ತನ್ನ ಮನೆ ಎರಡು ಪಾಲಾಗುತ್ತಿದೆಯಲ್ಲ ಎಂಬ ಸಂಕಟ ತುಂಬಿಬಂದಾಗ ಪಟ್ಟಣದಲ್ಲಿ ಓದುತ್ತಿದ್ದ ಕಿರಿಯ ಮಗನು ನೆನಪಿಗೆ ಬಂದಿದ್ದ. ವಿಶಾಲವಾದ ಮುಗಿಲನ್ನು ನೋಡುತ್ತಾ ಮೈಚಾಚಿದರೂ ನಿದ್ದೆ ಬಹುದೂರ ಉಳಿದಿತ್ತು.

ಕಟ್ಟೆ ಬಿಟ್ಟರೆ ಕಣ, ಕಣ ಬಿಟ್ಟರೆ ಕಟ್ಟೆ ಹಿಡಿಯುತ್ತಿದ್ದ ಮಲ್ಲಾರಿಗೌಡರ ಸುದ್ದಿ ಕೊಪ್ಪದ ತುಂಬೆಲ್ಲಾ ಬಿತ್ತಿಹೋಗಿತ್ತು. ಒಂಬತ್ತಂಕಣದ ಮನೆ ಮುಂದೆ ಹಸೆಯರಳಿ ಎರಡು ದಿನಗಳಾಗಿ ಸಂಭ್ರಮದ ವಾತಾವರಣಕ್ಕೆ ಬರ ಬಡಿದಿತ್ತು. ಹಿರಿಮಗ ನಂಜ ತನ್ನ ನಿರ್ಧಾರವನ್ನು ತಿಳಿಸಿಹೋದವನು ಹೊಸ್ತಿಲನ್ನು ತುಳಿಯಲಿಲ್ಲ. ಹೊರಗಿನ ಕಟ್ಟೆ ಮೇಲೆ ಗೌಡ ಮೈ ಮುದುಡಿ ಕುಳಿತಿದ್ದ. ಗೌಡನ ತಲೆ ಮೇಲೆ ಮೆರೆಯುತ್ತಿದ್ದ ಹದಿನೆಂಟು ಮೊಳದ ರುಮಾಲು ಕಟ್ಟೆ ಕಟ್ಟಿ ಬಿದ್ದಿತ್ತು. ಚೀಕ ಗೌಡನ ದನದ ಕೊಟ್ಟಿಗೆಯಲ್ಲಿ ದನಗಳನ್ನು ತೊಳೆದು ತಂದು ಹೊತ್ತಿಳಿಯುವುದಕ್ಕೆ ಮೊದಲೆ ಕಟ್ಟುತ್ತಿದ್ದಾಗ ಮಲ್ಲಾರಿಗೌಡ ಬಟ್ಟಲು ಹಾಲನ್ನು ಹಿಂಡಿಕೊಂಡು ಕಣದ ಕಡೆ ನಡೆದಿದ್ದ. ಅವನನ್ನೇ ಹಿಂಬಾಲಿಸಿದ ಚೀಕ ಹಿಂದಿರುಗಿ,

''ಅಕ್ಕಯ್ಯ... ಅಕ್ಕಯ್ಯ...'' ಎಂದು ಕೂಗುತ್ತಾ ಬಂದದ್ದಕ್ಕೆ ಎರಡು ದಿನಗಳಿಂದ ಮೂಲೆ ಹಿಡಿದು ಮಲಗಿದ್ದ ಪಾರಿ ಎದ್ದು ಆ ಹುಡುಗನನ್ನೇ ಕೆಕ್ಕರಿಸಿ ಏನೆಂದು ಕತ್ತಾಡಿಸಿಯೇ ಕೇಳಿದ್ದಳು. ಗೌಡರು ಕರೇ ಕಾಳಿಂಗ ಹಿಡಿದು ಕೊಪ್ಪದ ಓಣಿಯೊಳಗೆಲ್ಲಾ ಮನಸೋಇಚ್ಛೆ ನುಗ್ಗುತ್ತಿದ್ದುದನ್ನು ತಿಳಿಸಿದ. ಗಾಬರಿಯಿಂದೆದ್ದು ಕಣದ ಕಡೆ ಚೀಕನೊಡನೆ ಹೋಗಿ ನೋಡಿದ್ದಳು. ಹಾವಿಗಿಟ್ಟಿದ್ದ ಹಾಲಿನ ಬಟ್ಟಲು ಅಲ್ಲೇ ಇತ್ತು. ಹಾವಿಗೆ ಹಾಲನ್ನು ಕುಡಿಯಲು ಬಿಡದೆ ಗೌಡ ಹುತ್ತದಿಂದ ಹೊರಬರುತ್ತಿದ್ದ ಕರೇ ಕಾಳಿಂಗನನ್ನು ಎಳೆದುಕೊಂಡು ಓಡಿಹೋಗಿದ್ದು ಸ್ಪಷ್ಟವಾಗಿತ್ತು. ರೊಡ್ಡನಿಗೆ ಸುದ್ದಿ ಮುಟ್ಟಿಸಲು ಹೇಳಿ ತಾನು ಕಟ್ಟೆಗೆ ಕುಳಿತಳು.

ರೊಡ್ಡ ಓಣಿಯಲ್ಲಿ ಓಡುತ್ತಿದ್ದ. ಮನೆ ಪರಿಸ್ಥಿತಿ ಸಂಪೂರ್ಣವಾಗಿ ಅರ್ಥವಾಗಿತ್ತು ರೊಡ್ಡನಿಗೆ. ಅತ್ತ ಹೋದ ಇತ್ತ ಹೋದ ಎಂದು ಓಣಿಯಲ್ಲಿದ್ದೋರೆಲ್ಲ ಚೀರಿ ಹೇಳುತ್ತಿದ್ದರು. ರೊಡ್ಡ ಅವರು ತೋರಿಸಿದ ದಾರಿಯಿಡಿದು ಹೋಗುತ್ತಿದ್ದಂತೆಯೆ ಚಾವಡಿ ಕಟ್ಟೆ ಕಡೆಯಿಂದ ಗೌಡ ಕೇಕೆ ಹಾಕುವ ಸದ್ದು ಕೇಳಿಸಿದಾಗ ರೊಡ್ಡನ ಮನಸ್ಸು ಸಮಾಧಾನಗೊಂಡರೂ ನೋಡುವ ತವಕದಲ್ಲಿ ಚಾವಡಿ ಕಟ್ಟೆಯವರೆಗೂ ಬಂದಿದ್ದ. ಅಷ್ಟರಲ್ಲಿ ಮಲ್ಲಾರಿಗೌಡ ಬಲಗೈಯಲ್ಲಿ ಕರೇ ಕಾಳಿಂಗನನ್ನು ಹೊಡೆದು ಕೆಣಕಿದ್ದ. ಕಾಳಿಂಗ ರೋಷದಿಂದ ಹೆಡೆಯೆತ್ತಿ ಹೊಡೆದಂತೆಲ್ಲಾ ತನ್ನ ಬಲಗೈಯಲ್ಲಿನ ಉಬ್ಬಿದ ನರಗಳನ್ನು ಕೊಡುತ್ತಿದ್ದ. ರೊಡ್ಡ ಹತ್ತಿರ ಬಂದಂತೆಲ್ಲಾ ಕೇಕೆ ಹಾಕುತ್ತಾ ಗುಡಿ ಪಕ್ಕದ ಹಾದಿಯಲ್ಲಿ ಹೊಳೆಯ ಕಡೆ ಓಡಲಾರಂಭಿಸಿದ. ವರುಷ ಪೂರ್ತಿ ವರುಣನ ಕೃಪೆ ಚೆನ್ನಾಗಿ ಆಗಿದ್ದರಿಂದ ಹೊಳೆ ತುಂಬಿ ಹರಿಯುತ್ತಿತ್ತು. ಎಡಗೈಗೆ ಬಲವಾಗಿ ಸುತ್ತಿಕೊಂಡಿದ್ದ ಕರೇ ಕಾಳಿಂಗನನ್ನು ಬಿಡಿಸಿ ಬೀಸಿ ಹೊಳೆ ಕಂಟಿಕೊಳಗೆ ಒಗೆದಿದ್ದ. ಕಂಟಿಯೊಳಗೆ ಬಿದ್ದ ಹಾವು ಹೊಡೆಯಲು ಮುಂದಾದ ಜನಕ್ಕೆ ಎಷ್ಟು ಹುಡುಕಿದರೂ ಸಿಗದೇ ಹೋಯಿತು. ಗೌಡನ ಬಲಗೈಯಿಂದ ಕಾಳಿಂಗನ ವಿಷ ಮೈಪೂರ ಪಸರಿಸಿತು. ರೊಡ್ಡ ಗೌಡನ ಬಳಿ ಬಂದು ಎಷ್ಟು ಮಾತನಾಡಿಸಿದರೂ ಒಂದೂ ಮಾತನಾಡದೆ ಕುಸಿದು ಬಿದ್ದ. ಕೊಪ್ಪದ ಪ್ರತಿ ಹೊಲ ಮನೆಯಿಂದ ಕಿತ್ತು ಬಂದಿದ್ದ ಜನ ಗೌಡನ ಸುತ್ತಲೂ ತುಂಬಿತ್ತು. ರೊಡ್ಡನ ಸಮೇತ ನಾಕಾರು ಜನ ಸೇರಿ ಪಕ್ಕದಳ್ಳಿಯ ದವಾಖಾನೆಗೆ ಕೊಂಡೊಯ್ಯಲು ಮುಂದಾದಾಗ ಮಲ್ಲಾರಿ ಗೌಡ ಪ್ರತಿಭಟಿಸಿದ್ದ. ಮುಖವೆಲ್ಲ ಕಪ್ಪಿಡಲಾರಂಭಿಸಿತು. ಬಾಯೊಣಗಿ ನಾಲಗೆ ಎಳೆಯಲು ಚಡಪಡಿಸಲಾರಂಭಿಸಿದ. ಅರ್ಧ ಗಂಟೆ ಕಳೆದಿರಬಹುದು. ಸಂಜೆ ಪೂರ್ಣ ಇಳಿದು ಕತ್ತಲಾಗುತ್ತಿದ್ದಂತೆಲ್ಲಾ ಮನೆಗಳಲ್ಲಿ ಬುಡ್ಡಿ ದೀಪ ಬೆಳಗಲಾರಂಭಿಸಿದವು. ಮಲ್ಲಾರಿಗೌಡ ಹೆಣವಾಗಿದ್ದ. ಆ ಹೆಣದ ಮುಂದೆ ಮಗನ ಬದಲಾಗಿ ಮನೆಯಾಳು ರೋದಿಸುತ್ತಿದ್ದ. ದೀಪ ಬೆಳಗಬೇಕಾಗಿದ್ದ ಪಾರಿ ಕಟ್ಟೆ ಮೇಲೆ ಚಾ ಕುಡಿದ ಬಟ್ಟಲನ್ನು ಸರಿಸಿ ತಲೆಗೆ ಕೈ ಹಚ್ಚಿ ಕುಳಿತಿದ್ದಳು. ಚೀಕ ಹೊಳೆ ಕಡೆಯಿಂದ ಪಾರಿಗೆ ವಿಷಯ ತಿಳಿಸಲು ಓಡಿಬರುತ್ತಿದ್ದ.

ಪಿ. ಅಶೋಕ್ ಡಿಸಲೆ
ನಂ. ೫೮, 'ರಾಮಲಿಂಗೇಶ್ವರ ಕೃಪ', ೮ನೇ ಮುಖ್ಯರಸ್ತೆ, ೩ನೇ ಬ್ಲಾಕ್, ವೆಂಕಟೇಶ್ವರ ಲೇಔಟ್
ಆದರ್ಶನಗರ, ಅರಿಶಿನಕುಂಟೆ ಅಂಚೆ, ನೆಲಮಂಗಲ ತಾಲ್ಲೂಕು, ಬೆಂಗಳೂರು - ೫೬೨ ೧೨೩

# ದಲಿತ ಸಾಹಿತಿ

# ಕುಮಾರ ಕಕ್ಕಯ್ಯ ಪೋಳ

ಬುದ್ಧ, ಬಸವ, ಅಂಬೇಡ್ಕರ್ ಅವರ ಚಿಂತನೆಗಳಲ್ಲಿ ಅಪಾರ ಕಾಳಜಿ ಇಟ್ಟುಕೊಂಡು ಆ ಹಿನ್ನೆಲೆಯಲ್ಲಿ ದುಡಿದ ವಿಚಾರವಾದಿ ಪೋಳ ಅವರು ವೀರಶೈವರಾದರೂ ತಕ್ಕಮಟ್ಟಿನ ಗೌರವಗಳು ದೊರೆಯದೆಹೋಯಿತು. ಅಸ್ಪೃಶ್ಯರಾಗಿಯೇ ಉಳಿಯಬೇಕಾಯಿತು. ಕನ್ನಡ ಸಾಹಿತ್ಯದ ಕಥೆ, ಕಾವ್ಯ, ವಚನ, ಕಾದಂಬರಿ, ವಿಚಾರ ಸಾಹಿತ್ಯದಲ್ಲಿ ಕೃಷಿಗೈದ ಪೋಳ ಅವರಿಗೆ ಸಿಕ್ಕ ಪ್ರಚಾರ ಬಹಳ ಕಡಿಮೆ. ಪೋಳ ಅವರನ್ನು ತೀರ ಹತ್ತಿರದಿಂದ ಕಂಡು ಅವರೊಂದಿಗಿನ ನನ್ನ ನಾಲ್ಕಾರು ವರ್ಷಗಳ ಒಡನಾಟದಿಂದಾಗಿ ನನಗೆ ಅವರಲ್ಲಿ ಹೆಚ್ಚಿನ ಗೌರವ; ಸಹಜ ಸರಳ ಹಾಗೂ ವಿಚಾರದಲ್ಲಿ ನಿಷ್ಠುರವಾದಿಗಳು. ಜಾತಿವ್ಯವಸ್ಥೆ, ಮೌಢ್ಯತೆ ಜೊತೆಗೆ ಎಂದೂ ರಾಜಿ ಮಾಡಿಕೊಂಡವರಲ್ಲ, ಬರಹದಂತೆ ಬದುಕಿದವರು, ಸಾಯುವತನಕ ಬಸವ ಪಥದಲ್ಲೇ ನಡೆದವರು. ಜೀವನದ ಕೊನೆಯ ಕ್ಷಣದಲ್ಲಿ ಪೋಳ ಅವರು ಬಸವನ ಮನೆಗೆ ಹೋಗುವೆ, ಬಸವನ ಮನೆಯಲ್ಲಿ ಎಲ್ಲರೂ ಹೊಲಸು ತುಂಬಿಸಿದ್ದಾರೆ. ಅದನ್ನು ಹಸನುಗೊಳಿಸಲು ಹೋಗಬೇಕು ಎಂದು ಮಕ್ಕಳೆದುರಿಗೆ ಕನವರಿಸಿ ೧೫-೦೨-೧೯೯೬ರಂದು ನಿಧನರಾದರು.

**ಡಾ|| ಎಚ್. ಟಿ. ಪೋತೆ**

ಎರಡು ಸಾವಿರ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯಕ್ಕೆ ಮಾನವೀಯ ನೆಲೆಯೊದಗಿಸಿದ ಬರಹ ಬಹಳ ಕಡಿಮೆ. ಅಂತಹದರಲ್ಲಿ ಶರಣ ದಾಸರಲ್ಲದೆ ಆಧುನಿಕ ಸಂದರ್ಭದ ದಲಿತ ಬಂಡಾಯದವರು ಮನು ಸಂಸ್ಕೃತಿಯನ್ನು ವಿರೋಧಿಸಿ ಮನುಷ್ಯರ ಪರ ನಿಂತ ಸ್ಥಿತಿ ಅನನ್ಯ. ಎಪ್ಪತ್ತರ ದಶಕದ ಸಂದರ್ಭದಲ್ಲಿ ಮಾನವೀಯ ಮೌಲ್ಯಗಳ ಉಳುವಿಗಾಗಿ ದುಡಿದವರನ್ನು ನೋಡುತ್ತಾ ಅವರ ಬರಹವನ್ನು ಓದುವುದೇ ಒಂದು ರೋಮಾಂಚನ. ಆ ಕಾಲ ಸಂದರ್ಭದ ಸಮಾಜೋಧಾರ್ಮಿಕ ಸ್ಥಿತಿಯು ಶೋಷಿತರು ಮೈಕೊಡವಿಕೊಂಡು ಎದ್ದುನಿಂತ ಕಾಲ. ದನಿ ಕಳೆದುಕೊಂಡವರು, ಅವಮಾನಿತರು, ಮಹಿಳೆಯರು ಸ್ವತಃ ಪ್ರತಿಭಟಿಸಿದ ಕಾಲ. ಆ ಕಾಲದ ಪ್ರತಿಭಟನೆಗೆ, ನ್ಯಾಯದ ಕೂಗಿಗೆ ಸ್ಫೂರ್ತಿಯಾಗಿ ನಿಂತ, ಹನ್ನೆರಡನೆಯ ಶತಮಾನದ ಬಸವಾದಿ ಶರಣರ ಚಿಂತನೆಗಳು ಪ್ರೇರಕ ಶಕ್ತಿಯಾದರೆ, ಕಾರ್ಲ್ ಮಾರ್ಕ್ಸ್, ಅಂಬೇಡ್ಕರ್, ಲೋಹಿಯಾ, ಫುಲೆ, ಪೆರಿಯಾರ್ ಈ ಮುಂತಾದವರ ವಾದಗಳು ಈ ಸಂಚಲನೆಗೆ ಜೀವ ದ್ರವ್ಯವಾದುವು. ಆ



ನೆಲೆಯಿಂದಲೇ ಅನೇಕ ಚಿಂತಕರನ್ನು ನಾಡು ಪಡೆದಿದೆ.

ಭಕ್ತಿಪಂಥಗಳು ವಿಶೇಷವಾಗಿ ಯಶಸ್ವಿಯಾದದ್ದು ಕನ್ನಡದ ನೆಲದಲ್ಲಿ ಎನ್ನುವುದು ಗಮನಾರ್ಹ. ಕನ್ನಡ ನಾಡಿನ ಜಿಲ್ಲೆಗಳು ಚಿಂತಕರನ್ನು, ಸಾಹಿತಿಗಳನ್ನು, ವಿಚಾರವಾದಿಗಳನ್ನು ಸಮರ್ಪಿಸುವುದರ ಮೂಲಕ ತಮ್ಮದೇ ಆದ ವೈಶಿಷ್ಟ್ಯವನ್ನು ಮೆರೆದಿವೆ. ಈ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ವಿಶ್ವ ಪ್ರಸಿದ್ಧಿಯ 'ಗೋಳಗುಮ್ಮಟ' ಬಿಜಾಪುರದಲ್ಲಿದೆ. ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಭೀಮಾ ಹಾಗೂ ದೋಣಿ ಹೀಗೆ ಐದು ನದಿಗಳನ್ನು ಹೊಂದಿರುವುದನ್ನು ತಿಳಿದವರೆಲ್ಲರಿಂದ ಕರ್ನಾಟಕದ ಪಂಜಾಬ್ ಎಂದು ಕರೆಯಿಸಿಕೊಂಡಿದೆ. ಆದಿಲ್ ಶಾಹಿ ಔರಂಗಜೇಬ ಅಲ್ಲದೆ ಮನುವಾದಿಗಳಾದ ಪೇಶ್ವೆಗಳ ಕೈಯಲ್ಲಿ ಸಿಕ್ಕು ಹೆಚ್ಚು ತತ್ತರಿಸಿಹೋದ ಜಿಲ್ಲೆ. ಹಾಗೆಯೇ ಬಿಜಾಪುರ ಜಿಲ್ಲೆ ಪೌರಾಣಿಕ, ಐತಿಹಾಸಿಕ ಖ್ಯಾತಿಯನ್ನೂ ಹೊಂದಿದೆ.

ಇಂಡಿ ತಾಲ್ಲೂಕಿನ ಸಾಲೋಟಗಿಯಲ್ಲಿ (ಪಾವಟ್ಟಿಗೆ) ಎಂಟನೆಯ ಶತಮಾನದಷ್ಟು ಹಿಂದೆಯೆ ವಿದ್ಯಾರ್ಥಿಗಳು ವಾಸವಾಗಿರುವಂತಹ ಒಂದು ಬೃಹತ್ ಮಹಾ ವಿದ್ಯಾಲಯವನ್ನು ರಾಷ್ಟ್ರಕೂಟರ ಮಂತ್ರಿಯೊಬ್ಬನು ಕಟ್ಟಿಸಿದ್ದನೆನ್ನುವುದು ಐತಿಹಾಸಿಕ ಸತ್ಯಸಂಗತಿ. ಬಿ.ಎಂ.ಶ್ರೀ.ಯವರು ಫ. ಗು. ಹಳಕಟ್ಟಿಯವರನ್ನು ಅವರೊಂದು ''ವಚನ ಗುಮ್ಮಟ'' ಎಂದು ಕರೆದು ಗೌರವಿಸಿದ್ದಾರೆ... ''ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ'' ಎಂದು ಹೇಳಿ ಉಚ್ಚಕುಲದವರ ಬಡಿವಾರಕ್ಕೆ ತಕ್ಕ ಉತ್ತರ ನೀಡಿ ವಿಶ್ವಪಥವನ್ನರುಹಿದ ಬಸವಣ್ಣನ ಜನ್ಮಸ್ಥಳ ಬಿಜಾಪುರ. ಮೋಹರೆ ಹನುಮಂತರಾಯರು, ಹರ್ಡೇಕರ ಮಂಜಪ್ಪನವರು, ಕಂಠಿಯವರು, ತತ್ವಜ್ಞಾನಿ ಗುರುದೇವ ರಾನಡೆಯವರು, ಬಿ. ಡಿ. ಜತ್ತಿಯವರು, ಬಂಥನಾಳ ಶಿವಯೋಗಿಗಳು, ನೇತ್ರದಾನಿ ಮೋದಿಯವರು ಕೂಡ ಇಲ್ಲಿಯವರೆ. (ಪಾಟೀಲ ಪುಟ್ಟಪ್ಪ: ಕನ್ನಡನುಡಿ, ಪುಸ್ತಕದ ಬೆಳೆದ ಬೆಳೆಯುವ ಜಲ್ಲೆ ಲೇಖನದ ವಿವರದ ಸಹಾಯ ಪಡೆಯಲಾಗಿದೆ.) ಇದಲ್ಲದೆ ಕಲೆ, ಸಾಹಿತ್ಯ, ಸಂಸ್ಕೃತಿ, ಭಾಷೆ ದೃಷ್ಟಿಯಿಂದ ಕನ್ನಡಿಗರ ಗಂಡುಮೆಟ್ಟಿನ ನೆಲವೆಂದೇ ಖ್ಯಾತಿ ಪಡೆದ ಜಿಲ್ಲೆ ಇದಾಗಿದೆ.

ಕನ್ನಡ ಸಾಹಿತ್ಯದ ಆಧುನಿಕ ಸಂದರ್ಭದ ನವೋದಯ ಪ್ರಮುಖರಾದ ಮಧುರಚೆನ್ನರು ಹಾಗೂ ಅವರ ಗೆಳೆಯರ ಬಳಗದವರಾದ ಪಿ. ಧೂಲಾ ಸಾಹೇಬ, ರೇವಪ್ಪ ಕಾಪಸೆ, ಸಿಂಪಿ ಲಿಂಗಣ್ಣ ಈ ಮುಂತಾದವರು ಮಾಡಿದ ಸಾಹಿತ್ಯಕ ಸಾಧನೆ ಅಪಾರವಾದುದು. ಹಲಸಂಗಿ ಗೆಳೆಯರು ಸಂಗ್ರಹಿಸಿದ 'ಗರತಿಯರ ಹಾಡು' ತ್ರಿಪದಿ ಹಾಡಿನ ಸಂಗ್ರಹವು ಈ ಜಿಲ್ಲೆಯಿಂದಲೇ ಹೊರ ಬಂದದ್ದು. ಹೀಗೆ ಬಿಜಾಪುರ ಜಿಲ್ಲೆಯ ಸಾಧನೆಗಳ ಶ್ರೇಷ್ಠತೆಯ ಪಟ್ಟಿ ಮಾಡುತ್ತಾ ಹೋಗುವ ಸಂದರ್ಭದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಅದರಲ್ಲೂ ವೈಚಾರಿಕ ಕ್ಷೇತ್ರ, ಆಧುನಿಕ ವಚನಗಳಲ್ಲಿ ಹೆಸರು ಮಾಡಿದ ಮೊದಲ ತಲೆಮಾರಿನ ದಲಿತ ಲೇಖಕ ಕುಮಾರ ಕಕ್ಕಯ್ಯ ಪೋಳ (ಬಿ. ಎಸ್. ಪೋಳ) ಅವರದು ವಿಶಿಷ್ಟ ವ್ಯಕ್ತಿತ್ವ.

ಎಪ್ಪತ್ತರ ದಶಕದ ಬೂಸಾ ಪ್ರಕರಣ, ದಲಿತ-ಬಂಡಾಯದ ಗಾಳಿ ಬೀಸುವ ಮೊದಲೇ ಶೋಷಿತರ ಚಿಂತನೆಯ ನೆಲೆಯಲ್ಲಿ ಅಂಬೇಡ್ಕರ್ ಅವರ ವಿಚಾರಧಾರೆಗಳಿಗೆ ಪ್ರಭಾವಿತರಾಗಿ ಸಾಹಿತ್ಯ ಕೃಷಿಗೆ ತೊಡಗಿದವರು. ವೃತ್ತಿಯಿಂದ ಅಧಿಕಾರಿಯಾಗಿ ಪ್ರವೃತ್ತಿಯಿಂದ ಸಾಹಿತಿಯಾಗಿ ವಿಚಾರವಾದಿಗಳಾಗಿ ಮನುಷ್ಯಪರವಾದ ಚಿಂತನೆಗೈದರು. ಪಂಚಮರ, ಮಹಿಳೆಯರ ಶೋಷಣೆಗೆ ಕಾರಣಗಳನ್ನು ಹುಡುಕುತ್ತ ವ್ಯವಸ್ಥೆಯ ತಳಬುಡವನ್ನು, ಟೊಳ್ಳು ಸಂಸ್ಕೃತಿಯನ್ನು ತಮ್ಮ ಚಿಂತನೆಗಳ ಮೂಲಕ ಒರೆಗಲ್ಲಿಗೆ ಹಚ್ಚಿದರು.

ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಚಾಂದ ಕವಟೆಯಲ್ಲಿ ಅಸ್ಪೃಶ್ಯ ವರ್ಗದ ಡೋಹರ್ ಸಾಯಬಣ್ಣ-ರಾಮವ್ವ ದಂಪತಿಗಳಿಗೆ ದಿನಾಂಕ ೨೮-೦೭-೧೯೨೯ರಂದು ಭೀಮರಾವ್ ಪೋಳ ಏಕೈಕ ಗಂಡು ಮಗುವಾಗಿ ಜನಿಸಿದರು.

ಹಸುಗೂಸು ಇರುವಾಗಲೇ ತಂದೆಯನ್ನು ಕಳೆದುಕೊಂಡ ಭೀಮರಾವ್ ತಾಯಿ, ಅಜ್ಜ-ಅಜ್ಜಿ ಸೋದರಮಾವ ಶಂಕರ ಇವರ ಲಾಲನೆ ಪಾಲನೆಯಲ್ಲಿ ಬೆಳೆದರು.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಪಂಚಮ ರೆನಿಸಿಕೊಂಡ ಹೊಲೆಯ, ಮಾದಿಗ, ಸಮಗಾರ ಡೋಹಾರ ಮಚಗಾರ ಇವರು ಊರ ಹೊರಗೆ ವಾಸಿಸ ಬೇಕು. ಮೇಲಿನ ವರ್ಗದವರನ್ನು ರಕ್ಷಿಸುವುದಕ್ಕಾಗಿ ಪ್ರಾಣತ್ಯಾಗಕ್ಕೂ ಸಿದ್ಧವಾಗಿರಬೇಕು. ಅವರು [illegible] ತೋರಿಸಿದ್ದನ್ನು ಶಿರಬಾಗಿ ಮಾಡಿ, ಕೃಪೆಗೆ ಪಾತ್ರರಾದಾಗ ಮಾತ್ರ ಹಳಸಿದ ಅನ್ನ ನಾಟೀಕಾರ ರೊಟ್ಟಿ ತಂಗಳ ತುಕಡಿಗಳು ಸಿಗುತ್ತಿದ್ದವು. ಕೂಲಿ, ಚಪ್ಪಲಿ ಹೊಲೆಯುವುದು, ಗೋರಿ ಹಡ್ಡವುದು, ಹೆಣದ ಮೇಲಿನ ಬಟ್ಟೆ ತೊಡುವುದು ಇಲ್ಲವೇ ಜೀತ ಪದ್ಧತಿಯೇ ಅವರ ಕಾಯಕವೆಂದು ನಿರ್ದೇಶಿತರಾಗಿದ್ದರು. ಭೀಮರಾವ್ ಅವರ ಪೋಳ ಅಜ್ಜ ತಳಜಾರಾಮ ತನ್ನ ಕುಲಕಸುಬಿನಿಂದ ಊರ ರೈತರ ವ್ಯಾವಸಾಯಿಕ ಕೆಲಸಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದ.

ಊರಲ್ಲಿ ಶಾಲೆಗೆ ಸ್ವತಂತ್ರ ಕಟ್ಟಡವಿರಲಿಲ್ಲ, ಬಸವಣ್ಣ ದೇವರ ಗುಡಿಯಲ್ಲಿ ಶಾಲೆ ನಡೆಯುತ್ತಿತ್ತು. ಕುಲಜರ ಮಕ್ಕಳು ಗುಡಿಯ ಕಟ್ಟಡದ ಪಡಸಾಲೆಯಲ್ಲಿ ಕುಳಿತು ಓದುತ್ತಿದ್ದರೆ, ಗುಡಿಯ ಹೊರ ವಲಯದ ಧೂಳು ಮಣ್ಣಿನಲ್ಲಿ "ನಾನು ನನ್ನ ಗೆಳೆಯ ಹೊಲೆಯರ ಪಂಢರಿ ಇಬ್ಬರೇ ಕುಳಿತುಕೊಳ್ಳುತ್ತಿದ್ದೆವು" ಎಂದು ಅನೇಕ ಬಾರಿ ಪೋಳ ಅವರು ಸ್ವತಃ ನಮ್ಮೊಂದಿಗೆ ನೋವನ್ನು ಹಂಚಿಕೊಂಡಿದ್ದಾರೆ. ಮಳೆಗಾಲದಲ್ಲಿ ಕೆಸರಾದ ನೆಲದಲ್ಲಿಯೇ ಕೂತು ಪಾಠ ಕಲಿಯಬೇಕು. ವಿದ್ಯಾರ್ಥಿಗಳು ಆಡುವ ಮೈದಾನಕ್ಕೂ ಅಸ್ಪೃಶ್ಯ ಮಕ್ಕಳು ಪ್ರವೇಶ ಮಾಡುವಂತಿರಲಿಲ್ಲ. ಜಾತಿರಹಿತ ಸಮಾಜ ನಿರ್ಮಾಣ ಮಾಡಲು ಹೋರಾಡಿದ ಬಸವಣ್ಣನ ಗುಡಿಯಲ್ಲಿ 'ಹಿರಿಯ ಮಾಹೇಶ್ವರ'ರಿಗೆ ಪ್ರವೇಶ ವಿರಲಿಲ್ಲವೆನ್ನುವುದು ವಿಪರ್ಯಾಸವೇ ಸರಿ. ಬಿಜಾಪುರ ಅನೇಕ ಹಿರಿಮೆ ಗರಿಮೆಗಳಿಗೆ ಹೆಸರಾದ ಜಿಲ್ಲೆಯಾಗಿದ್ದರೂ ಅಸ್ಪೃಶ್ಯತೆ ಆಚರಣೆಯಂತಹ ಪದ್ಧತಿಗಳ ಅನುಷ್ಠಾನ ದಿಂದಾಗಿ ಎಂತಹ ಕೀರ್ತಿ, ಖ್ಯಾತಿಗಳಿದ್ದರೂ ಶೋಭಿಸ ಲಾರದು. ಪೋಳೆ ಎಲ್ಲ ಅವಮಾನಗಳನ್ನು ಸಹಿಸಿಕೊಂಡು ಚಾಂದಕವಟೆ ಮತ್ತು ಸಿಂದಗಿಯಲ್ಲಿ ಶಿಕ್ಷಣ ಪಡೆದು ಸರಕಾರಿ ಸೇವೆಗೆ ಸೇರಿದರು.

ಶ್ರದ್ಧಾಂಜಲಿ

# ಅಜಾತಶತ್ರು, ಎ. ವಿ. ಶಂಕರರಾವ್

ನೀರಾವರಿ, ಜಲ ವಿವಾದ ತಜ್ಞ, ಅತ್ತಿಗನಾಳ್ ವೆಂಕಟರಾಮಯ್ಯ ಶಂಕರರಾವ್ ೮೪ ವರ್ಷಗಳ ತುಂಬು ಜೀವನ ನಡೆಸಿ ೨೯-೦೭-೨೦೦೭ ಭಾನುವಾರದಂದು ವಿಧಿವಶರಾದರು. ಶಂಕರ ಜಯಂತಿಯಂದು ಜನಿಸಿದುದರಿಂದ ಶಂಕರರಾವ್ ಎಂಬ ಹೆಸರನ್ನು ಹಿರಿಯರು ಅವರಿಗಿಟ್ಟರು. ಬೆಂಗಳೂರಿನ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. (ಸಿವಿಲ್) ಪದವಿ ಪಡೆದು ಶಂಕರರಾವ್ ಮುಂಬಯಿ ಸರ್ಕಾರದ ಸೇವೆಗೆ ಸೇರಿದರು. ರಾಜ್ಯ ಪುನರ್ವಿಂಗಡಣೆಯ ನಂತರ ಮೈಸೂರು ಸರ್ಕಾರದ ಸೇವೆಯಲ್ಲಿ ನಿಯುಕ್ತರಾದರು. ತುಂಗಭದ್ರಾ, ಕೃಷ್ಣಾ ಮೇಲ್ದಂಡೆ ಮತ್ತು ಭದ್ರಾ ಯೋಜನೆಗಳ ಕಾಮಗಾರಿಯಲ್ಲಿ ತೊಡಗಿಸಿಕೊಂಡ ಅವರು ಆನಂತರ ಕಾವೇರಿ, ಕೃಷ್ಣಾ ಜಲವಿವಾದ ಸಂಬಂಧವಾಗಿ ಕರ್ನಾಟಕ ಸರ್ಕಾರದ ವಾದವನ್ನು ಮಂಡಿಸಲು ಅವಿರತವಾಗಿ ಶ್ರಮಿಸಿದರು. ಕೃಷ್ಣಾ ಜಲ ವಿವಾದ ನ್ಯಾಯಾಧೀಕರಣ ಮತ್ತು ಕಾವೇರಿ ಜಲ ವಿವಾದ ನ್ಯಾಯಾಧಿಕರಣಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿದರು. ೧೯೭೩ರಲ್ಲಿ ಸುಪ್ರಸಿದ್ಧ ನೀರಾವರಿ ತಜ್ಞ ಎನ್. ಡಿ. ಗುಲ್ಹಾಟಿಯವರ ನೇತೃತ್ವದಲ್ಲಿ ಕರ್ನಾಟಕ ಸರ್ಕಾರ ಕಾವೇರಿ ಕಣಿವೆಯ ನೀರಿನ ಸಮರ್ಪಕ ಬಳಕೆಗಾಗಿ ಮಹಾ ಯೋಜನೆಯನ್ನು ತಯಾರಿಸಿದಾಗ ಗುಲ್ಹಾಟಿಯವರ ಬಲಗೈಯಾಗಿ ದುಡಿದರು. ೧೯೭೨ರಲ್ಲಿ ಕಾವೇರಿ ಸತ್ಯಶೋಧನಾ ಸಮಿತಿ ರಚಿಸಿದಾಗಿನಿಂದ ೩೫ ವರ್ಷ ಕಾಲ ಕಾವೇರಿ ಜಲವಿವಾದ ಪರಿಹಾರಕ್ಕಾಗಿ ತಮ್ಮ ತನು ಮನಗಳನ್ನು ಧಾರೆ ಎರೆದರು.

ಸರ್ಕಾರಿ ಸೇವೆಯಲ್ಲಿದ್ದಾಗ ಮತ್ತು ನಿವೃತ್ತರಾದ ಮೇಲೆ ಅವರು ಎಲ್ಲರೊಡನೆ ಸುಲಭವಾಗಿ ಬೆರೆಯುತ್ತಿದ್ದರು. ಸಾರ್ವಜನಿಕ ಸಂಪರ್ಕ ಹವ್ಯಾಸವಾಗಿದ್ದ ಅವರಿಗೆ ರಾಜಕೀಯ ಮುತ್ಸದ್ದಿಗಳು, ಸಾಹಿತಿಗಳು, ಕಲಾವಿದರು, ದಾರ್ಶನಿಕರೊಂದಿಗೆ ನಿರಂತರ ಸಂಪರ್ಕವಿತ್ತು. ಜಯನಗರ 'ಸಂವಾದ' ಸಂಸ್ಥೆಗೆ ಅವರು ಸಂಸ್ಥಾಪಕ ಅಧ್ಯಕ್ಷರು. ನಿವೃತ್ತರಾದ ಮೇಲೆ ಪ್ರೊ|| ಎಸ್. ಕೆ. ರಾಮಚಂದ್ರ ರಾವ್ ಅವರಲ್ಲಿ ಆಧ್ಯಾತ್ಮಿಕ ವಿಷಯಗಳಲ್ಲಿ ವ್ಯಾಸಂಗ ಕೈಗೊಂಡ ಶಂಕರರಾವ್‌ರವರು ಸುಮಾರು ೨೮ ವರ್ಷಗಳಕಾಲ ಅವರ ಒಡನಾಡಿಯಾಗಿದ್ದರು. ಸಾ.ಕೃ.ರಾ. ಅವರ ನಿಧನಾನಂತರ ಶಂಕರರಾವ್‌ಗೆ ಒಂಟಿತನ ಕಾಡಿದ್ದುಂಟು. ಶೇಷನಾರಾಯಣ ಅವರು ಕಾವೇರಿ ಸಮಸ್ಯೆಯ ಬಗ್ಗೆ ಪುಸ್ತಕ ಬರೆಯಲು ಸಹಾಯ ಮಾಡಿದ ಅವರು ನೀರಾವರಿ ತಜ್ಞ ಬಾಳೆಕುಂದ್ರಿಯವರ ಅಕಾಲ ಮತ್ತು ಆಕಸ್ಮಿಕ ಮರಣಾನಂತರ ಜಲ ವಿವಾದಗಳ ಬಗ್ಗೆ ಏಕಮೇವಾದ್ವಿತೀಯ ತಜ್ಞರಾಗಿದ್ದರು. ಡಾ|| ಚಿದಾನಂದ ಮೂರ್ತಿಯವರು ಅವರನ್ನು ನಿರಂತರವಾಗಿ ಸಂಪರ್ಕಿಸುತ್ತಿದ್ದರು.

ಕಮ್ಯುನಿಸ್ಟ್ ನಾಯಕ ಎಂ. ಎಸ್. ಕೃಷ್ಣನ್‌ರವರ ಗೆಳೆಯರಾಗಿದ್ದ ಶ್ರೀ ಶಂಕರರಾಯರು ರಾಯಚೂರಿನಲ್ಲಿ ಸೇವೆಯಲ್ಲಿದ್ದಾಗ ಪೊಲೀಸರು ಅವರನ್ನು ಈ ಸಂಬಂಧವಾಗಿ ಎಚ್ಚರಿಸಿದ್ದರು. ರಾಜಕೀಯ ಮುತ್ಸದ್ದಿ ಹಾರನಹಳ್ಳಿ ರಾಮಸ್ವಾಮಿ ಅವರು ರಾಜ್ಯ ಆಡಳಿತ ಸುಧಾರಣಾ ಆಯೋಗದ ಅಧ್ಯಕ್ಷರಾದಾಗ ಅವರಿಗೆ ಸೂಕ್ತ ಸಲಹೆಗಳನ್ನಿತ್ತರು. ಕೇಂದ್ರ ಜಲ ಆಯೋಗದ ಅಧ್ಯಕ್ಷರಾಗಿದ್ದ ಶ್ರೀ ವೈ. ಕೆ. ಮೂರ್ತಿ ಯವರೇ ಅಲ್ಲದೆ ಕೇಂದ್ರ ಸರ್ಕಾರ ಮತ್ತು ಇತರ ರಾಜ್ಯ ಸರ್ಕಾರಗಳ ಸೇವೆಯಲ್ಲಿದ್ದ ಅನೇಕ ಗೆಳೆಯರನ್ನು ಹೊಂದಿದ್ದ ಅವರಿಗೆ ರಾಜ್ಯ ಸರ್ಕಾರಕ್ಕೆ ಬೇಕಾದ ತಾಂತ್ರಿಕ ನೆರವು ಪಡೆಯುವುದು ಬಹಳ ಸುಲಭದ ಸಂಗತಿಯಾಗಿತ್ತು.

ಅದಮ್ಯ ಉತ್ಸಾಹದ ಚಿಲುಮೆಯಾಗಿದ್ದ ಅವರಿಗೆ ಪ್ರವಾಸ, ರುಚಿ ರುಚಿಯಾದ ತಿಂಡಿ ಬಹಳ ಪ್ರಿಯವಾದ ಹವ್ಯಾಸ. ಕಾವೇರಿ ನ್ಯಾಯಾಧಿಕರಣದ ಅಧ್ಯಕ್ಷರಾಗಿದ್ದ ಶ್ರೀ ಚಿತ್ತತೋಷ್ ಮುಖರ್ಜಿ ಮತ್ತು ಹಿರಿಯ ವಕೀಲ ಶ್ರೀ ಪರಾಶರನ್ ಅವರು ಕರ್ನಾಟಕದ ಪ್ರವಾಸ ಕೈಗೊಂಡಾಗ ಅವರ ಒಡನಾಡಿಯಾಗಿದ್ದ ಶಂಕರರಾವ್ ಮನೆಯವರ ಪ್ರತಿರೋಧವನ್ನು ಲೆಕ್ಕಿಸದೆ ಎಪ್ಪತ್ತರ ಇಳಿ ವಯಸ್ಸಿನಲ್ಲಿ ಬೆಟ್ಟ ಹತ್ತಿ ಶ್ರವಣಬೆಳಗೊಳದ ಗೊಮ್ಮಟೇಶ್ವರನ ದರ್ಶನ ಪಡೆದರು.

ಮೇ ೨೨, ೧೯೬೪ರಲ್ಲಿ ಆಗಿನ ಕೇಂದ್ರ ಮಂತ್ರಿ ಲಾಲ್ ಬಹದ್ದೂರ್ ಶಾಸ್ತ್ರಿಯವರು ಆಲಮಟ್ಟಿ ಜಲಾಶಯಕ್ಕೆ ಅಡಿಪಾಯ ಹಾಕಿದಾಗ ಅಲ್ಲಿ ಕಾರ್ಯ ನಿರ್ವಾಹಕ ಇಂಜಿನಿಯರ್ ಆಗಿದ್ದ ಶಂಕರರಾವ್ ಶ್ರೀಯುತ ಶಾಸ್ತ್ರೀ, ನಿಜಲಿಂಗಪ್ಪ, ವೀರೇಂದ್ರ ಪಾಟೀಲರೊಂದಿಗೆ ಫೋಟೊ ತೆಗೆಸಿಕೊಂಡಿದ್ದರು. ರಾಷ್ಟ್ರಪತಿ ಡಾ|| ಎ. ಪಿ. ಜೆ. ಅಬ್ದುಲ್ ಕಲಾಂರವರು ಆಲಮಟ್ಟಿ ಜಲಾಶಯವನ್ನು ರಾಷ್ಟ್ರಕ್ಕೆ ಸಮರ್ಪಿಸಿದಾಗ ಈ ಭಾವಚಿತ್ರದ ಜೆರಾಕ್ಸ್ ಪ್ರತಿ ತೆಗೆಸಿ ಹೆಮ್ಮೆಯಿಂದ ನಮ್ಮೆಲ್ಲರಿಗೂ ಹಂಚಿದ್ದರು.

ಅವರ ಅಗಲಿಕೆ ತುಂಬಲಾಗದ ನಷ್ಟ.



ಎಡದಿಂದ : ಲಾಲ್‌ಬಹದ್ದೂರ್ ಶಾಸ್ತ್ರಿ, ಎಸ್. ನಿಜಲಿಂಗಪ್ಪ, ವೀರೇಂದ್ರ ಪಾಟೀಲ್ ಮತ್ತು ಎ. ವಿ. ಶಂಕರರಾವ್

ರಾ. ಹೃಷೀಕೇಶ್
ನಿವೃತ್ತ ಮುಖ್ಯ ಇಂಜಿನಿಯರ್, ನಂ. ೧೧೪, ೧೨ನೇ 'ಎ' ಮೈನ್,
ಬಿ.ಟಿ.ಎಂ. ಮೊದಲನೇ ಹಂತ, ಬೆಂಗಳೂರು - ೫೬೦ ೦೨೯

ಗುಲಬರ್ಗಾ ಹಾಗೂ ಇಂಡಿಯಲ್ಲಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸಿದರು. ನಂತರ ಸ್ವಯಂ ನಿವೃತ್ತಿ ಪಡೆದು ರಾಜಕೀಯದಲ್ಲಿ ಪ್ರವೇಶ ಮಾಡಲು ಚಿಂತಿಸಿದ್ದರು, ಆದರೆ ಅದು ಕೈಗೂಡಲಿಲ್ಲ. ದೇಶದಲ್ಲಿ ಸ್ವಾತಂತ್ರ್ಯ ಚಳವಳಿ ಕಾವು ಏರಿತ್ತು. ಅಸ್ಪೃಶ್ಯತಾ ನಿವಾರಣಾ ಕಾರ್ಯವು ಮಹಾತ್ಮಾ ಗಾಂಧೀಜಿಯ ನೇತೃತ್ವದಲ್ಲಿ ಸಾಗಿತ್ತು. ಪೊಲೀಸರ ಆಣತಿಯಂತೆ ಪೋಳ ಅವರ ಮಾವ ಶಂಕ್ರಪ್ಪ ಚಾಂದಕವಟೆಯ ಸವರ್ಣೀಯರ ಬಾವಿಯಲ್ಲಿ ನೀರು ತುಂಬಿದ್ದಕ್ಕಾಗಿ ಥಳಿಸಿಕೊಂಡು ದಂಡ ಕಟ್ಟಿದ ಘಟನೆ ಪೋಳ ಅವರ ಮೇಲೆ ಹೆಚ್ಚಿನ ಪ್ರಭಾವ ಬೀರಿತು. ಸರಕಾರಿ ಕೆಲಸ ಸಿಕ್ಕಿತೆಂದು ಸುಮ್ಮನಿರದೆ ತನ್ನವರಿಗಾಗಿ ಚಿಂತಿಸುತ್ತ ಸಾಹಿತ್ಯ ರಚನೆಗೆ ತೊಡಗಿದರು.

೧೯೬೫ರಲ್ಲಿ 'ಧರ್ಮಕ್ರಾಂತಿ' ಕೃತಿಯ ಮೂಲಕ ಪೋಳ ಅವರು ಧಾರ್ಮಿಕ ದಬ್ಬಾಳಿಕೆಯ ವಿರುದ್ಧ ಪ್ರತಿಭಟಿಸಿದರು. ವೈರುಧ್ಯಗಳ ನಡುವೆಯೇ ಸಾಮಾಜಿಕ ಮತ್ತು ಆರ್ಥಿಕ ಸಮಾನತೆಗಳಿಗಾಗಿ ಮತ್ತು ಧಾರ್ಮಿಕ ದಾಳಿಗಳಿಂದ ಆಗುವ ಅಮಾನವೀಯ ಕೃತ್ಯಗಳ ಮೂಲಕ ನಡೆಯುವ ಶೋಷಣೆಯನ್ನು ನಿಲ್ಲಿಸುವುದಕ್ಕಾಗಿ ದಬ್ಬಾಳಿಕೆ ಯನ್ನು ದಮನಮಾಡುವುದಕ್ಕಾಗಿ ಪ್ರಯತ್ನಿಸಿದರು. 'ಇದು ನನ್ನ ಸಮಾಜ' ಎಂಬ ನಾಟಕವು ಈ ಹಿನ್ನೆಲೆಯಲ್ಲಿಯೆ ಮೂಡಿಬಂದಿತು. 'ಸಮಾಜದ ತೊಡರಿಗೆ ಧರ್ಮದ ಕಗ್ಗಂಟು' ಕಥಾ ಸಂಕಲನವು ೧೯೬೬ರಲ್ಲಿ ಪ್ರಕಟ ವಾಯಿತು. 'ನಿಯತಿ ಶಾಸನ', 'ಗೀಜಗನಗೂಡು' ಕಾದಂಬರಿಗಳನ್ನು ಕ್ರಮವಾಗಿ ೧೯೭೩, ೧೯೭೫ರಲ್ಲಿ ಪ್ರಕಟಿಸಿದರು. ೧೯೭೭ರಲ್ಲಿ 'ಮೂಕನ ಭಾಷಣ', ೧೯೮೭ರಲ್ಲಿ 'ಬಸವಧರ್ಮ ಯಾರ ಸೊತ್ತು', 'ಚಾತುರ್ವರ್ಣ ಧರ್ಮದರ್ಶನ', 'ಧರ್ಮ ಗುರುಗಳ ಅವಾಂತರ' 'ಕುಮಾರ ಕಕ್ಕಯ್ಯನ ವಚನಗಳು' ಹೀಗೆ ಒಟ್ಟು ಹತ್ತಕ್ಕೂ ಮೇಲ್ಪಟ್ಟು ವೈಚಾರಿಕ ಚಿಂತನೆಯುಳ್ಳ ಕೃತಿಗಳನ್ನು ರಚಿಸಿದ್ದಾರೆ. ಕುಮಾರ ಕಕ್ಕಯ್ಯ ಪೋಳ ಅವರನ್ನು ಹೆಚ್ಚು ಜನಪ್ರಿಯಗೊಳಿಸಿದ ಮತ್ತು ವಿಚಾರ ವಾದಿಯೆಂಬ ಹೆಸರು ತಂದುಕೊಟ್ಟ ಕೃತಿ 'ಚಾತುರ್ವರ್ಣ ಧರ್ಮದರ್ಶನ'. [ಬಿ. ಲಿಂಗಣ್ಣ: 'ಕುಮಾರ ಕಕ್ಕಯ್ಯ ಪೋಳ ಬದುಕು-ಬರಹ ಒಂದು ಅಧ್ಯಯನ', ಪಿಎಚ್.ಡಿ ಮಹಾ ಪ್ರಬಂಧ (ಅಪ್ರಕಟಿತ), ೨೦೦೨] ಈ ಕೃತಿಯಲ್ಲಿ ಚಾತುರ್ವರ್ಣ್ಯಕ್ಕೆ ಕಾರಣವಾದ ಮನುಚಿಂತನೆಯ ಪ್ರತಿರೂಪದಂತಿದ್ದ ರಾಮಾಯಣ, ಮಹಾಭಾರತದಲ್ಲಿಯ ಅವಾಂತರಗಳಿಗೆ ಸಾಣೆ ಹಿಡಿಯುವ ಕೆಲಸ ಪೋಳ ಅವರು ಮಾಡಿದ್ದಾರೆ. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಕಂದಾಚಾರ, ಪಾಪ ಪುಣ್ಯಗಳ ಕಲ್ಪನೆ, ದೇವರು ಸ್ವರ್ಗ ನರಕ, ಧರ್ಮಗುರುಗಳ ಕರ್ಮಕಾಂಡ ಈ ಎಲ್ಲವುಗಳ ಹಿನ್ನೆಲೆಯಲ್ಲಿ ಅಸ್ಪೃಶ್ಯರ ಮೇಲಾಗುವ ಅತ್ಯಾಚಾರಗಳ ವಿರುದ್ಧ ಗುಡುಗಿ ಸನಾತನೀಯರ ಎಲ್ಲ ಪೊಳ್ಳು ಆಲೋಚನೆಗಳಿಗೆ ಸಕಾರಣ ನೀಡುವುದರ ಮೂಲಕ, ಅವುಗಳನ್ನು ತಿರಸ್ಕರಿಸಿದ್ದಾರೆ. ವೈಚಾರಿಕ ಚಿಂತನೆಯ ಜೊತೆಗೆ 'ಕುಮಾರ ಕಕ್ಕಯ್ಯ' ಅಂಕಿತವನ್ನಿಟ್ಟು ಕೊಂಡು ವಚನಗಳನ್ನು ಬರೆದಿದ್ದಾರೆ.

'ಬೆಕ್ಕಿನ ಕೈಯಲ್ಲಿ ಸಿಕ್ಕ ಇಲಿ, ತನ್ನ ಪ್ರಾಣ ರಕ್ಷಣೆಗಾಗಿ ಹೋರಾಡುತ್ತಿದೆಯೇ ಹೊರತು, ಆ ಬೆಕ್ಕಿನ ಮನಸ್ಸು ನೋಯಿಸುವ ಅಥವಾ ಆ ಬೆಕ್ಕಿಗೆ ದ್ರೋಹ ಬಗೆಯುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅದೇ ಪ್ರಕಾರ ಚಾತುರ್ವರ್ಣವೆಂಬ ಬ್ರಹ್ಮರಾಕ್ಷಸನ ಕೈಯಲ್ಲಿ ಸಿಕ್ಕ, ಅಸ್ಪೃಶ್ಯರ ವಿಮೋಚನೆಯ ಪ್ರಯತ್ನವನ್ನು ಆಕ್ಷೇಪಣೆ ಮಾಡುವ ಪ್ರಶ್ನೆಯೇ ಇಲ್ಲಿ ಉದ್ಭವಿಸುವುದಿಲ್ಲ. ಇದು ಬೆಂದ ಮತ್ತು ನೊಂದ ಹೃದಯದಿಂದ ಬಂದದ್ದೆ ಹೊರತು, ಪಾಂಡಿತ್ಯದಿಂದ ಹೊರ ಹೊಮ್ಮಿದ್ದಲ್ಲ', ಈ ಹಿನ್ನೆಲೆಯಲ್ಲಿ ಅವರ ವಚನವೊಂದು ಹೀಗೆ ಮೂಡಿಬಂದಿದೆ :

ಇಲಿ ಹೌಹಾರಿ ಹೋರಾಡುವುದು
ಬೆಕ್ಕಿಗೆ ದ್ರೋಹ ಬಗೆಯಲಿಕ್ಕೆಂದಲ್ಲ
ತನ್ನ ಪ್ರಾಣ ಉಳಿಸಿಕೊಳ್ಳಲಿಕ್ಕೆ
ಅಂತ್ಯಜ ಗೋಗರೆದು ಹೋರಾಡುವುದು
ಕುಲಜನಿಗೆ ದ್ರೋಹ ಬಗೆಯಲಿಕ್ಕೆಂದಲ್ಲ
ತನ್ನ ಜೀವ ಉಳಿಸಿಕೊಳ್ಳಲಿಕ್ಕೆಂದ
ಕುಮಾರ ಕಕ್ಕಯ್ಯ

ಅವರ ಒಟ್ಟು ಗದ್ಯ ಸಾಹಿತ್ಯದಲ್ಲಿ ಮುಖ್ಯವಾಗಿ ಕಂಡುಬರುವುದೇನೆಂದರೆ, ಸಾಮಾಜಿಕ ಕಂದಾಚಾರದ ಮುಖ್ಯ ಕೇಂದ್ರಗಳಾದ ಮಠ, ದೇವರು, ಮೌಢ್ಯ, ಅಧರ್ಮ, ಅನೀತಿ, ಅಸ್ಪೃಶ್ಯತೆ ಈ ಎಲ್ಲ ನೆಲೆಗಳಲ್ಲಿ ನಡೆಯುವ ಅಸ್ಪೃಶ್ಯರ ಶೋಷಣೆಗೆ ತಡೆಗೋಡೆಯಾಗಿ ನಿಲ್ಲುವಂತಹ ಚಿಂತನೆಗಳು ಮತ್ತು ಆ ನಿಟ್ಟಿನಲ್ಲಿ ಸಕಾರಣ ಗಳನ್ನು ಕಟ್ಟಿಕೊಡುವ ಮಾನವಪರ ವಿಚಾರಗಳು ಮೂಡಿ ಬಂದಿವೆ. ದಲಿತ ಕವಿ ಸಿದ್ಧಲಿಂಗಯ್ಯನವರು ಹೇಳುವ ಹಾಗೆ 'ದಲಿತ ಬರಹಗಾರನಿಗೆ ರಸಾನಂದ ಅಪ್ರಸ್ತುತವಾಗುತ್ತದೆ. ಇವನ ಗುರಿ ಮಾನವೀಕರಣ. ಸಮಾಜದ ಅಸಹ್ಯ ಸ್ಥಿತಿ, ಮೇಲು ಕೀಳು, ಶ್ರೇಷ್ಠ ಕನಿಷ್ಠ ಇವುಗಳ ಶಾಶ್ವತ ನಾಶಕ್ಕಾಗಿ ದಲಿತನ ಬರವಣಿಗೆ ಹುಟ್ಟುತ್ತದೆ. ಇಂಥ ಬರವಣಿಗೆ ಯಿಂದ ಮಾತ್ರ ದಲಿತರನ್ನು ಬಿಡುಗಡೆಯ ದಾರಿಯಲ್ಲಿ ಮಾನಸಿಕವಾಗಿ ಚಲನಶೀಲರನ್ನಾಗಿ ಮಾಡಬಲ್ಲದು.' ಈ ಹಿನ್ನೆಲೆಯಲ್ಲಿ ಕುಮಾರ ಕಕ್ಕಯ್ಯ ಪೋಳ ಅವರ ಉದ್ದೇಶ ಅಮಾನವೀಯವಾದ ಇಲ್ಲಿಯ ವ್ಯವಸ್ಥೆಯನ್ನು ಮಾನವೀಕರಣಗೊಳಿಸುವದಾಗಿತ್ತು ಎಂದೆನಿಸುತ್ತದೆ.

ಅಂಬೇಡ್ಕರ್ ವಿಚಾರಧಾರೆಗಳಲ್ಲಿ ಅಚಲವಾದ ನಂಬಿಕೆಯಿಟ್ಟು 'ಮೂಕನ ಭಾಷಣ' ಎನ್ನುವ ಕೃತಿಯನ್ನು ಹೊರತಂದರು. ಅಂಬೇಡ್ಕರ್‌ರಂತೆ ಬೌದ್ಧರಾಗಲು ಹೋಗಿ ಅಲ್ಲಿಯ ತೊಡಕುಗಳನ್ನು ಅರಗಿಸಿಕೊಳ್ಳಲಾರದೆ ವೀರಶೈವದೆಡೆಗೆ ಮುಖಮಾಡಿ ತಮ್ಮ ಜೀವಿತದ ಕೊನೆಯ ವರೆಗೆ ಬಸವ ಕಕ್ಕಯ್ಯರಾದಿ ಶರಣರ ಅನುಯಾಯಿ ಗಳಾಗಿ ವಚನ ರಚನೆಯೊಂದಿಗೆ ಶರಣ ಸಂಸ್ಕೃತಿ ಚಿಂತನೆಗೆ ಮಹತ್ವ ತಂದಿದ್ದಾರೆ. ಈ ಹಿನ್ನೆಲೆಯಲ್ಲಿ 'ಬಸವ ಧರ್ಮ ಯಾರ ಸೊತ್ತು' ? ಎನ್ನುವ ಕೃತಿಯನ್ನು ರಚಿಸಿದ್ದಾರೆ. ಧಾರ್ಮಿಕ ತತ್ವಗಳನ್ನು ಮತ-ಸಿದ್ಧಾಂತಗಳನ್ನು ಆಚಾರ ವಿಚಾರಗಳನ್ನು ಗೊಡ್ಡು ಸಂಪ್ರದಾಯಗಳಿಂದ ದೂರವುಳಿದು ಚಿಂತಿಸಿದ್ದಾರೆ. ಮೋಕ್ಷ ಸ್ವರ್ಗ ನರಕಗಳ ಕಲ್ಪನೆಗಳು ಸುಳ್ಳು ಎಂದು ಖಂಡಿಸಿದ್ದಾರೆ.

ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸುವ ಕುಲಜರೆ ಶರಣರು ಎಂದು ಹೇಳಿದವರು ಶರಣರು. ಆದರೆ ಸಕಲ ಜೀವಾತ್ಮರನ್ನು ತಿಂದು ತೇಗುವ ವರ್ಗದ ಸಾಮಾಜಿಕ ವ್ಯವಸ್ಥೆ ಕುರಿತು ವಚನಗಳಲ್ಲಿ ಕುಮಾರ ಕಕ್ಕಯ್ಯನವರು ಮಾತಾಡುವುದು ಮಾನವೀಯತೆಗೆ ಹಿಡಿದ ಕನ್ನಡಿಯಾಗಿದೆ.

ಪಶು ಪಕ್ಷಿಗಳ ಬೇಟೆಯಾಡುವ ಜಗದಲ್ಲಿ
ಪಾಪ ಪುಣ್ಯ ಶಾಸ್ತ್ರದ ಬದನೆಕಾಯಿಗಳೆಂದ ಕುಮಾರ
ಕಕ್ಕಯ್ಯ.

ಬದುಕಿಗೆ ಆಸರೆಯಾಗಿರುವ ಪ್ರಾಣಿಯನ್ನು ದುಡಿಸಿ ಕೊಂಡು ಅದು ನಿತ್ರಾಣವಾದಾಗ ಕಟುಕನಿಗೆ ಮಾರುವ ವರನ್ನು ಕಂಡು ಯಾವುದು ಪುಣ್ಯವೆಂದು ಚಿಂತಿಸಿದ್ದಾರೆ.

'ದಯವೇ ಧರ್ಮದ ಮೂಲ' ಎನ್ನುವಂತೆ ದಯೆಯನ್ನು ಪ್ರತಿಪಾದಿಸದೆ ಕಾಣದ ಯಾವುದೋ ಲೋಕದ ಸಿದ್ಧತೆಗೆ ಹೆಣಗುವುದು ಸರಿಯಾದ ಕ್ರಮವಲ್ಲ.

ಸತ್ತ ಬಳಿಕ ನರಕ ಮೋಕ್ಷ, ಪುನರ್ಜನ್ಮಗಳೆಂಬ
ತರತಮ ಶಬ್ದಗಳ ಶಾಸ್ತ್ರ ಜಾಲವೆಂದ ಕುಮಾರ ಕಕ್ಕಯ್ಯ
ಇಹದಲ್ಲಿಯೇ ಎಲ್ಲವನ್ನು ಕಾಣುವುದು ಮುಖ್ಯ.

ಪಾಪ, ಪುಣ್ಯ, ಸ್ವರ್ಗ, ನರಕಗಳೆಲ್ಲವು ದಯೆ, ಸತ್ಯ, ಶುದ್ಧ ಕಾಯಕದಲ್ಲಿ ಅಡಗಿವೆ ಎನ್ನುವುದನ್ನು ಪೋಳ ಅವರು ಸ್ಪಷ್ಟಪಡಿಸುತ್ತಾರೆ.

ಅಹಂಕಾರಿಗಳನ್ನು ಅರಿವಿಲ್ಲದವರನ್ನು ನಾನು ತಾನು ಮೇಲೆಂದು ಹೇಳುವವರನ್ನು ಮಣ್ಣಿಗಿಂತ ಮಡಿಕೆ ಘನವಲ್ಲ, ಸೃಷ್ಟಿಗಿಂತ ಶಾಸ್ತ್ರ ಹಿರಿದಲ್ಲವೆಂದು ಕಕ್ಕಯ್ಯ ನವರು ಅಭಿಪ್ರಾಯ ಪಟ್ಟಿರುವುದು ಕಾಣುತ್ತೇವೆ. ಒಟ್ಟಾರೆ ಯಾಗಿ ತಮ್ಮ ಕೃತಿಗಳ ಮೂಲಕ ಆಧುನಿಕರಲ್ಲಿ ಮೌಢ್ಯತೆಗೆ ಕಾರಣವಾದ ಅನೇಕ ವಿಷಯಗಳ ಮೇಲೆ ವೈಚಾರಿಕ ವೈಜ್ಞಾನಿಕ ಬೆಳಕು ಚೆಲ್ಲುವ ಪ್ರಯತ್ನ ಪೋಳ ಅವರ ದಾಗಿದೆ. ಸೌಜನ್ಯ ಸತ್ಯಗಳ ಅರಿವನ್ನು ತಮ್ಮ ವಚನಗಳ ಮೂಲಕ ಅರುಹಿದ್ದಾರೆ. ವಿಶ್ವಧರ್ಮವಾಗಬೇಕಿದ್ದ ಬಸವ ಧರ್ಮದ ಅವನತಿಗೆ ಕಾರಣರಾದವರ ಬಗ್ಗೆ ಕಕ್ಕಯ್ಯನವರಿಗೆ ನೋವಿದೆ, ಸಿಟ್ಟಿದೆ.

ಬುದ್ಧ, ಬಸವ, ಅಂಬೇಡ್ಕರ್ ಅವರ ಚಿಂತನೆಗಳಲ್ಲಿ ಅಪಾರ ಕಾಳಜಿ ಇಟ್ಟುಕೊಂಡು ಆ ಹಿನ್ನೆಲೆಯಲ್ಲಿ ದುಡಿದ ವಿಚಾರವಾದಿ ಪೋಳ ಅವರು ವೀರಶೈವರಾದರೂ ತಕ್ಕಮಟ್ಟಿನ ಗೌರವಗಳು ದೊರೆಯದೆ ಹೋಯಿತು. ಅಸ್ಪಶ್ಯರಾಗಿಯೇ ಉಳಿಯಬೇಕಾಯಿತು. ಕನ್ನಡ ಸಾಹಿತ್ಯದ ಕಥೆ, ಕಾವ್ಯ, ವಚನ, ಕಾದಂಬರಿ, ವಿಚಾರ ಸಾಹಿತ್ಯದಲ್ಲಿ ಕೃಷಿಗೈದ ಪೋಳ ಅವರಿಗೆ ಸಿಕ್ಕ ಪ್ರಚಾರ ಬಹಳ ಕಡಿಮೆ. ಪೋಳ ಅವರನ್ನು ತೀರ ಹತ್ತಿರದಿಂದ ಕಂಡು ಅವರೊಂದಿಗಿನ ನನ್ನ ನಾಲ್ಕಾರು ವರ್ಷಗಳ ಒಡನಾಟ ದಿಂದಾಗಿ ನನಗೆ ಅವರಲ್ಲಿ ಹೆಚ್ಚಿನ ಗೌರವ; ಸಹಜ ಸರಳ ಹಾಗೂ ವಿಚಾರದಲ್ಲಿ ನಿಷ್ಠುರ ವಾದಿಗಳು. ಜಾತಿವ್ಯವಸ್ಥೆ, ಮೌಢ್ಯತೆ ಜೊತೆಗೆ ಎಂದೂ ರಾಜಿ ಮಾಡಿಕೊಂಡವರಲ್ಲ. ಬರಹದಂತೆ ಬದುಕಿದವರು, ಸಾಯುವತನಕ ಬಸವ ಪಥದಲ್ಲೇ ನಡೆದವರು. ಜೀವನದ ಕೊನೆಯ ಕ್ಷಣದಲ್ಲಿ ಪೋಳ ಅವರು ಬಸವನ ಮನೆಗೆ ಹೋಗುವೆ, ಬಸವನ ಮನೆಯಲ್ಲಿ ಎಲ್ಲರೂ ಹೊಲಸು ತುಂಬಿಸಿದ್ದಾರೆ. ಅದನ್ನು ಹಸನುಗೊಳಿಸಲು ಹೋಗಬೇಕು ಎಂದು ಮಕ್ಕಳೆದುರಿಗೆ ಕನವರಿಸಿ ೧೫-೦೨-೯೬ರಂದು ನಿಧನರಾದರು.

ಡಾ॥ ಎಚ್. ಟಿ. ಪೋತೆ
ಪ್ರವಾಚಕರು, ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ - ೫೮೫ ೧೦೬

# ಶಿಕಾರಿ

ನಡುರಾತ್ರಿಯಲ್ಲಿ ಎದೆ ನಡುಗಿಸುವಂತೆ ಕೋವಿ ಆರ್ಭಟಿಸಿದ್ದನ್ನು ಕೇಳಿ ಎಚ್ಚರವಾಯಿತು. ಮೂರು ತಿಂಗಳಿನಿಂದ ಕಾಡು ಹಂದಿಯೊಂದು ನಮ್ಮ ಮನೆಯ ಪಕ್ಕದ ತೋಟಗಳಿಗೆ ನುಗ್ಗಿ ಕಾಟ ಕೊಡುತ್ತಿತ್ತು. ಗೊಬ್ಬರ ಹಾಕಿ ಮಣ್ಣುಮುಚ್ಚಿದ ಅಡಿಕೆ ಮರಗಳ ಬುಡಗಳನ್ನು ಅಗೆಯುತ್ತಿತ್ತು. ಹೊಸದಾಗಿ ನೆಟ್ಟ ಗಿಡಗಳನ್ನು ಬೀಳಿಸುತ್ತಿತ್ತು. ಎಷ್ಟು ಬೇಲಿ ಕಟ್ಟಿದರೂ ಯಾವುದಾದರೊಂದು ಮೂಲೆಯಲ್ಲಿ ಅದನ್ನು ಒತ್ತರಿಸಿ ಬರುತ್ತಿತ್ತು. ಅದರ ದಾರಿಯನ್ನು ಅನುಸರಿಸಿ ಮರುದಿನ ದನಗಳೂ, ಕರುಗಳೂ, ಮುಳ್ಳು ಹಂದಿಗಳೂ ತೋಟಕ್ಕೆ ದಾಳಿಯಿಡುತ್ತಿದ್ದವು. ಒಂದು ಬೆಳಗಿನ ಜಾವ ಹಿತ್ತಿಲಲ್ಲಿದ್ದ ಹಲಸಿನ ಮರದ ಬುಡದಿಂದಲೇ ಆ ಕಾಡು ಹಂದಿ ಕಪ್ಪು ಬಂಡೆಯೊಂದು ಉರುಳಿದಂತೆ ಧಿಗ್ಗನೆ ಚಿಮ್ಮಿ ಓಡಿದ್ದನ್ನು ಅಪ್ಪ ಕಣ್ಣಾರೆ ಕಂಡಿದ್ದರು. ಅದರ ಕಾಟ ತಡೆಯಲಾರದೆ, ''ಹೇಗಾದರೂ ಸರಿ – ಅದನ್ನು ಹೊಡೆದುಹಾಕು ಮಾರಾಯಾ. ಇಲ್ಲದಿದ್ದರೆ ತೋಟ ಉಳಿಯಲಿಕ್ಕಿಲ್ಲ'' ಅಂತ ನೋಣಯ್ಯನಿಗೆ ಹೇಳಿದ್ದರು. ಸೈನಿಕನಂತೆ ಒಂದು ವಾರವಿಡೀ ಕೋವಿಯನ್ನು ಹೆಗಲಿಗೇರಿಸಿಕೊಂಡು ತಿರುಗುತ್ತಿದ್ದವ ಮೊಲ, ಬರಿಂಕ, ಮುಳ್ಳುಹಂದಿಗಳನ್ನು ಹೊಡೆದು ಪದಾರ್ಥ ಮಾಡಿ ತಿಂದನೇ ಹೊರತು ಈ ಕಾಡು ಹಂದಿ ಅವನ ಕಣ್ಣಿಗೇ ಬೀಳಲಿಲ್ಲ. ಹಂದಿ ತೋಟಕ್ಕೆ ನುಗ್ಗುವ ಸಂದಿಯಲ್ಲಿ ತಂತಿಯ ಉರುಳು ಕಟ್ಟಿದ. ಆ ಉರುಳಲ್ಲಿ ಅವನದೇ ನಾಯಿ ಸಿಕ್ಕಿಬಿದ್ದು ಪ್ರಾಣಾಪಾಯದಿಂದ ಒದ್ದಾಡುತ್ತಿರುವಾಗ ಅದೃಷ್ಟವಶಾತ್ ಅವನೇ ನೋಡಿ ಬದುಕಿಸಿದ.

ಆ ನಾಯಿಯಾದರೂ ಸಾಮಾನ್ಯದ್ದಲ್ಲ. ನೋಣಯ್ಯನ ಶಿಕಾರಿಯ ಕಾಯಂ ಜೊತೆಗಾರ. ದೊಡ್ಡ ಗಾತ್ರದ ಬಲಶಾಲಿ ನಾಯಿ ಅದು. ಉದ್ದ ಉಗುರಿದ್ದುದರಿಂದ ಶಿಕಾರಿಗೆ ಹೇಳಿ ಮಾಡಿಸಿದ ನಾಯಿಯೆಂದು ನೋಣಯ್ಯನೇ ಹೊಗಳುತ್ತಿದ್ದ. ಒಂದು ಬಾರಿ ಅದು ನಮ್ಮ ಹಿತ್ತಲಲ್ಲೇ ಸಾಧಾರಣ ಗಾತ್ರದ ಹುಲಿಯೊಂದರ ಬಾಯಿಗೆ ಸಿಕ್ಕಿತ್ತು. ಆದರೂ ವೀರಾವೇಶದಿಂದ ಹೋರಾಡಿ, ಮೈ ತುಂಬಾ ಗಾಯ ಮಾಡಿಕೊಂಡು ಪಾರಾಗಿ ಬಂದಿತ್ತು. ಅಂಥ ನಾಯಿಗೆ ನೋಣಯ್ಯ ಒಂದು ದಿನವೂ ಗಂಜಿ ಹಾಕಿದವನಲ್ಲ. ಅದು ತನ್ನ ಆಹಾರವನ್ನು ತಾನೇ ಸಂಪಾದಿಸುತ್ತಿತ್ತು. ನಮ್ಮೂರಿನ ಸಾಹುಕಾರರೊಬ್ಬರ ಮನೆಯಲ್ಲಿ ಒಂದು ಮಧ್ಯಾಹ್ನ ಕೆಲಸದವರೆಲ್ಲ ಊಟಕ್ಕೆ ಕುಳಿತಿದ್ದಂತೆಯೇ ಆ ನಾಯಿ ಕೊಟ್ಟಿಗೆಯಿಂದ ಒಂದು ಹಲಸಿನ ಹಣ್ಣನ್ನು ಲಪಟಾಯಿಸಿತ್ತು. ಕಂಡವರೆಲ್ಲ ಮೂಗಿನ ಮೇಲೆ ಬೆರಳಿಟ್ಟು ಕಂಗಾಲಾಗುವಂತೆ ಸುಮಾರು ದೂರದವರೆಗೆ ಹಲಸಿನ ಹಣ್ಣನ್ನು ಬಾಯಿ ಮತ್ತು ಮುಂಗಾಲುಗಳಲ್ಲೇ ಹಿಡಿದು ಎತ್ತಿಕೊಂಡು ಹೋಗಿ ಸಾರ್ವಜನಿಕವಾಗಿ ಚಪ್ಪರಿಸಿ ತಿಂದಿತ್ತು.

ಕೋವಿಯ ಶಬ್ದ ಆಗಿದ್ದು ನಮ್ಮ ತೋಟದಲ್ಲೇ. ''ಶಬ್ದ ಕೇಳಿದರೆ ಯಾವುದೋ ಪ್ರಾಣಿಗೆ ತೋಟೆ ತಾಗಿರುವಂತಿದೆ. ಹಂದಿಯೇ ಸತ್ತಿದ್ದರೆ ಒಳ್ಳೆಯದಿತ್ತು'' ಅಪ್ಪ ನಿದ್ದೆಗಣ್ಣಲ್ಲೇ ಗೊಣಗಿದರು. ''ಈಡಿನ ವಾಸನೆಗೆ, ಶಬ್ದಕ್ಕೆ, ನೋಣಯ್ಯನ ನಾಯಿಯ ಜೋರಿಗೆ ಹೆದರಿ ಹಂದಿ ತೋಟದೊಳಗೇ ನುಸುಳಿರಲಿಕ್ಕಿಲ್ಲ'' ಎಂದುಕೊಂಡು ಮುಸುಕೆಳೆದ.

* * *

ಕತ್ತಲ ತೆರೆ ಸರಿಯುತ್ತಿದ್ದಂತೆಯೇ ನೋಣಯ್ಯ ''ಭಟ್ರೇ...'' ಎಂದು ಕರೆಯುತ್ತಾ ನಮ್ಮ ಮನೆಯಂಗಳಕ್ಕೆ ಕಾಲಿಟ್ಟ. ಮೂಗಿಗೇ ಅಡರುತ್ತಿದ್ದ ಚಿಮಿಣಿ ದೀಪದ ಹೊಗೆಯಿಂದ ತಪ್ಪಿಸಿಕೊಳ್ಳುತ್ತ ಓದುತ್ತಿದ್ದ ನಾನು ತಲೆಯೆತ್ತಿ ನೋಡಿದೆ. ಅಂಗಳ ಗುಡಿಸುತ್ತಿದ್ದ ಅಮ್ಮ ಕೂಡ ''ಇಷ್ಟು ಬೇಗ ಏನು ಬಂದ ? ಮಗುವಿಗೇನಾದರೂ ಹುಷಾರಿಲ್ಲವೇ ?'' ಎಂಬ ಆತಂಕವನ್ನು ವ್ಯಕ್ತಪಡಿಸಿದರು. ರಾತ್ರೆಯಿಡೀ ನಿದ್ರೆಗೆಟ್ಟ ಕುರುಹು ಮುಖದ ಮೇಲಿತ್ತು. ವೀಳ್ಯದೆಲೆ ತಿಂದೂ ತಿಂದೂ ಕೆಂಪಾದ ಹಲ್ಲುಗಳನ್ನು ಪ್ರದರ್ಶಿಸುತ್ತಲೇ ನೋಣಯ್ಯ ಮಾತನಾಡಿದ :

''ಭಟ್ರೇ, ನಿನ್ನೆ ರಾತ್ರಿ ನಿಮ್ಮ ತೋಟದಲ್ಲೇ ಹಂದಿಗೆ ಈಡು ಹೊಡೆದೆ. ಪೆಟ್ಟು ಬಿದ್ದಿರಬೇಕು. ಆದರೂ ತಪ್ಪಿಸಿಕೊಂಡು ಓಡಿತು. ಇಡೀ ರಾತ್ರಿ ಟಾರ್ಚ್ ಹಾಕಿ ಹುಡುಕಿದರೂ ಸಿಗಲಿಲ್ಲ. ಪೆಟ್ಟಾದ ಹಂದಿ ಭಾರೀ ಅಪಾಯಕಾರಿ.'' ನೋಣಯ್ಯನ ಮುಖದಲ್ಲಿ ಇಣುಕಿದ್ದ ಗಾಬರಿ ಅಪ್ಪನ ಮುಖಕ್ಕೂ ರವಾನೆಯಾಯಿತು. ಪೆಟ್ಟಾದ ಹುಲಿಯಂತೆ ಹಂದಿಯೂ ಅಪಾಯಕಾರಿಯಾಗಿರಬೇಕೆಂದು ತರ್ಕಿಸಿದೆ.

ಪೆಟ್ಟಾದ ಹಂದಿ ಸಾಯುವುದು ಖಂಡಿತ. ಅದು ತನ್ನ ಕೈಗೆ ಸಿಗದೆ ಬೇರೆಯವರು ಎಗರಿಸಿದರೆ ಭಾರೀ ಲುಕ್ಸಾನು ಆಗುವುದೆಂಬ ಚಿಂತೆ ಅವನಿಗೆ. ಅಮ್ಮ ಮಾಡಿಕೊಟ್ಟ ಬಿಸಿ ಬಿಸಿ ಚಹಾ ಕುಡಿಯುವಾಗಲೂ ಚಡಪಡಿಸುತ್ತಿದ್ದ.

ಹಂದಿಯು ನೋಣಯ್ಯನ ಕೋವಿಯ ರುಚಿಯನ್ನು ಅನುಭವಿಸಿದೆ ಎಂಬ ವರ್ತಮಾನವನ್ನು ಕೇಳಿಯೇ ಪುಳಕಿತರಾದ ನಾವು ಅಕ್ಕಪಕ್ಕದ ಮನೆಯವರನ್ನೆಲ್ಲ ಕೂಡಿಕೊಂಡು, ಮಕ್ಕಳು ಮರಿಗಳೆನ್ನದೆ ದೊಡ್ಡ ನಿಧಿಯನ್ನು ಹುಡುಕಲೆಂಬಂತೆ ಹೊರಟೆವು. ಗಾಯಗೊಂಡಿರುವ ಕಾರಣ ಹೆಚ್ಚು ದೂರ ಓಡಿರಲಿಕ್ಕಿಲ್ಲ ಎಂದು ನೋಣಯ್ಯ ಹೇಳಿದ್ದರಿಂದ, ಆತ ಹಂದಿ ಓಡಿತೆಂದು ತೋರಿಸಿದ ದಿಕ್ಕಿನಲ್ಲಿ ಹುಡುಕುತ್ತಾ ಸಾಗಿದೆವು. ಪ್ರತಿಯೊಂದು ಪೊದೆಗೂ ಕೋಲಿನಿಂದ ಬಡಿಯುತ್ತಾ, ಅವು ಅಲುಗಾಡಿದಾಗ ಒಂದಿಷ್ಟು ಅಂಜಿಕೆ ಬೆರೆತ ಕುತೂಹಲದಿಂದ ನೋಡುತ್ತಾ, ಈಗ ಚಿಮ್ಮಿ ಓಡುವುದೆಂದು ಕಾಯುತ್ತಾ ಹದ್ದಿನಗಣ್ಣಿನಿಂದ ಹಂದಿಯನ್ನು ಅರಸಿದೆವು. ಕಾಡಿನ ಬದಿ ಸಾಧಾರಣ ಗಾತ್ರದ ಬಂಡೆಯನ್ನು ಕಂಡರೂ ಹಂದಿಯಂತೆ ಭಾಸವಾಗಿ ಬೆಚ್ಚಿಬೀಳುತ್ತಿದ್ದೆವು. ಮನೆಯ ಹತ್ತಿರದ ಕಾಡಿನ ಪೊದೆಗಳನ್ನೆಲ್ಲ ಹುಡುಕಿ ಸುಸ್ತಾಗಿ ಕೊನೆಗೆ ತೋಟಕ್ಕೆ ಇಳಿದೆವು.

ಅಡಿಕೆಗೆ ರೇಟೂ, ಕಳ್ಳರ ಕಾಟವೂ ಹೆಚ್ಚಾಗಿದ್ದ ಸಂದರ್ಭದಲ್ಲಿ ತೋಟದ ಕಾವಲಿಗೆಂದು ನಮ್ಮ ದೊಡ್ಡಪ್ಪ ಒಂದು ಗುಡುಂಬು ಕಟ್ಟಿಸಿದ್ದರು. ಅದನ್ನು ನಾವು 'ಕಾವಲಿನ ಬುರುಜು' ಎಂದು ಅಣಕಿಸುತ್ತಿದ್ದೆವು. ಆಗೀಗ ಅದರಲ್ಲಿ ಕುಳಿತು ನಾವು

**ಅನಂತ ಹುದೆಂಗಜೆ**

ಪರೀಕ್ಷೆಗೆ ಓದಿಕೊಳ್ಳುವುದಿತ್ತು. ರಾತ್ರಿ ಕೆಳಗಡೆ ಅಗುಡೆ ಹಾಕಿ ಆ ಕೆಂಡದ ಬಿಸಿಗೆ ಬೆಚ್ಚಗೆ ಮಲಗುವುದೂ ಇತ್ತು. ನಮ್ಮ ನಿದ್ರೆಯನ್ನು ನೋಡಿದವರು, ''ಕಾಯುವವರನ್ನೇ ಕಳ್ಳರು ಹೊತ್ತೊಯ್ದರೂ ತಿಳಿಯಲಿಕ್ಕಿಲ್ಲ'' ಎಂದು ಮೂದಲಿಸುತ್ತಿದ್ದರು.

ಆ ಗುಡುಂಬಿನ ದಕ್ಷಿಣಕ್ಕೆ ವಿಶಾಲವಾದ ತೆಂಗಿನ ತೋಪು. ''ಹಂದಿ ಇಲ್ಲಿ ಇದ್ದರೂ ಇರಬಹುದು'' ಎಂಬ ಶಂಕೆಯನ್ನು ಸಂಜೀವ ವ್ಯಕ್ತಪಡಿಸಿದ. ಅಷ್ಟು ಹೊತ್ತಿಗೆ ಕೇರದ ಕಡೆಯಿಂದ ಬಂದ ಗೋಪಾಲನೂ ವಿಷಯ ತಿಳಿದು ಇಳಿಜಾರಾದ ತೋಪಿನ ಕೆಳಬದಿಯಿಂದ ತನ್ನ ಪತ್ತೇದಾರಿ ಕೆಲಸ ಶುರುಮಾಡಿದ. ನಾವು ಮೇಲಿನಿಂದ ಹಣಕುತ್ತಿದ್ದೆವು. ಸತ್ತ ತೆಂಗಿನ ಗಿಡದ ಗುಂಡಿಯೊಂದರಲ್ಲಿ ಬೃಹದ್ಗಾತ್ರದ ಹಂದಿ ಬಿದ್ದಿರುವುದು ಒಬ್ಬ ಹುಡುಗನಿಗೆ ಕಂಡಿತು. ನಮ್ಮ ಸನ್ನೆಯನ್ನು ಗಮನಿಸಿದ ನೋಣಯ್ಯ ಹಂದಿಯು ಸತ್ತಿರಬೇಕೆಂದು ಭಾವಿಸಿ ಮೆಲ್ಲನೆ ಅದರ ಬಳಿಗೆ ಹೋದ. ಅವನು ಗುಂಡಿಯನ್ನು ಸಮೀಪಿಸಲು ನಾಲ್ಕು ಹೆಜ್ಜೆ ಇರುವಾಗಲೇ ಧಡಕ್ಕನೆದ್ದು ನಿಂತ ಹಂದಿ ಬಿಲ್ಲಿನಿಂದ ಬಿಟ್ಟ ಬಾಣದಂತೆ ಹೊಂಡದಿಂದ ಹೊರಗೆ ನೆಗೆದು ಕೆಳಗೆ ಓಡಿತು. ಕೆಸರಿನ ಮುದ್ದೆಯೇ ಜಿಗಿದಂತೆ ಕಂಡಿದ್ದರಿಂದ ನೋಣಯ್ಯನೂ ಗಾಬರಿಗೊಂಡು ಎತ್ತಿದ ಹೆಜ್ಜೆಯನ್ನು ಹಿಂದಿಟ್ಟ.

ಆವೇಶದಿಂದ ಓಡಿದ ಹಂದಿ ಪ್ರಾಣಭಯದಿಂದ ಗೋಪಾಲನ ಮೇಲೆ ಆಕ್ರಮಣ ಮಾಡಿತು. ಅದರಿಂದ ತಪ್ಪಿಸಿಕೊಳ್ಳಲು ಓಡಿದ ಗೋಪಾಲ ಮುಂದೆ ಸಿಕ್ಕ ಬೋಗಿಯ ಮರದ ಟೊಂಗೆ ಹಿಡಿದು ನೇತಾಡುತ್ತಾ ಮರವನ್ನೇರಲು ಪ್ರಯತ್ನಿಸಿದ. ಮುಂಗಾಲುಗಳನ್ನು ಮೇಲಕ್ಕೆತ್ತಿ ಜಿಗಿದ ಹಂದಿ ಗೋಪಾಲನ ಬಲತೊಡೆಗೆ ಬಾಯಿಹಾಕಿ ಮುಷ್ಟಿಗಾತ್ರದ ಮಾಂಸವನ್ನು ಕಿತ್ತುಹಾಕಿತು. ಇಷ್ಟು ಸಾಲದೆಂಬಂತೆ ವಿದ್ಯುತ್ ಬೇಲಿಯ ಕಂಬಕ್ಕೆ ಡಿಕ್ಕಿ ಹೊಡೆದು, ಅದನ್ನು ಉರುಳಿಸಿ ರಸ್ತೆಗೆ ಇಳಿದು ಅಲ್ಲಿಂದ ಗುಡ್ಡಕ್ಕೆ ಓಟಕಿತ್ತಿತು.

ನೆತ್ತರು ಸುರಿಯುತ್ತಿದ್ದ ತೊಡೆಯನ್ನು ನೋಡಿ ಗೋಪಾಲನಿಗೆ ಕಣ್ಣುಕತ್ತಲೆ ಬಂದಂತಾಯಿತು. ನೋವಿನಿಂದ ನರಳುತ್ತಾ, ''ಅಯ್ಯಯ್ಯೋ'' ಎಂದು ಕೂಗಿ ತಾನು ಹಿಡಿದಿದ್ದ ಟೊಂಗೆಯನ್ನು ಕೈಬಿಟ್ಟು ದೊಪ್ಪನೆ ನೆಲದ ಮೇಲೆ ಬಿದ್ದ.

ಸಂಜೀವ ತನ್ನ ಹೆಗಲ ಮೇಲಿದ್ದ ಬೈರಾಸನ್ನು ಕೊಡಕಿ, ಗೋಪಾಲನ ತೊಡೆಯ ಗಾಯಕ್ಕೆ ಬಿಗಿಯಾಗಿ ಕಟ್ಟಿದ. ಗೋಪಾಲ ಹೆದರಿ ನಡುಗುತ್ತಿದ್ದ. ಅವುಡುಗಚ್ಚಿ ನೋವನ್ನು ತಡೆದುಕೊಳ್ಳಲು ಪ್ರಯತ್ನಿಸುತ್ತಿದ್ದ. ಒಬ್ಬರು ಅವನನ್ನು ಬೈಕಿನಲ್ಲಿ ಆಸ್ಪತ್ರೆಗೆ ಕರೆದೊಯ್ಯುತ್ತಿದ್ದಂತೆಯೇ, ''ಇನ್ನು ಈ ಹಂದಿಯನ್ನು ಬಿಡುವಂತೆಯೇ ಇಲ್ಲ'' ಎಂದು ನೋಣಯ್ಯ ಘೋಷಿಸಿದ್ದರಿಂದ ಹಂದಿ ಬೇಟೆ ಹೊಸ ಹುರುಪಿನೊಂದಿಗೆ ಮುಂದುವರೆಯಿತು.

ಗುಡ್ಡ ಹತ್ತಿದ ಹಂದಿಯ ಅಡಗುದಾಣವನ್ನು ಪತ್ತೆಹಚ್ಚುವುದು ಕಷ್ಟವಾಯಿತು. ಗೋಪಾಲನ ಮೇಲೆ ಅದು ಆಕ್ರಮಣ ಮಾಡಿದ್ದರಿಂದ ಪೊದೆಗಳಿಗೆ ನುಗ್ಗುವ ಧೈರ್ಯ ಯಾರಿಗೂ ಇರಲಿಲ್ಲ. ಬೆಡಿಯನ್ನು ಹಾಗೂ ಮದ್ದಿನ ಚೀಲವನ್ನು ಹೆಗಲಿಗೆ ನೇತು ಹಾಕಿಕೊಂಡು ನೋಣಯ್ಯ ದೊಡ್ಡದೊಂದು ಮರ ಹತ್ತಿದ. ಅಗಲವಾದ ಟೊಂಗೆಯೊಂದನ್ನು ಆಧರಿಸಿ ನಿಂತು ಸುತ್ತಲೂ ದೃಷ್ಟಿಹರಿಸಿದ. ಸ್ವಲ್ಪ ಹೊತ್ತಾದ ಮೇಲೆ, ''ದೂರ ಪೋಲೆ'' ಎಂದು ಕಿರಿಚುತ್ತಾ ಪೊದರೊಂದಕ್ಕೆ ಗುರಿಯಿಟ್ಟು ಈಡು ಹೊಡೆದ. ಆ ಪೊದರೇ ಬೇರು ಸಮೇತ ಕಿತ್ತು ಚಿಮ್ಮಿದಂತೆ ಒಂದೇ ಏಟಿಗೆ ಎದ್ದು ಕಾಲಿಗೆ ಕೆಲಸ ಕೊಟ್ಟ ಹಂದಿ ಇನ್ನಷ್ಟು ಮೇಲೆ ಓಡಿತು. ''ಗುರಿ ತಪ್ಪಿತು'' ಎಂದ ನೋಣಯ್ಯನ ಧ್ವನಿಯಲ್ಲಿ ನಿರಾಸೆಯಿತ್ತು.

ಇವರೆಲ್ಲ ತನ್ನನ್ನು ಕೊಲ್ಲಲೆಂದೇ ಬೆನ್ನು ಹತ್ತಿದ್ದಾರೆಂದು ಹಂದಿಗೂ ಅರ್ಥವಾಗಿರಬೇಕು. ರಾತ್ರಿ ಹೊಟ್ಟೆಗೆ ಬಿದ್ದ ಏಟಿನಿಂದಾಗಿ ತುಂಬ ದೂರ ಓಡುವುದಕ್ಕಾಗುತ್ತಿರಲಿಲ್ಲ. ಏರುತ್ತಾ, ಏದುತ್ತಾ ಒಂದು ಬೋಳು ಜಾಗದಲ್ಲಿ ಮಗ್ಗುಲಾಗಿ ಬಿದ್ದುಕೊಂಡಿತು. ಆಗಾಗ ಹೂಂಕರಿಸುತ್ತಾ, ಹೆದರಿಸಲು ಯತ್ನಿಸುತ್ತಾ, ತಲೆಯೆತ್ತಿ ಬಿದ್ದಲ್ಲಿಂದ ಎದ್ದೋಡಲು ಪ್ರಯಾಸಪಟ್ಟು ಮತ್ತೆ ಮುಗ್ಗರಿಸಿ ಬೀಳುತ್ತಿತ್ತು.

ಮರದ ಮೇಲಿದ್ದ ನೋಣಯ್ಯ ಅಲ್ಲೇ ಕುಳಿತು ಬೆಡಿಗೆ ತೋಟೆ ತುಂಬಿಸಿಕೊಂಡು ಸರಸರನೆ ಕೆಳಗಿಳಿದು, ''ಪಂಜಿ ಓಲುಂಡು ?'' ಎಂದು ಕೇಳುತ್ತಾ ಬಂದ. ಅಷ್ಟು ದೊಡ್ಡ ಗಾತ್ರದ ಹಂದಿಯನ್ನು ಹತ್ತಿರದಿಂದ ಕಂಡು ನಾವೆಲ್ಲ ಆಶ್ಚರ್ಯಪಡುತ್ತಿದ್ದರೆ, ಅದರಲ್ಲಿ ಎಷ್ಟು ಕೆ.ಜಿ. ಮಾಂಸ ಸಿಗಬಹುದೆಂದು ನೋಣಯ್ಯ ಲೆಕ್ಕ ಹಾಕುತ್ತಿದ್ದ.

ನಮ್ಮ ಸೈನ್ಯವನ್ನು ನೋಡಿದ ಹಂದಿ ಗಾಬರಿಗೊಂಡಿತು. ಸೆರೆಸಿಕ್ಕ ಕೈದಿಯಂತೆ ಜಡಪಡಿಸಿತು. ಸಾವಿನ ಬಾಯಿಯಿಂದ ಪಾರಾಗುವ ಕೊನೆಯ ಪ್ರಯತ್ನವೆಂಬಂತೆ ಜೋರಾಗಿ ಗುಟುರು ಹಾಕುತ್ತಾ ಎದ್ದಾಗ ಮಕ್ಕಳೆಲ್ಲ ಚೆಲ್ಲಾಪಿಲ್ಲಿಯಾಗಿ ಓಡಿದರು. ತಮ್ಮ ಮಾತು ಕೇಳದೆ ಹಿಂಬಾಲಿಸಿ ಬಂದಿದ್ದಕ್ಕೆ ದೊಡ್ಡವರಿಂದ ಬೈಸಿಕೊಂಡರು. ಹಂದಿ ಮತ್ತೆ ಕುಸಿದುಬಿತ್ತು.

ಆ ಹಂದಿಯ ಭೀಮಗಾತ್ರವನ್ನೂ, ಬಲಿಷ್ಠ ದೇಹವನ್ನೂ, ಉದ್ದನೆಯ ಕೋಡು ಹಾಗೂ ದೊಡ್ಡ ಮುಸುಡಿಯನ್ನು ನೋಡಿಯೇ ಕೆಲವರಿಗೆ ಅಂಜಿಕೆ ಉಂಟಾಗಿತ್ತು. ಯಾವಾಗಲೂ ಕತ್ತಲಾಗುವ ಮೊದಲೇ ಮನೆಯ ಎಲ್ಲ ಕಿಟಕಿ-ಬಾಗಿಲುಗಳನ್ನು ಭದ್ರಪಡಿಸಿಕೊಳ್ಳುವ ನಮ್ಮ ಪಕ್ಕದ ಮನೆಯವರಂತೂ ''ಇನ್ನೊಂದು ಈಡು ಹೊಡೆ'' ಎಂದು ನೋಣಯ್ಯನಿಗೆ ಗಾಳಿ ಹಾಕುತ್ತಿದ್ದರು.

''ನೀವೆಲ್ಲ ಹೀಗೆ ಸುತ್ತುಗಟ್ಟಿ ನಿಂತರೆ ನಾನು ಹೇಗೆ ಈಡು ಹೊಡೆಯಲಿ ? ಮಕ್ಕಳು ದೂರ ಹೋಗಲಿ. ನೀವೆಲ್ಲ ಈಚೆಗೆ ಬನ್ನಿ. ಇನ್ನು ಅದು ಎದ್ದು ಓಡುವುದಿಲ್ಲ'' ಎಂದು ಭರವಸೆ ನೀಡಿದ ನೋಣಯ್ಯ ಹಂದಿಯ ಬಳಿಗೆ ಹೋಗಿ ಅದರ ಮೆದುಳಿಗೆ ಹೊಕ್ಕುವಂತೆ ಕಿವಿಯ ಪಕ್ಕ 'ಢಂ' ಎಂದು ಈಡು ಹೊಡೆದ. ಹಂದಿ ಒಂದು ಬಾರಿ ಮೇಲಕ್ಕೆಗರಿ ಬಿತ್ತು. ಕಿವಿಯ ಬಳಿ ರಕ್ತ ಜಿನುಗತೊಡಗಿತ್ತು. ಅದು ವಿಕಾರವಾಗಿ ಅರಚುವ ಸ್ವರ ಎದೆ ಇರಿಯುತ್ತಿತ್ತು. ಏದುಸಿರು ಬಿಡುತ್ತಾ ಜೀವ ಉಳಿಸಿಕೊಳ್ಳಲು ಹಂದಿ ಪ್ರಯತ್ನಿಸುತ್ತಿದ್ದರೆ, ನಾವೆಲ್ಲ ಅದು ಬೇಗನೆ ಸಾಯಲಿ ಎಂದು ಹಾರೈಸುತ್ತಿದ್ದೆವು. ಮಾಂಸ ತಿನ್ನದ ನಮಗೆ ಹಂದಿ ಸತ್ತರೆ ಆಗುವ ಏಕೈಕ ಲಾಭವೆಂದರೆ ತೋಟದಲ್ಲಿ ಅದರ ಅಗೆತ ನಿಲ್ಲುತ್ತದೆ !

ನೋಣಯ್ಯ ಇನ್ನೊಮ್ಮೆ ಬೆಡಿಯನ್ನು ಸಿದ್ಧಪಡಿಸಿ ಹಂದಿಯ ಎದೆಗೆ ಗುರಿಯಿಟ್ಟು ಹೊಡೆದ. ಹಂದಿಯ ದೇಹ ಅರ್ಧ ಅಡಿ ಮೇಲೆದ್ದು ನೆಲಕ್ಕೆ ಬಿತ್ತು. ಆದರೂ ಅದು ಸಾಯಲೊಲ್ಲದು.

''ಇನ್ನು ನನ್ನ ಬಳಿ ಹೆಚ್ಚು ತೋಟೆ ಇಲ್ಲ. ಬೆಡಿಯಿಂದ ಬಾರಿಸಿ ಪ್ರಯೋಜನವಿಲ್ಲ. ಇಷ್ಟು ಪೆಟ್ಟಾದರೂ ಸತ್ತಿಲ್ಲವೆಂದರೆ ಇದು ದೈವದ ಹಂದಿಯೇ ಇರಬೇಕು. ಪಂಜುರ್ಲಿ ಭೂತವೇ ಹಂದಿಯ ರೂಪದಲ್ಲಿ ಬಂದಿರಬೇಕು'' ಎಂದು ನೋಣಯ್ಯ ತನ್ನ ಅನುಮಾನವನ್ನು ತೋಡಿಕೊಂಡ. ಪಕ್ಕದಲ್ಲೇ ರಕ್ತೇಶ್ವರಿ ದೈವದ ಗುಡಿ ಬೇರೆ. ''ಪಂಜುರ್ಲಿಯಾದರೇನು ? ರಕ್ತೇಶ್ವರಿಯಾದರೇನು ? ಈ ಹಂದಿ ಸತ್ತರೆ ಎರಡೂ ದೈವಗಳಿಗೆ ಒಂದೊಂದು ತೆಂಗಿನಕಾಯಿ ಒಪ್ಪಿಸಿ ಪರ್ವ ಮಾಡುತ್ತೇನೆ'' ಎಂದು ಹರಿಭಟ್ಟರು ಹರಕೆ ಹೊತ್ತುಕೊಂಡರು.

ನಮ್ಮೆಲ್ಲರಲ್ಲೂ ವಿಚಿತ್ರ ರಣೋತ್ಸಾಹ ಮೊಳೆಯಿತು. ಸಾಯುತ್ತಾ ಬಿದ್ದಿದ್ದ ಹಂದಿಗೆ ಆಳಿಗೊಂದು ಕಲ್ಲನ್ನು ಶಕ್ತಿಮೀರಿ ಎತ್ತಿಹಾಕಿದೆವು. ಅದು ಕಿಮಕ್ ಅನ್ನಲಿಲ್ಲ. ಕಡೆಗೆ ಸಂಜೀವ ದೊಡ್ಡ ಗಾತ್ರದ ಸೈಜುಕಲ್ಲನ್ನು ಹಂದಿಯ ತಲೆಯ ಮೇಲೆ ಹೊತ್ತುಹಾಕಿ ಅದರ ಪ್ರಾಣಪಕ್ಷಿಗೆ ಮುಕ್ತಿ ಕೊಟ್ಟ.

ತೋಟಗಳಲ್ಲಿ ಕೆಲಸ ಮಾಡುತ್ತಿದ್ದವರು, ''ಪಂಜಿ ಸೈತ್ ಂಡ್‌ಗೆ'' ಎಂಬ ಸುದ್ದಿಯನ್ನು ಒಬ್ಬರಿಂದೊಬ್ಬರಿಗೆ ಪ್ರಚಾರ ಮಾಡುತ್ತಾ ಹಂದಿಯ ಮಾಂಸದಲ್ಲಿ ಪಾಲು ಪಡೆಯುವ ಆಸೆಯಿಂದ ಓಡುನಡಿಗೆಯಲ್ಲಿ ನೆಲ್ಲಿಗುಡ್ಡಕ್ಕೆ ಬಂದರು. ಹಂದಿಯನ್ನು ಪಾಲು ಮಾಡುವ ವ್ಯವಹಾರ ಆರಂಭವಾಗಿತ್ತು. ಅದರಲ್ಲಿ ಆಸಕ್ತಿಯಿಲ್ಲದ ನಾವು ಮನೆಗೆ ಬಂದೆವು.




ಅನಂತ ಹುದೆಂಗಜೆ

ಸಹಸಂಪಾದಕ, 'ಮಂಜುವಾಣಿ' ಮಾಸಪತ್ರಿಕೆ, ಉಜಿರೆ - ೫೭೪ ೨೪೦

ಬೆಳ್ತಂಗಡಿ ತಾಲೂಕು, ದಕ್ಷಿಣ ಕನ್ನಡ


## ಆರಂಭ

ದಾರಿ ತಂತಾನೇ ತೆರೆಯುತ್ತದೆ

ಹೆಜ್ಜೆ ಕದಲಿಸಬೇಕಷ್ಟೆ

ಭಾವನೆಗಳೆಲ್ಲಾ ಕಾವ್ಯವಾಗುತ್ತವೆ

ಮನಸು ಮಾಗಬೇಕಷ್ಟೇ


**ವಾಸುದೇವ ನಾಡಿಗ್**

ಜವಾಹರ್ ನವೋದಯ ವಿದ್ಯಾಲಯ

ಏನಿಗದಲೆ - ೫೬೩ ೧೨೫

ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ

# ಕಳ್ಳ ಕರಿಯಪ್ಪನ ಮುಕ್ತ ಸಂದರ್ಶನ

ನಾನು ಅನೇಕ ಕಥೆ, ಕವನ, ಲೇಖನ, ಪ್ರಬಂಧ, ವಿಮರ್ಶಾತ್ಮಕ ಬರಹಗಳನ್ನು ಬರೆದು ಅನೇಕ ಪತ್ರಿಕೆಗಳಿಗೆ ಕಳುಹಿಸುತ್ತಿದ್ದೆ. ಅವುಗಳೆಲ್ಲಾ ವಿಷಾದಗೊಂಡು ವಾಪಸ್ ಬರುತ್ತಲೇ ಇದ್ದವು. ಅತ್ಯಂತ ಅಪರೂಪವಾದ ಲೇಖನವೊಂದನ್ನು ಈ ಸಾರಿ ಬರೆಯಬೇಕು. ಅದು ಸಂಪಾದಕರಿಂದ ತಿರಸ್ಕೃತವಾಗಿ ಬರಬಾರದು ಎಂದು ವಸ್ತುನಿಷ್ಠ ಬರಹಕ್ಕೆ ತಿಣುಕಾಡಿದೆ. ಬರಹ ವಸ್ತು ಸಿಗಲೇ ಇಲ್ಲ.

ಅಷ್ಟರಲ್ಲಿಯೇ ಹೆಂಡತಿ ಪ್ರೇಮಿ ಒಳ ಬಂದವಳೇ, ''ಕಳ್ಳ ಕರಿಯಪ್ಪನನ್ನು ಇಂದು ಜೈಲಿನಿಂದ ಬಿಡುಗಡೆ ಮಾಡಲಾಗಿದೆಯಂತೆ'' ಎಂದಳು. ಸ್ವಲ್ಪ ಹೊತ್ತು ಅವಳ ಮುಖವನ್ನೇ ನೋಡುತ್ತ ನಿಂತುಬಿಟ್ಟೆ. ಒಮ್ಮೆಲೇ ಏನೋ ಉಪಾಯ ಹೊಳೆಯಿತು. ಪೇಪರ್, ಪೆನ್, ಪ್ಯಾಡ್ ತೆಗೆದುಕೊಂಡು ಹೆಂಡತಿಗೆ ಥ್ಯಾಂಕ್ಸ್ ಹೇಳಿ ಹೊರನಡೆದೆ. ಪ್ರೇಮಿ ಬಾಯಿ ತೆರೆದುಕೊಂಡು ಬೆರಗಾಗಿ ನೋಡುತ್ತಿದ್ದಳು.

* * *

''ನನಗೆ ತುಂಬಾ ಆಶ್ಚರ್ಯವಾಗುತ್ತಿದೆ. ನಿಮ್ಮಂತಹ ಹಿರಿಯ ಸಾಹಿತಿಗಳು ನಮ್ಮ ಮನೆಗೆ ಬಂದಿರುವುದಕ್ಕೆ'' ಕರಿಯ ಸೌಜನ್ಯ ದಿಂದಲೇ ನನಗೆ ಪೂಸಿಹೊಡೆದ. ಅವನು ನನ್ನನ್ನು ಹಿರಿಯ ಸಾಹಿತಿಗಳ ಸಾಲಿಗೆ ಸೇರಿಸಿದ್ದಕ್ಕಾಗಿ ಸಂತೋಷಗೊಂಡೆ. ಉಬ್ಬಿಹೋದೆ.

''ಹೀಗೆಯೇ ನಿನ್ನನ್ನು ನೋಡಿ ಒಂದಷ್ಟು ಮಾತನಾಡಬೇಕು ಎಂದೆನಿಸಿತು. ಅದಕ್ಕೆ ಬಂದೆ'' ಒತ್ತಾಯ ಪೂರ್ವಕವಾಗಿ ನಗು ತಂದುಕೊಂಡೆ.

''ನನ್ನೊಂದಿಗೆ ಮಾತನಾಡುವುದೇ ? ಅದೇನು ಹೇಳಬೇಕು ?''

''ಏನಿಲ್ಲ. ನಿನ್ನನ್ನು ಯಾವ ಅಪರಾಧಕ್ಕಾಗಿ ಜೈಲಿಗೆ ಹಾಕಿದ್ದರು ಗೊತ್ತಾಗಬೇಕಿತ್ತು.''

■ ಭೋಜರಾಜ ಸೊಪ್ಪಿಮಠ



''ಯಾವ ಮಹಾಸಾಧನೆಗಾಗಿ ಅಂತ ಕೇಳಿ ಸ್ವಾಮಿ, ಅಪರಾಧಕ್ಕಾಗಿ ಅಲ್ಲ.''

''ನೀನು ಏನು ಹೇಳಿದಿ ಅಂತ ಅರ್ಥವಾಗಲಿಲ್ಲ.''

''ನೋಡಿ, ನಾನು ಕಳ್ಳತನ ಮಾಡಿದ್ದೆ. ಅದಕ್ಕಾಗಿ ನನ್ನನ್ನು ಜೈಲಿಗೆ ಹಾಕಿದ್ದರು. ಆದರೆ ನಮ್ಮ ಸಮಾಜ ಕಳ್ಳತನ ಎಂಬುದನ್ನು ಅಪರಾಧ ಎಂದು ಏಕೆ ಪರಿಗಣಿಸುತ್ತದೆಯೋ ನನಗಂತೂ ಗೊತ್ತಾಗುತ್ತಿಲ್ಲ. ನೀವು ಕೂಡಾ ಹಾಗೆಯೇ ಹೇಳಿದಿರಿ. ಸಂಗೀತ, ನೃತ್ಯ, ಅಭಿನಯ, ಕ್ರೀಡೆಗಳು ಹೇಗೆ ಒಂದೊಂದು ಕಲೆಯೋ ಹಾಗೆಯೇ ಈ ಕಳ್ಳತನವೆನ್ನುವುದು ಕೂಡಾ ಒಂದು ಕಲೆ. ಅದು ಎಲ್ಲರಲ್ಲಿಯೂ ಕಂಡುಬರುವುದಿಲ್ಲ. ಇತರ ಕಲೆಗಳನ್ನು ಸಾಧಿಸಬೇಕಾದರೆ ಏನೆಲ್ಲಾ ತೊಂದರೆಗಳನ್ನು ತೆಗೆದುಕೊಳ್ಳಬೇಕೋ ಹಾಗೆಯೇ ಈ ಕಲೆಗೆ ಅನೇಕ ತೊಡರುಗಳಿದ್ದು ಅವುಗಳನ್ನೆಲ್ಲಾ ಮೆಟ್ಟಿ ನಿಂತಾಗ ನಾವು ನಿರೀಕ್ಷಿಸಿದ ಗುರಿ ತಲುಪಲು ಸಾಧ್ಯ. ಕಳ್ಳತನದಲ್ಲಿ ನಾವು ಪಳಗಬೇಕಾದರೆ ಮೂಲಭೂತವಾಗಿ ನಮ್ಮಲ್ಲಿ ದೃಢ ನಿರ್ಧಾರ, ಛಲ, ಸತತ ಪ್ರಯತ್ನ, ಅಚಲವಾದ ನಂಬಿಕೆ ಇರಬೇಕು.''

''ಹೌದು. ನೀನು ಹೇಳುತ್ತಿರುವುದು ಸರಿ. ಕಳ್ಳತನ ಒಂದು ವಿದ್ಯೆ. ಅದೊಂದು ತಪಸ್ಸು. ಅದು ಎಲ್ಲರಿಗೂ ಸಿದ್ಧಿಸುವುದಿಲ್ಲ. ಏನೆಲ್ಲಾ ಕಷ್ಟಪಡಬೇಕು! ಎಷ್ಟೋ ವರ್ಷಗಳ ಸಾಧನೆಯ ನಂತರ ಅದು ನಮಗೆ ಕರಗತವಾಗುತ್ತದೆ. ಆದರೂ ಸಮಾಜ ಅದನ್ನು ಸಾಧನೆ ಅಂತ ಗೌರವಿಸುತ್ತಿಲ್ಲ. ಬದಲಾಗಿ ಅದನ್ನು ಅಪರಾಧವೆಂದು ಪರಿಗಣಿಸಲಾಗುತ್ತದೆ'' ಎಂದು ತುಂಬಾ ವಿಷಾದದಿಂದ ಹೇಳಿದೆ. ನನ್ನ ಈ ಮಾತುಗಳೇ ಅವನ ಮುಂದಿನ ಮಾತುಗಳಿಗೆ ಉತ್ತೇಜನ ನೀಡಿದಂತಾಯಿತು.

''ಹೌದು ಸ್ವಾಮಿ, ನಮ್ಮ ನಿರುತ್ಸಾಹವಿಲ್ಲದ ಪ್ರವೃತ್ತಿ, ಪರಿಶ್ರಮವನ್ನು ಎಲ್ಲಿಯೋ ನಿಮ್ಮಂತಹ ಕೆಲವರು ಮಾತ್ರ ಅರಿತುಕೊಳ್ಳುತ್ತಾರೆ. ನಮ್ಮ ಕೆಲಸಕ್ಕೆ ಗೌರವವೇ ಇಲ್ಲದಾಗಿದೆ.'' ಆ ಮಾತಿನಲ್ಲಿ ಅವನಿಗೆ ನಿಜವಾಗಿಯೂ ಸಂಕಟವಾಗುತ್ತಿತ್ತು.

''ಹೋಗಲಿ ಬಿಡು. ಈ ಸಮಾಜದ ನೀತಿಯೇ ಹೀಗೆ. ನಿಧಾನಗತಿಯ ಸ್ವಭಾವ. ಎಲ್ಲವನ್ನೂ ತಡವಾಗಿ ಗುರುತಿಸುವುದು. ನನ್ನಗನ್ನಿಸುತ್ತಿದೆ : ನಿನ್ನ ಈ ಶ್ರಮವನ್ನು ತಡವಾಗಿಯಾದರೂ ಗುರುತಿಸಬಹುದು. ಆದರೆ ನೀನು ಈ ಶ್ರಮಕ್ಕೆ ಬರುವಾಗಿನ ಸ್ಥಿತಿ ಹೇಗಿತ್ತು? ಮನೆಯಲ್ಲಿ ಮನೆಯ ಮತ್ತು ಹೊರಗಿನ ಸ್ಥಿತಿಯು ನಿನ್ನ ಕೆಲಸಕ್ಕೆ ಹೇಗೆ ಪೂರಕವಾಗಿತ್ತು'' ಪ್ರಶ್ನಿಸಿದೆ.

''ನನ್ನ ತಂದೆ ಮೂಲತಃ ಒಬ್ಬ ಪಿಕ್‌ಪಾಕೇಟ್. ನನ್ನ ತಾಯಿಯು ಕೆಲಸದವಳೆಂದು ಸ್ಥಿತಿವಂತರ ಮನೆಗೆ ಹೋಗಿ ಚೂರುಪಾರು ಕದ್ದು ತರುತ್ತಿದ್ದಳಂತೆ. ಒಂದು ಸಾರಿ ಜೈಲಿನಲ್ಲಿ ಇಬ್ಬರಿಗೂ ಭೇಟಿಯಾಯಿತು. ಕಣ್ಣುಗಳಲ್ಲಿಯೇ ಮಾತನಾಡಿಕೊಂಡರು. ಮೊದಲ ನೋಟದಲ್ಲಿಯೇ ಪರಿಚಯವಾಯಿತು. ಮಾತು ಸ್ನೇಹವಾಗಿ, ಸ್ನೇಹ ಪ್ರೀತಿಯಿಂದ ಮದುವೆಗೆ ಎಡೆ ಮಾಡಿಕೊಟ್ಟಿತು. ಅವರಿಬ್ಬರ ಪ್ರೀತಿಯ ಫಲವೇ ನಾನು. ನಾನು ಹುಟ್ಟಿ ಈ ಕಾಯಕದಲ್ಲಿ ತೊಡಗಿಕೊಂಡಾಗ ಆಗ ತಾನೇ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತ್ತು. ಜನರಲ್ಲಿ ನಿರಕ್ಷರತೆ, ಅಜ್ಞಾನ ಇತ್ತು. ಇವು ನನಗೆ ಪೂರಕವಾದ ವಿಷಯಗಳೆ. ಆದರೆ ಮುಖ್ಯವಾಗಿ ಜನರ ಹತ್ತಿರ ಹಣ ಇರಲಿಲ್ಲ. ಹೀಗೆ ಕಷ್ಟಕರವಾಗಿಯೇ ನನ್ನ ವೃತ್ತಿ ಆರಂಭವಾಯಿತು. ಮೊದಲು ತಂದೆ ನಡೆಸುತ್ತಿದ್ದ ಪಿಕ್‌ಪಾಕೆಟ್ ಕೆಲಸವನ್ನೇ ಪ್ರಾರಂಭಿಸಿದೆ. ಸ್ವಲ್ಪಮಟ್ಟಿಗೆ ಸಂಪಾದಿಸಲು ಪ್ರಾರಂಭಿಸಿದೆ. ನನ್ನ ತಂದೆಗೆ ಏನು ತೋಚಿತೋ ಏನೋ ಎಲ್ಲರೂ ವೃತ್ತಿಯನ್ನು ಅವಲಂಬಿಸುವುದಕ್ಕಿಂತ ಸ್ವಲ್ಪ ಅಭ್ಯಾಸ ಮಾಡಲಿ ಎಂದು ಖದೀಮ ನದೀಮ ಎಂಬುವವರ ಬಳಿ

ಕಳುಹಿಸಿದರು. ಅವರ ಬಳಿ ಅಭ್ಯಾಸ ತುಂಬಾ ಕಠಿಣವಾಗಿತ್ತು. ವೃತ್ತಿ ಪಾಠ ಹಾಗೂ ಪ್ರಾಯೋಗಿಕ ಪಾಠಗಳಿರುತ್ತಿದ್ದವು. ಪ್ರಾಯೋಗಿಕ ಪಾಠದಲ್ಲಿ ವಾರಕ್ಕೊಂದು ಬಾರಿಯಾದರೂ ನಾವು ಪಿಕ್‌ಪಾಕೆಟ್ ಮಾಡಲೇಬೇಕಾಗಿತ್ತು. ಫೀಯನ್ನು ಕೂಡಾ ಅದರಲ್ಲಿಯೇ ಮುಟ್ಟಿಸಲು ಪ್ರಯತ್ನಿಸುತ್ತಿದ್ದೆವು. ಹೇಗೋ ಕಷ್ಟಪಟ್ಟು ಅಭ್ಯಸಿಸಿ ಅವರಿಂದ 'ಉತ್ತಮ ತರಬೇತುದಾರ' ಎನ್ನಿಸಿಕೊಂಡೆ. ಇಂದಿನವರೆಗೂ ಅದೇ ವೃತ್ತಿ ಪಾಲಿಸಿಕೊಂಡು ಬಂದೆ'' ಎಂದು ಹೇಳಿ ದೀರ್ಘವಾದ ನಿಟ್ಟುಸಿರೊಂದು ಬಿಟ್ಟು ಮಾತು ನಿಲ್ಲಿಸಿದ.

''ಒಟ್ಟಿನಲ್ಲಿ ಮನೆಯ ಪರಿಸರವು ನಿಮ್ಮನ್ನು ಈ ಕಲೆಯಲ್ಲಿ ಸಾಧನೆಗೈಯಲು ಸಹಾಯ ಮಾಡಿತು. ಎಷ್ಟು ವರ್ಷ ನೀವು ಈ ಸಾಧನೆ ಮಾಡಿದ್ದೀರಿ ?'' ಅವನ ಮೌನಕ್ಕೆ ಕಡಿವಾಣ ಹಾಕಿದೆ.

''ಇದು ನನ್ನ ವೃತ್ತಿಜೀವನದ ಇಪ್ಪತ್ತೇಳನೇ ವರ್ಷ. ನನ್ನ ಎಂಟನೇ ವರ್ಷದಿಂದಲೇ ಕದಿಯಲು ಪ್ರಾರಂಭಿಸಿದ್ದೇನೆ.''

''ನಿಮ್ಮಂತೆ ಕಳ್ಳತನ ಮಾಡುವ ಇತರರ ಬಗ್ಗೆ ನಿಮ್ಮ ಅಭಿಪ್ರಾಯವೇನು ? ನಿಮ್ಮನ್ನು ಕಂಡರೆ ಸಹಿಸಲಾಗದವರು ಇದ್ದಾರೆಯೇ ? ನಿಮ್ಮ ಸಾಧನೆ ಅವರಿಗೆ ಮತ್ಸರ ಹುಟ್ಟಿಸಿದೆಯೇ ?'' ವಿರಾಮ ಕೊಡದಂತೆ ಪ್ರಶ್ನಿಸಿದೆ.

''ಹಾಗೇನಿಲ್ಲ, ಅವರೆಲ್ಲಾ ನನ್ನ ಸಹೋದ್ಯೋಗಿಗಳು. ಇಲ್ಲಿ ಮೇಲುಕೀಳುಗಳ ಪ್ರಶ್ನೆಯೇ ಇಲ್ಲ. ದುಡಿಮೆಗೆ ತಕ್ಕ ಪ್ರತಿಫಲ. ನಮ್ಮಲ್ಲಿ ಸಾಮರಸ್ಯವಿರುತ್ತದೆ. ಉದಾಹರಣೆಗೆ, ಈ ದಿನ ನಾನು ಇಂತಹ ಏರಿಯಾದಲ್ಲಿ ಕಳ್ಳತನ ಮಾಡಲು ಹೋಗುತ್ತೇನೆಂದರೆ ಆ ಏರಿಯಾಕ್ಕೆ ಬೇರೆ ಯಾರೂ ಬರುವುದಿಲ್ಲ. ಇದು ನಮ್ಮ ಒಪ್ಪಂದ.''

''ಹಾಗಾದರೆ ನೀವು ನಿಮ್ಮ ಸಹೋದ್ಯೋಗಿಗಳೊಂದಿಗೆ ಬೆರೆಯುತ್ತೀರಾ ? ಅವರೊಂದಿಗೆ ಎಲ್ಲಾ ವಿಷಯಗಳ ಬಗ್ಗೆ ಮುಕ್ತವಾಗಿ ಚರ್ಚಿಸುತ್ತೀರಾ ?''

''ಹೌದು, ನಾವೆಲ್ಲರೂ ಸೇರಿಕೊಂಡು ಎ.ಕೆ.ಪಿ.ಪಿ. ಸೊಸೈಟಿಯನ್ನು ಸ್ಥಾಪಿಸಿಕೊಂಡಿದ್ದೇವೆ. ಅದರಲ್ಲಿ ನಾನು ಪ್ರಧಾನ ಕಾರ್ಯದರ್ಶಿ'' ಹಾಗೆ ಹೇಳುವಾಗ ಅವನ ಮುಖದಲ್ಲಿ ಬಿಗುಮಾನವಿತ್ತು.

'ಎ.ಕೆ.ಪಿ.ಪಿ.ನಾ ? ಹಾಗೆಂದರೆ...!?'' ನನಗರ್ಥವಾಗಲಿಲ್ಲ.

''ಅದು 'ಆಲ್ ಕರ್ನಾಟಕ ಪಿಕ್‌ಪಾಕೆಟರ್ಸ್ ಸೊಸೈಟಿ' ಅಂತ. ಅದು ಹದಿನೈದು ದಿನಗಳಿಗೊಮ್ಮೆ ಸಭೆ ಸೇರಿ ಮುಕ್ತವಾಗಿ ಎಲ್ಲವನ್ನೂ ಚರ್ಚಿಸಿ ಮುಂದಿನ ಬೆಳವಣಿಗೆಗಳ ಬಗ್ಗೆ ಸಹ ಚರ್ಚಿಸುತ್ತದೆ. ಅಲ್ಲಿ ನಮ್ಮ ವೃತ್ತಿಯಲ್ಲಿನ ಆಗುಹೋಗುಗಳ ವಿಚಾರ ನಡೆಸಿ ಕೆಲವೊಂದು ಮಹತ್ತರವಾದ ತೀರ್ಮಾನಗಳನ್ನು ತೆಗೆದುಕೊಳ್ಳಲಾಗುತ್ತದೆ''... ಇನ್ನೂ ಏನೋ ಹೇಳಲಿದ್ದವನನ್ನು ಮಧ್ಯದಲ್ಲಿಯೇ ತಡೆದು, ''ನಿಮ್ಮ ಈ ಸೊಸೈಟಿಯ ಉದ್ದೇಶಗಳೇನು ? ನಿಯಮಗಳೇನು ?'' ಎಂದು ಕೇಳಿದೆ.

''ನಮ್ಮನ್ನು ಕಳ್ಳರೆಂದು ಕರೆಯುವವರನ್ನು ವಿಚಾರಿಸಿಕೊಳ್ಳುವುದು. ಅಂದರೆ ಮೊದಲು ಹಾಗೆ ಕರೆಯಬೇಡವೆಂದು ತಿಳಿಸುತ್ತೇವೆ. ಮಾತು ಕೇಳದಿದ್ದರೆ ಬೆದರಿಕೆ, ಹೊಡೆತ, ಕೊನೆಗೆ ಅವನ ಕೊಲೆಯನ್ನಾದರೂ ಮಾಡಲು ಹೆದರದೇ ದಂಡಿಸುವುದು. ಪೊಲೀಸರು ನಮ್ಮ ಸಾಧನೆಯನ್ನು ಗುರುತಿಸಿ ನಮಗೆ ಅತಿಥಿ ಸತ್ಕಾರ ಮಾಡಲು ಪ್ರಯತ್ನಪಟ್ಟರೆ ನಮ್ಮ ಸಹೋದ್ಯೋಗಿಗಳನ್ನು ರಾಜ ಮರ್ಯಾದೆಯಿಂದ ಕರೆದುಕೊಂಡು ಬರುವುದು. ಯಾರಾದರೂ ನಮ್ಮ ಚಾರಿತ್ರಿಕ ವಧೆ ಮಾಡಲು ಬಂದರೆ ಅವರನ್ನು ಸಂಪೂರ್ಣ ವಧೆ ಮಾಡುವುದು, ಈಗ ತಾನೇ ಹುಟ್ಟಿಕೊಂಡಿರುವ ಕಳ್ಳರ ಮಕ್ಕಳಿಗೆ ಕಳ್ಳತನದಲ್ಲಿ ಪಳಗುವಂತೆ ತರಬೇತಿ ನೀಡುವುದು, ಜೊತೆಗೆ ವಿದ್ಯಾಸಂಸ್ಥೆಗಳನ್ನು ತೆರೆಯುವುದು.''

ನನಗೆ ಒಮ್ಮೆಲೇ ಹೃದಯದ ಬಡಿತವೇ ನಿಂತಂತಾಯಿತು. ಪಿಕ್‌ಪಾಕೇಟರ್‍ಸ್ ಸೊಸೈಟಿಯಿಂದ ವಿದ್ಯಾಸಂಸ್ಥೆಯೇ ? ಸಂಶಯ ನನ್ನನ್ನು ಬಿಡಲಿಲ್ಲ.

''ವಿದ್ಯಾಸಂಸ್ಥೆ ಎಂತಹದು ? ಅಷ್ಟೊಂದು ತೊಂದರೆ ನಿಮಗೆ ಏಕೆ ?'' ಎಂದು ಕೇಳಿದೆ. ''ನಮ್ಮ ಸುತ್ತಮುತ್ತ ಅನೇಕ ವಿದ್ಯಾಸಂಸ್ಥೆಗಳನ್ನು ತೆರೆಯಲಾಗಿದೆ. ಅವುಗಳಲ್ಲಿ ಕೆಲವು ವಿಷಯಗಳಲ್ಲಿ ತರಬೇತಿಗಳನ್ನು ಕೊಡಲಾಗುತ್ತದೆ. ಹಾಗೆಯೇ ನಾವು ಕೂಡಾ ಕೆಲವು ಶಿಕ್ಷಣ ಸಂಸ್ಥೆಗಳನ್ನು ತೆರೆದು ಅಲ್ಲಿ ಕಳ್ಳತನಕ್ಕೆ ಬೇಕಾಗುವ ಪೂರಕ ಶಿಕ್ಷಣ ಹಾಗೂ ಕುಶಲತೆಯನ್ನು ಕಲ್ಪಿಸಿಕೊಡಬೇಕು. ಇಂದಿನ ಯುವಕರು ನಿರುದ್ಯೋಗ ಸಮಸ್ಯೆ ಎಂದು ಕುಳಿತುಕೊಳ್ಳದೆ ಸ್ವಾವಲಂಬಿಗಳಾಗಿ ಬದುಕಲು ಪ್ರೇರೇಪಿಸುವ ಒಂದೇ ಧ್ಯೇಯದಿಂದ ನಮ್ಮ ಸಂಸ್ಥೆ ಈ ವಿಷಯದಲ್ಲಿ ಮಹತ್ತರ ಹೆಜ್ಜೆಯನ್ನು ಇಡುತ್ತಿದೆ. ಸಾಮಾನ್ಯವಾಗಿ ಮೆರಿಟ್ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿಕೊಳ್ಳುವಂತೆ ನಾವು ಕೂಡಾ ಕುಶಲತೆಯ ಆಧಾರದ ಮೇಲೆ ಸೀಟುಗಳ ಹಂಚಿಕೆಯನ್ನು ಮಾಡಲಿದ್ದೇವೆ. ಮಾಜಿ ಡಕಾಯಿತ ಮಕ್ಕಳಿಗೆ, ಕುಖ್ಯಾತ ಕಳ್ಳರ ಮಕ್ಕಳಿಗೆ, ಗೂಂಡಾಗಳಿಗೆ, ನಯವಂಚಕರಿಗೆ – ಹೀಗೆ ಕೆಲವು ಕ್ಷೇತ್ರಗಳಲ್ಲಿನ ಅಭ್ಯರ್ಥಿಗಳನ್ನು ತೆಗೆದುಕೊಳ್ಳಲು ಸೀಟುಗಳನ್ನು ಕಾಯ್ದಿರಿಸಲಾಗಿದೆ. 'ಕಳ್ಳರ ವಿಶ್ವವಿದ್ಯಾನಿಲಯ' ಈ ಎಲ್ಲಾ ಕೆಲಸಗಳನ್ನು ನಿರ್ವಹಿಸುವುದು. ಇಲ್ಲಿ ರ್‍ಯಾಂಕ್ ಬಂದ ವಿದ್ಯಾರ್ಥಿಗಳನ್ನು ತರಬೇತಿ ನೀಡಲು ಅದೇ ವಿದ್ಯಾಸಂಸ್ಥೆಯಲ್ಲಿ ನೇರ ನೇಮಕಾತಿ ಮಾಡಿಕೊಳ್ಳಲಾಗುವುದು'' ಎಂದೆಲ್ಲಾ ಹೆಮ್ಮೆಯಿಂದ ಹೇಳಿಕೊಂಡ ಕರಿಯಪ್ಪ.

''ನಿಮಗೆ ಯಾವುದಾದರೂ ಕೊರತೆ ಎನ್ನಿಸುತ್ತಿದೆಯೇ ? ಏನಾದರೂ ಅಸಮಾಧಾನ ಎನ್ನಿಸಿದೆಯೇ ?'' – ಹೊಸ ವಿಷಯವೊಂದಕ್ಕೆ ಪೀಠಿಕೆ ಹಾಕಿದೆ.



# ಏಕಾಂತ

ಏಕಾಂತ ಬಯಸಿದೆ ನಾನು
ಮನೆಯ ಕೋಣೆಯ ಮೂಲೆಯೊಂದರಲಿ
ಅದೇನೋ ಧಡಬಡ ಧಕ್–ಧಕ್
ನೆರೆಮನೆಯ ಶಬ್ದ ಸಂಗೀತಗಳ ದೆಸೆಯಿಂದ
ಏಕಾಂತ ಭಂಗ !

ಏಕಾಂತ ಬಯಸಿದೆ ನಾನು
ಊರ ಕೇರಿಯ ಮಸೀದಿ–ಮಂದಿರಗಳ ಮುಂದೆ
ಅದೇನೋ, ಗಿಜಿ–ಗಿಜಿ ಬಿಜಿ –ಬಿಜಿ
ಧನ–ಮನಗಳ ಶಬ್ದಗಳಿಂದ
ಏಕಾಂತ ಭಂಗ !

ಏಕಾಂತ ಬಯಸಿದೆ ನಾನು
ದೂರದೂರಿನ ಬಯಲು –ಗುಡ್ಡಗಳ ಮಿಲನದಲಿ
ಅದೇನೋ ಆಟೋಟ ತಂಪುಗಾಳಿಯೆಂಬ
ಕಿರಿ ಕಿರಿ – ಆಹ್ಲಾದಗಳ ಭಾವನೆಗಳಿಂದ
ಏಕಾಂತ ಭಂಗ !

ಏಕಾಂತ ಬಯಸಿದೆ ನಾನು
ದಟ್ಟಾರಣ್ಯ – ಕಾಡು ಮೇಡುಗಳಲ್ಲಿ
ಅದೇನೋ ಘರ್ಜನೆ – ಹೂಂಕಾರ
ಭಯ ವಿಸ್ಮಯಗಳ ಆಧಿಪತ್ಯಗಳಿಂದ
ಏಕಾಂತ ಭಂಗ !

ಬಸವಳಿದು ಉಳಿದಿಹ ದಾರಿಯೊಂದೇ
ಬಯಸದೇ ಬರುವ ಸಾವಿನ ಧಾವಂತ
ನೀಡಬಹುದೇನೋ ಏಕಾಂತ !

ಎಂ. ಸಲೀಂ, ಅಂಜುಗಿಲು, ಉಡುಪಿ

''ಸರ್ಕಾರ ನಮ್ಮ ವಿಷಯದಲ್ಲಿ ಮೃದು ಧೋರಣೆ ಯನ್ನು ತಾಳುತ್ತಿರುವುದೊಂದು ಅಸಮಾಧಾನಕರ ಸಂಗತಿ. ಎಲ್ಲಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಮಹನೀಯರುಗಳಿಗೆ ಪ್ರಶಸ್ತಿ, ಪುರಸ್ಕಾರಗಳನ್ನು ನೀಡಿ ಗೌರವಿಸುತ್ತಿರುವಾಗ ನಮ್ಮ ಕ್ಷೇತ್ರದ ಕಲಾವಿದರಿಗೆ ಒಂದಾದರೂ ಪ್ರಶಸ್ತಿಯಿಲ್ಲದಿರುವುದು ವಿಷಾದಕರ ಸಂಗತಿ. ನಮ್ಮ ಹಿರಿಯ ಕಳ್ಳರ ಒಂದು ಪುತ್ಥಳಿಯನ್ನು ಅನಾವರಣ ಮಾಡಿ ಅವರ ಹೆಸರಿನಿಂದ ಒಂದು ಪ್ರಶಸ್ತಿಯನ್ನು ಪ್ರತಿವರ್ಷ ಕೊಡಮಾಡಲ್ಪಟ್ಟರೆ ಆಗ ನಮ್ಮ ಕಲೆಗೆ ಒಂದು ಬೆಲೆ ಬಂದಂತಾಗುತ್ತದೆ. ಇಲ್ಲದಿದ್ದರೆ ಈ ಕಲೆಯೇ ಕೆಲವೇ ಜನರ ಪಾಲಾಗಿ ಇನ್ನು ಕೆಲದಿನಗಳಲ್ಲಿ ಅವರೊಂದಿಗೆ ನಶಿಸಿ ಹೋಗುತ್ತದೆ. ಹೀಗಾಗಿ ಕಳ್ಳತನ ಅಭಿವೃದ್ಧಿ ಮಂಡಳಿಯನ್ನು ರಚಿಸಿ ನಮ್ಮ ಜನರನ್ನೇ ಅದಕ್ಕೆ ಅಧ್ಯಕ್ಷನನ್ನಾಗಿ ಮಾಡಿ ಅದಕ್ಕೆ ಅನುದಾನವನ್ನು ನೀಡುತ್ತಿದ್ದರೆ ನಮಗೂ ಅದರ ವಿವಿಧ ಯೋಜನೆಯಡಿ ಒಂದಷ್ಟು ಸಮಾಜದ ಸೇವೆ ಸಲ್ಲಿಸಲು ಸಾಧ್ಯವಾಗುತ್ತದೆ. ನಮ್ಮ ಹಿರಿಯರ ಜೀವನ ಚರಿತ್ರೆಯನ್ನು ಯಾರೂ ಬರೆಯಲು ಮುಂದೆ ಬರುತ್ತಿಲ್ಲ. ಅವರ ಸಾಧನೆಯನ್ನು ಪಠ್ಯಪುಸ್ತಕದಲ್ಲಿ ಅಳವಡಿಸಿದರೆ ಇತರರಿಗೂ ಈ ಕಲೆಯ ಬೆಲೆ ತಿಳಿದಂತಾಗುತ್ತದೆ. 'ಕಳ್ಳಶ್ರೀ', 'ಕಳ್ಳ ವಿಭೂಷಣ', 'ಕಳ್ಳರ ಕಳ್ಳ', 'ಪರಮ ಕಳ್ಳ' – ಹೀಗೆ ಹತ್ತು ಹಲವಾರು ಹೆಸರಿನಿಂದ ಪ್ರಶಸ್ತಿಗಳನ್ನು ಸ್ಥಾಪಿಸಬಹುದಾಗಿದೆ. ಕಾಣದ ಕೃಷ್ಣನನ್ನು ಕಳ್ಳನೆಂದು ಪೂಜಿಸುವ ಈ ಜನ ಜೀವಂತವಿರುವ ನಮಗೆ ಕಿಂಚಿತ್ತಾದರೂ ಗೌರವ ನೀಡದಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ನಾನು ನನ್ನ ಹತ್ತನೇ ವಯಸ್ಸಿನಲ್ಲಿಯೇ ಒಂದು ಪಿಕ್‌ಪಾಕೆಟ್ ಮಾಡಿ ಸಿಕ್ಕಿಬಿದ್ದೆ. ತಪ್ಪಿಸಿಕೊಳ್ಳುವ ಆತುರದಲ್ಲಿ ನನ್ನನ್ನು ಹಿಡಿದ ಆ ವ್ಯಕ್ತಿಗೆ ನನ್ನ ಹತ್ತಿರವಿದ್ದ ಒಂದು ಚಾಕುವಿನಿಂದ ಇರಿದೆ. ಅವನನ್ನು ಆಸ್ಪತ್ರೆಗೆ ಸಾಗಿಸುತ್ತಿರುವಾಗಲೇ ಅವನು ಮೃತಪಟ್ಟ. ಆ ವರ್ಷ ಮಕ್ಕಳ ದಿನಾಚರಣೆಯಂದು ಮಕ್ಕಳಿಗೆ ನೀಡುವ 'ಶ್ರಮ ವೀರ ಬಾಲಕ ಪ್ರಶಸ್ತಿ' ಪಟ್ಟಿಯನ್ನು ನೋಡಿದೆ. ನನ್ನ ಹೆಸರು ಸುಳಿಯದಿರುವುದನ್ನು ಕಂಡು ಬೇಜಾರಾಯಿತು.'' ದೀರ್ಘ ನಿಟ್ಟುಸಿರುಬಿಟ್ಟ.

''ನಿಮ್ಮದು ಈ ವೃತ್ತಿಯಲ್ಲಿ ಎಷ್ಟು ವರ್ಷದ ಅನುಭವ ?'' ಪ್ರಶ್ನಿಸಿದೆ.

''ಸುಮಾರು ಇಪ್ಪತ್ತೇಳು ವರ್ಷಗಳಿಂದ ಈ ಕೆಲಸದಲ್ಲಿ ನಾನು ನನ್ನ ಜೀವನವನ್ನು ಮೀಸಲಾಗಿರಿಸಿಕೊಂಡು ಬಂದಿದ್ದೇನೆ. ವಿಶ್ರಾಂತಿ ಇಲ್ಲದ ಬದುಕು. ಇಲ್ಲಿ ಸದಾ ಚಟುವಟಿಕೆಗಳಿಗೆ ಜಾಗರೂಕತೆಗೆ ಪ್ರಾಮುಖ್ಯ. ಹೀಗಾಗಿ ಇದೇ ಇನ್ನೂ ನನ್ನಲ್ಲಿ ಚೇತನವಿರಲು ಕಾರಣ'' ಎಂದು ಉತ್ಸಾಹದಿಂದ ಹೇಳಿದ.

''ಈಗ ಒಂದಷ್ಟು ನಿಮ್ಮ ವೈಯಕ್ತಿಕ ವಿಷಯಗಳ ಬಗ್ಗೆ ಪ್ರಶ್ನೆ ಕೇಳುತ್ತಿದ್ದೇನೆ. ನಿಮ್ಮ ಹೆಂಡತಿ ಯಾರು ? ಎಷ್ಟು ಜನ ಮಕ್ಕಳು ? ಅವರೇನು ಮಾಡುತ್ತಿದ್ದಾರೆ ? ಅದನ್ನೊಂದಿಷ್ಟು ತಿಳಿಸುತ್ತೀರಾ ?'' ಉತ್ಸುಕನಾಗಿ ಕೇಳಿದೆ.

''ನಮ್ಮದು ಕೂಡಾ ನಮ್ಮ ತಂದೆ ತಾಯಿಯರ ವಿವಾಹದಂತೆ ಪ್ರೇಮವಿವಾಹ. ನನ್ನವಳು ಆಗಾಗ್ಗೆ ಚೂರುಪಾರು ಕಳ್ಳತನವನ್ನು ಮಾಡುತ್ತಾಳೆ. ನಾವಿರುವಾಗ ಅವಳೇಕೆ ದುಡಿಯಬೇಕು ಎನ್ನುವ ವಾದ ನನ್ನದು. ಈಗೀಗ ಅವಳಿಗೆ ಕಳ್ಳತನವನ್ನು ಮಾಡುವುದು ಬಿಡಿಸಿ ಮನೆಯಲ್ಲಿ ಖಾಲಿ ಕುಳಿತುಕೊಳ್ಳಲಾಗದೇ ಚಿಕ್ಕ ಮಕ್ಕಳಿಗೆ ಕುಲಕಸುಬಿನ ಬಗ್ಗೆ ಟ್ಯೂಷನ್ ಹೇಳುತ್ತಿರುತ್ತಾಳೆ. ಇನ್ನು ನನಗೆ ಇಬ್ಬರು ಗಂಡು ಮಕ್ಕಳು. ಅವರು ಕೂಡಾ ಬೆಳೆದು ವೃತ್ತಿಯಲ್ಲಿ ಸ್ವಾವಲಂಬಿಗಳಾಗಿದ್ದಾರೆ. ಮಕ್ಕಳಿಗಾಗಿ ನಾನು ಮಾಡಿರುವ ಆಸ್ತಿ ಸ್ವಲ್ಪ. ಈಗಾಗಲೇ ಅವುಗಳನ್ನು ಅವರಿಗೆ ಹಂಚಿಕೊಟ್ಟುಬಿಟ್ಟಿದ್ದೇನೆ. ಹಿರಿಯ ಮಗನಿಗೆ ಗಾಂಧೀ ಸರ್ಕಲ್‌ಅನ್ನು, ಎರಡನೆಯ ಮಗನಿಗೆ ಮೇನ್ ಬಜಾರನ್ನು ನೋಡಿಕೊಳ್ಳಲು ವಹಿಸಿಕೊಟ್ಟಿದ್ದೇನೆ. ಒಬ್ಬರ ಏರಿಯಾದಲ್ಲಿ ಮತ್ತೊಬ್ಬರು ಹಸ್ತಕ್ಷೇಪ ಮಾಡದೇ ತಮ್ಮ ಪಾಡಿಗೆ ತಾವಿದ್ದಾರೆ'' ಎಂದು ತಿಳಿಸುತ್ತಾ ತನ್ನ ಸಂತಸ ವ್ಯಕ್ತಪಡಿಸಿದ.

''ಕೊನೆಯದಾಗಿ ಒಂದು ಪ್ರಶ್ನೆ. ನಿಮ್ಮ ಜೀವನದ ಮಹತ್ವಾಕಾಂಕ್ಷೆ ಏನು ? ಅಥವಾ ಸರ್ಕಾರದಿಂದ ಏನನ್ನಾದರೂ ಬಯಸುತ್ತೀರಾ ?'' ನಾನು ಕೇಳಿದೆ.

''ಸರ್ಕಾರದಿಂದ ವೈಯಕ್ತಿಕವಾಗಿ ನನಗೇನೂ ಬೇಕಾಗಿಲ್ಲ. ಆದರೆ ನಮ್ಮ ಕುಲಬಾಂಧವರಿಗೆ ಈ ಮೊದಲು ನಾನು ಹೇಳಿದಂತೆ ನೆರವು ನೀಡಬೇಕಾಗಿರುವುದು ಅವಶ್ಯ. ಇನ್ನು ನನ್ನ ಜೀವನದ ಮಹತ್ವಾಕಾಂಕ್ಷೆಯೆಂದರೆ ನನ್ನ ಕೊನೆಯ ದಿನದವರೆಗೂ ನನ್ನ ಕೈಲಾದಷ್ಟರ ಮಟ್ಟಿಗೆ ಈ ಸಮಾಜದ ಸೇವೆ ಮಾಡಬೇಕು. ನನ್ನಲ್ಲಿ ಸೋಮಾರಿತನವೆಂಬುದಕ್ಕೆ ಆಸ್ಪದವೇ ಇಲ್ಲ. ಅನೇಕಾನೇಕರ ಪಿಕ್‌ಪಾಕೆಟ್ ಮಾಡಬೇಕು. ಅತ್ಯಂತ ಹೆಚ್ಚು ಕಳ್ಳತನ ಮಾಡಿ ಗಿನ್ನಿಸ್ ದಾಖಲೆಯ ಪುಸ್ತಕದಲ್ಲಿ ನನ್ನ ಹೆಸರು ನಮೂದಾಗಬೇಕು. ಇದಕ್ಕಾಗಿ ಏನೆಲ್ಲಾ ತೊಂದರೆಯಾದರೂ ಸರಿ. ಗುರಿ ಸಾಧಿಸಲು ಸಿದ್ಧ.'' ಛಲ ಕರಿಯಪ್ಪನ ಮುಖದಲ್ಲಿ ಎದ್ದು ಕಾಣುತ್ತಿತ್ತು.

''ಒಳ್ಳೆಯದು. ಬಹುಶಃ ಕೇಳುವುದಕ್ಕೆ ನನ್ನಲ್ಲಿ ಯಾವ ಪ್ರಶ್ನೆಗಳೂ ಉಳಿದಿಲ್ಲ. ಎಲ್ಲವನ್ನೂ ಕೇಳಿಯಾಗಿದೆ. ಅದಕ್ಕಿಂತಲೂ ಹೆಚ್ಚಾಗಿ ನೀವೇ ಎಲ್ಲಾ ಹೇಳಿ ಮುಗಿಸಿದ್ದೀರಿ. ನಾನು ಬರ್ತೀನಿ'' ಎಂದು ಮೇಲೆದ್ದು ನಿಂತೆ.

''ಸ್ವಲ್ಪ ನಿಲ್ಲಿ ಸ್ವಾಮಿ. ಅಪರೂಪಕ್ಕೆ ನಮ್ಮ ಮನೆಗೆ ಬಂದಿದ್ದೀರಿ. ಅತಿಥಿಯನ್ನು ಸತ್ಕರಿಸದಷ್ಟು ಅವಿವೇಕತನವನ್ನು ನಾನು ಮಾಡಲಾರೆ. ಸ್ವಲ್ಪ ಕಾಫಿ ಕುಡಿದು ಹೋಗುವಿರಂತೆ'' ಎಂದು ಬಲವಂತವಾಗಿ ಕುಳ್ಳಿರಿಸುತಿದ್ದಂತೆ,

''ಇಲ್ಲ ಇನ್ನೊಂದು ಸಾರಿ ಬರ್ತೀನಿ. ಆಗ ನಿಧಾನವಾಗಿ ಕುಡಿದರಾಯ್ತು'' ಎಂದು ಮೇಲೆದ್ದು ನಿಂತೆ. ಅವನು ನನ್ನ ಕೈ ಕುಲುಕಿ,

''ತಮ್ಮ ಚಿತ್ತ. ಹೋಗಿಬನ್ನಿ'' ಎಂದು ಹಲ್ಲುಕಿರಿದು ನನ್ನೊಡನೆ ಹೊರಬಂದ.

ಅವನಿಂದ ಬೀಳ್ಕೊಂಡು ತುಂಬಾ ಸಂತಸದಲ್ಲಿ ಮನೆಗೆ ಬಂದೆ. ಒಂದು ಒಳ್ಳೆಯ ಕಥೆಯನ್ನು ಬರೆಯಲು ಕಥಾವಸ್ತು ಸಿಕ್ಕಿತ್ತು. ಚಾಳೀಸಿಗಾಗಿ ಜೇಬಿನಲ್ಲಿ ತಡಕಾಡಿದೆ. ಊಹ್ಞೂಂ! ಜೇಬಿನಲ್ಲಿ ಚಾಳೀಸಿಲ್ಲ. ಜೊತೆಗೆ ಪಾಕೇಟ್‌ನಲ್ಲಿಟ್ಟಿದ್ದ ದುಡ್ಡೂ ಇರಲಿಲ್ಲ. ಕರಿಯಪ್ಪ ಚೆನ್ನಾಗಿ ಅತಿಥಿಸತ್ಕಾರ ಮಾಡಿದನೆಂದು ಸಂಗ್ರಹಿಸಿದ ವಿಷಯಗಳನ್ನು ಕಥಾರೂಪದಲ್ಲಿ ಬರೆಯಲು ಕುಳಿತೆ.

**ಭೋಜರಾಜ ಸೊಪ್ಪಿಮಠ**
ಕಿರಿಯ ತರಬೇತಿ ಅಧಿಕಾರಿ, ಶ್ರೀ ಜಗದ್ಗುರು ತೋಂಟದಾರ್ಯ ಕೈಗಾರಿಕಾ ತರಬೇತಿ ಸಂಸ್ಥೆ
ಮಂಡಲಗಿರಿ, ಯಲಬುರ್ಗಾ ತಾಲೂಕು, ಕೊಪ್ಪಳ ಜಿಲ್ಲೆ - ೫೮೩೨೩೨

## ಸಾದರ ಸ್ವೀಕಾರ

**ಶಿಕ್ಷಕರೆ ಮಕ್ಕಳೆ ಪಾಲಕರೆ ಶೈಕ್ಷಣಿಕ ಯೋಜನಾ ಕಾರ್ಯ ಯೋಚಿಸುತ್ತಿದ್ದೀರಾ ?** — ಅರವಿಂದ ಚೊಕ್ಕಾಡಿ
ಪುಟ : ೮೦ — ಬೆಲೆ : ರೂ. ೩೫

**ಜೀವನ ವಿಜ್ಞಾನ ಶಿಕ್ಷಣ ಬೋಧನೆ ಮತ್ತು ಕಲಿಕೆ** — ಅರವಿಂದ ಚೊಕ್ಕಾಡಿ
ಪುಟ : ೧೨೦ — ಬೆಲೆ : ರೂ. ೫೦

**ನಮ್ಮ ಪುಟ್ಟ ಪ್ರಯೋಗಶಾಲೆ** — ಎಲ್. ಎಸ್. ಶ್ಯಾಮಸುಂದರ ಶರ್ಮ
ಪುಟ : ೪೦ — ಬೆಲೆ : ರೂ. ೩೫

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಶಾಂತವನದಲ್ಲಿ ಬುದ್ಧ** (ಕವಿತೆಗಳು) — ಪ್ರಾಚೀ
ಪುಟ : ೮೭ — ಬೆಲೆ : ರೂ. ೫೦
**ಸಂಧ್ಯಾದೀಪ ಪ್ರಕಾಶನ,** ಸಂತ ಅಲೋಶಿಯಸ್ ಸಂಧ್ಯಾ ಕಾಲೇಜಿನ ಪ್ರಕಟಣಾಂಗ, ಮಂಗಳೂರು - ೩

**ನಿಸರ್ಗ** (ಅಧ್ಯಯನ ಮತ್ತು ಅವಲೋಕನ) — ಎಂ. ಸಿ. ಜಯಪ್ಪ
ಪುಟ : ೧೭೬ — ಬೆಲೆ : ರೂ. ೧೦೦
**ಪೂರ್ಣಿಮಾ ಪ್ರಕಾಶನ,** ಮುಳ್ಳೂರು, ಅಂಚೆ : ನಿಡ್ತ, ಸೋಮವಾರಪೇಟೆ, ಕೊಡಗು - ೫೭೧ ೨೩೫

**ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಹಣಕಾಸು** — ಡಾ|| ಬಿ. ಪ್ರಭಾಕರ ಶಿಶಿಲ
ಪುಟ : ೧೭೦ — ಬೆಲೆ : ರೂ. ೧೩೦

**ಸಂಶೋಧನೆಯ ವಿಧಾನಗಳು** — ಡಾ|| ಬಿ. ಪ್ರಭಾಕರ ಶಿಶಿಲ
ಪುಟ : ೨೧೦ — ಬೆಲೆ : ರೂ. ೨೦೦

**ವಿದೇಶಿ ವಿನಿಮಯದ ನಿರ್ವಹಣೆ** — ಡಾ|| ಬಿ. ಪ್ರಭಾಕರ ಶಿಶಿಲ
ಪುಟ : ೨೧೮ — ಬೆಲೆ : ರೂ. ೧೦೦

**ಪರಿಚಯಾತ್ಮಕ ವ್ಯವಹಾರ ಅರ್ಥಶಾಸ್ತ್ರ** — ಡಾ|| ಬಿ. ಪ್ರಭಾಕರ ಶಿಶಿಲ
ಪುಟ : ೧೮೬ — ಬೆಲೆ : ರೂ. ೧೦೦

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಪ್ರಗತಿ ಪ್ರಕಾಶನ,** ಸರ್ವೋದಯ ಪ್ರಿಂಟರ್ಸ್, ರಥಬೀದಿ ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೯

**ಆನಂದಮಠ** — ಬಂಗಾಲಿ ಮೂಲ : ಬಂಕಿಮಚಂದ್ರ
ಕನ್ನಡ ಅನುವಾದ : ಎಸ್. ಆರ್. ರಾಮಸ್ವಾಮಿ
ಪುಟ : ೨೦೦ — ಬೆಲೆ : ರೂ. ೭೫

**ಸ್ವಾತಂತ್ರ್ಯ ಮಹಾ ಸಂಗ್ರಾಮ ೧೮೫೭ – ಒಂದು ವಾಕ್ಚಿತ್ರ** — ಚಕ್ರವರ್ತಿ ಸೂಲಿಬೆಲೆ
ಪುಟ : ೨೧೩ — ಬೆಲೆ : ರೂ. ೧೫೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ರಾಷ್ಟ್ರೋತ್ಥಾನ ಸಾಹಿತ್ಯ,** 'ಕೇಶವ ಶಿಲ್ಪ', ಕೆಂಪೇಗೌಡ ನಗರ, ಬೆಂಗಳೂರು - ೫೬೦ ೦೧೯

# ಹಸಿವು ಮತ್ತು ಬಡತನ ವಿರುದ್ಧದ ಹೋರಾಟದಿ ಭಯೋತ್ಪಾದನೆ

## ಹಿಂಸೆಗಿರಲಿ ತಿರಸ್ಕಾರ

**ಮಾ**ನವ ಬದುಕಿನ ಇತಿಹಾಸ ವಾಸ್ತವವಾಗಿ ಬದಲಾಗಿಲ್ಲೆಂಬ ಕೊರಗು ಒಂದೆಡೆಯಾದರೆ, ಮಾನವನ ಅತ್ಯದ್ಭುತ ಬುದ್ಧಿಯ ಆವಿಷ್ಕಾರಗಳು ಸಾಹಸ ಪ್ರವೃತ್ತಿಗಳು, ವಿದ್ಯೆ-ವಿಜ್ಞಾನ ಕ್ಷೇತ್ರಗಳು ಜಗತ್ತನ್ನೇ ದಂಗುಗೊಳಿಸಿ ಕಂಗೊಳಿಸುತ್ತಿರುವುದನ್ನು ಯಾರೂ ಅಲ್ಲಗಳೆಯಲಿಕ್ಕಾಗದು. ಶಿಲಾಯುಗದ ಮಾನವನ ಆದ್ಯತೆ-ಗುರಿಗಳು ಇಂದಿನ ಮಾನವನ ಆಸೆ-ಆಕಾಂಕ್ಷೆಗಳಲ್ಲಿ ತಾಳೆ-ತುಲನೆ ಹಾಕಲಿಕ್ಕಾಗದ ಸಂದರ್ಭವಿದೆ. ಆಧುನಿಕತೆ, ತಂತ್ರಜ್ಞಾನ, ಸಾಧನ-ಸಂಪರ್ಕ ಕ್ಷೇತ್ರದಲ್ಲಾದ ಗಮನಾರ್ಹ ಬದಲಾವಣೆ ಅತ್ಯಂತ ಸ್ಪಷ್ಟವಾಗಿ ಗೋಚರಿಸುತ್ತಲಿವೆ. ಇಷ್ಟಾದರೂ ಮಾನವನ ಬದುಕಿನ ಮೂಲಭೂತ ಸೌಕರ್ಯಗಳ ಕೊರತೆ ದಿನದಿಂದ ದಿನಕ್ಕೆ ಹಿಗ್ಗುತ್ತಿರುವುದು ವಿವೇಚನೆಯ ಸಂಗತಿಯಾಗಿದೆ. ರಾಷ್ಟ್ರೀಯ ಮಾನವ ಅಭಿವೃದ್ಧಿ-೨೦೦೧ರ ವರದಿಯ ಪ್ರಕಾರ ದೇಶದ ಗ್ರಾಮೀಣ ಪ್ರದೇಶಗಳಲ್ಲಿ ಶೇ. ೨೬.೫ಕ್ಕಿಂತ ಅಧಿಕ ಕುಟುಂಬಗಳು ಬಡತನ ರೇಖೆಯ ಕೆಳಗೆ ಜೀವನ ನಡೆಸುತ್ತಿವೆ. ಆಹಾರ ಸುರಕ್ಷತೆ ಕುರಿತಾದ ಮತ್ತೊಂದು ವರದಿಯಲ್ಲಿ ಶೇ. ೩.೩ರಷ್ಟು ಗ್ರಾಮೀಣ ಬಡ ಕುಟುಂಬಗಳು ಹಸಿವಿನಿಂದ ಬಳಲುತ್ತಿವೆ. ಯುನಿಸೆಫ್ ವರದಿಯ ಪ್ರಕಾರ ಭಾರತದೊಳಗೆ ಶೇ. ೧೩.೧ರಷ್ಟು ಜನಸಂಖ್ಯೆ ಆಹಾರ ಸುರಕ್ಷತೆಯಿಲ್ಲದೆ ಜೀವಿಸುತ್ತಿದೆ. ಭೂಗಾತ್ರದ ಆಧಾರಿತ ಹಸಿವು ಮತ್ತು ಬಡತನದ ಪ್ರಮಾಣ ಇಂತಿದೆ :

| ಭೂವರ್ಗ | ಹಸಿವು ಪ್ರತಿಶತ | ಬಡಜನರು ಪ್ರತಿಶತ |
|---|---|---|
| ಭೂಹೀನರು | ೪೯ | ೫೪ |
| <೦.೫ ಹೆಕ್ಟೇರ್ | ೩೨ | ೩೮ |
| ೦.೫ ಹೆಕ್ಟೇರ್ | ೨೪ | ೨೭ |
| ೨.೪ ಹೆಕ್ಟೇರ್ | ೧೨ | ೧೪ |
| ೭.೪ ಹೆಕ್ಟೇರ್ | ೧೨ | ೧೩ |

*ಆಧಾರ : ೫೦ನೇ ಎನ್.ಎಸ್.ಎಸ್.ಓ ಸುತ್ತು ೧೯೯೩-೯೪*

ದೇಶದ ಏಳು ಬೃಹತ್ ನಗರಗಳಲ್ಲಿ ಸುಮಾರು ಐವತ್ತು ಸಾವಿರ ಬೀದಿ ಮಕ್ಕಳಿದ್ದಾರೆಂದು ಅಂದಾಜಿಸಲಾಗಿದೆ. ಬೀದಿಯ ಬದುಕು ಮಗುವಿನ ಬದುಕಿನ ಹಕ್ಕು, ರಕ್ಷಣೆ, ಸಮಾನ ಅವಕಾಶ ಮತ್ತು ಅಭಿವೃದ್ಧಿ ಎಲ್ಲವನ್ನು ಉಲ್ಲಂಘಿಸಿದಂತಾಗಿದೆ. ಜೀತ ಪದ್ಧತಿಯಂತೂ ಮಾನವ ಬದುಕಿನ ಅರ್ಥವನ್ನೇ ಅಳಿಸಿಹಾಕಿದೆ. ಜಾತಿ ಪದ್ಧತಿ ಮಾನವ-ಮಾನವರಲ್ಲಿ ಬೆಸೆಯಲಾಗದ ಬಿರುಕುಗಳನ್ನು ನಿರಂತರಗೊಳಿಸಿದೆ. ಭಾವುಕತೆ ಹಿಂಸೆಗೆ ಸೂತ್ರವಾಗಿದೆ. ಬದುಕಿನೊಂದಿಗೆ ಹಾಸುಹೊಕ್ಕಾಗಿರುವ ಸುಧಾರಣೆ, ಬದಲಾವಣೆ, ವಿಚಾರವಾದ, ಮಾನವನ ಹಸಿವು ಮತ್ತು ಬಡತನ ನಿವಾರಿಸುವಲ್ಲಿ ಸಂಪೂರ್ಣ ಯಶಸ್ಸು ಸಾಧಿಸಲು ಸಾಧ್ಯವಾಗಿಲ್ಲ. ಅದರಂತೆ ಮಾನವನಲ್ಲಿಯ ಭಯಭೀತಿ ಇನ್ನಷ್ಟು ಭೀಕರಗೊಂಡಿದೆ. ಎಲ್ಲಿ ನೋಡಿದರಲ್ಲಿ ಭಯದ ವಾತಾವರಣವೇ ಸುಳಿದಾಡುತ್ತಿರುವುದು ಅನುಭವಜನ್ಯವಾಗಿದೆ. ಮಾನವ ತನ್ನ ಹಿತಕ್ಕಾಗಿ ಬಡತನದ ನಿವಾರಣೆಗಾಗಿ ಬೆಳೆಸಿದ ಕ್ಷೇತ್ರಗಳು ಮಾನವನ ಬದುಕಿಗೆ ಮಾರಕವಾಗುತ್ತಿರುವ ಬಗ್ಗೆ ಹೆಚ್ಚಿನ ಜಿಜ್ಞಾಸೆಯ ಅಗತ್ಯವಿಲ್ಲ. ಇಂದಿನ ಮಾನವನಲ್ಲಿ ತಾಮಸ ಗುಣಗಳು ಪೈಪೋಟಿಗೆ ನಿಂತು ಮಾನವ ಬದುಕಿಗೆ ಮತ್ತು ಬದುಕಿನ ಅಸ್ತಿತ್ವಕ್ಕೆ ಪೆಟ್ಟು ಹಾಕುತ್ತಲಿವೆ. ವಿಜ್ಞಾನ, ವೈಚಾರಿಕತೆ, ಶಿಕ್ಷಣ ಪ್ರಸಾರ, ತಂತ್ರಜ್ಞಾನ, ಸಂಪರ್ಕ ಸಾಧನಗಳು ಕೆಲವು ಭಯಗಳನ್ನು ನಿರ್ಮೂಲ ಮಾಡಿವೆಯೇ ಹೊರತು ಎಲ್ಲ ಭಯಭೀತಿಗಳನ್ನಲ್ಲ. ಆಧುನಿಕ ಶಸ್ತ್ರಾಸ್ತ್ರಗಳು ಪ್ರತಿ ಮಾನವನು ಉಸಿರು ಬಿಗಿಹಿಡಿಯುವಂತೆ ಮಾಡಿವೆ. ಇಲ್ಲಿ ಎಲ್ಲವೂ ಅನಿಯಂತ್ರಣಗೊಂಡಿರುವುದಲ್ಲದೆ ಯಾವ ಕ್ಷಣ ಎಂತಹ ಅನಾಹುತ ಎದುರುಗೊಳ್ಳುತ್ತಿದೆ ಎಂಬುದು ಊಹೆಗೂ ನಿಲುಕದಂತಾಗಿದೆ. ಬದುಕಿನ ಚೈತನ್ಯಕ್ಕೆ ಮಂಕು ಕವಿಯುತ್ತ ಬದುಕಿ ಉಳಿಯುವುದೇ ಅಪರಾಧವೆಂಬ ತುಮುಲ- ತುಡಿತ ಜಗ್ಗಾಡುತ್ತಲಿಲ್ಲವೆ ? ಶ್ರಮಯುಕ್ತ ಬದುಕು ಅಪಹಾಸ್ಯಕ್ಕೆ ಗುರಿಯಾಗಿದೆ. ಮತ್ತೊಬ್ಬರದನ್ನು ಅತ್ಯಂತ ನಯ-ನಾಜೂಕಿನಿಂದ ದೋಚಿಕೊಂಡು ಬದುಕುವ ಹವ್ಯಾಸ ತಾರಕಮಟ್ಟಕ್ಕೆ ಮುಟ್ಟಿದೆ. ಇನ್ನೊಬ್ಬರ ಶ್ರೇಯಸ್ಸು ಅಸಹನೀಯವಾಗಿ ಆಕ್ರೋಶ ಪ್ರಾಣಹರಣಕ್ಕೂ ಮುಂದಾಗಿರುವ ಕಾಲ ಇದಾಗಿದೆ. ಬದುಕಿನಲ್ಲಿ ಮಾನವ ಸಹಜ ನಡೆ-ನುಡಿ ಮಾಯವಾಗಿ ಧ್ವಂಸ ಕೃತ್ಯಗಳು, ಧಾಳಿಗಳು, ದಂಗೆಗಳು, ಅತಿಕ್ರಮಣ, ಕಲಹ-ಕೀಟಲೆ, ವಂಚನೆ-ಮೋಸತನ, ವಿಶ್ವಾಸದ್ರೋಹ, ಅವಗುಣ ಆರಾಧನೆಗೆ ಆದರ್ಶಗಳಾಗುತ್ತಿಲ್ಲವೆ ?

ಮಾನವನ ಬದುಕು ಅನ್ಯಾಯ-ಅತಿರೇಕಗಳಲ್ಲಿ ಮುಳುಗಿ ಯಾವುದು ಬದುಕು ಎಂದು ಕೇಳುವಂತಾಗಿದೆ. ಅಸಲಿ ಯಾವುದು, ನಕಲಿ ಯಾವುದು ಎಂಬ ಸ್ಪಷ್ಟತೆ ಬದುಕಿಗೆ ಸಿಗದಂತಾಗಿ ನೈಜ ಬದುಕಿನ ದಾರಿ ತಪ್ಪುವ ಪ್ರಸಂಗಗಳೇ ನಿತ್ಯದ ಮಾತಾಗಿವೆ. ಸ್ವಾಮಿ ವಿವೇಕಾನಂದರು ಮಾನವನ ಬದುಕಿನಲ್ಲಿ ನುಸುಳಿಕೊಂಡಿರುವ ಹೀನತೆಯನ್ನು ಅತ್ಯಂತ ಕಟು ಶಬ್ದಗಳಲ್ಲಿ ಹೇಳಿ, ಜಗತ್ತಿನ ಬದುಕಿಗೆ ಬೆಳಕು ತನ್ನಿ ಎಂಬ ಕಳಕಳಿಯನ್ನು ವ್ಯಕ್ತ ಪಡಿಸಿದ್ದು ಹೀಗಿದೆ : ಬಡವರಿಗೆ ಬೆಳಕು ತನ್ನಿ, ಬಲ್ಲಿದರಿಗೆ ಹೆಚ್ಚು ಬೆಳಕು ತನ್ನಿ; ಏಕೆಂದರೆ ಅದು ಬಡವರಿಗಿಂತ ಅವರಿಗೆ ಹೆಚ್ಚು ಅಗತ್ಯ. ಅಶಿಕ್ಷಿತರಿಗೆ ಬೆಳಕು ತನ್ನಿ, ಶಿಕ್ಷಿತರಿಗೆ ಹೆಚ್ಚು ಬೆಳಕು ತನ್ನಿ, ಏಕೆಂದರೆ ನಮ್ಮ ಕಾಲದ ಶಿಕ್ಷಣದ ನಿರರ್ಥಕತೆಗಳು ಅಪಾರ ! ಬದುಕಿಗಾಗಿ ಶಿಕ್ಷಣ ದೂರದ ಮಾತಾಗಿದೆ. ಭಯ ನಿವಾರಣೆಯು ಶಿಕ್ಷಣದ ಮೂಲ ಉದ್ದೇಶವಾಗಿಲ್ಲ. ಸುಶಿಕ್ಷಿತರಲ್ಲಿ ಬುದ್ಧಿಯು ಬಹಳಷ್ಟಿದೆ, ವಿವೇಕ ಅವರಲ್ಲಿ ಹುಡುಕಾಡಬೇಕಾಗಿದೆ. ಜಗತ್ತಿನಲ್ಲಿ ಸಂಭವಿಸಿರುವ-ಸಂಭವಿಸಲಿರುವ ಭಯೋತ್ಪಾದನೆ, ಆತಂಕವಾದ, ಘನ ಘೋರ ಯುದ್ಧಗಳು ಸುಶಿಕ್ಷಿತರ ಕೊಡುಗೆಗಳಾಗಿವೆ. ದಬ್ಬಾಳಿಕೆ, ಅಧಿಕಾರಶಾಹಿ ವರ್ತನೆಯಿಂದಾಗಿ ಜಗತ್ತಿನ ಮಾನವ ಬದುಕು ಬಹಳಷ್ಟು ಜರ್ಜರಿತಗೊಂಡಿದೆ, ಬದುಕಿನ ಅಂತಃಸತ್ವ ಗತಿಗೇಡಿಯಾಗಿದೆ. ಹೀಗಾಗಿ ಮಾನವನ ಸಹಜೀವನ ಸಂಪ್ರೀತಿ ನುಣ್ಣಗಾಗುತ್ತಾ ಸಾಗಿದೆ.

**ಸ. ರಾ. ಸುಳಕೂಡೆ**

ಜೀವ ವಿಜ್ಞಾನಿಗಳು ಮಾನವ ಸಮಾಜವನ್ನು ಪರಸ್ಪರ ಚಿಂತನೆ ಮತ್ತು ಸಂಪರ್ಕವನ್ನುಳ್ಳ ವ್ಯಕ್ತಿಗಳ ಗುಂಪು ಎಂದು ಪರಿಗಣಿಸಿದ್ದಾರೆ. ಮಾನವ-ಮಾನವರಲ್ಲಿ ಅನುಸಂಧಾನವಿದ್ದರೆ ಮಾತ್ರ 'ಒಳಿತು' ಸಾಧ್ಯ. ಆದರೆ ಇಂದಿನ ಬದುಕಿನ ಚಿತ್ರಣದಲ್ಲಿ ಮಾನವ-ಮಾನವರಲ್ಲಿ ಉತ್ತಮ ಸಂಬಂಧಗಳು, ಪರಸ್ಪರರಲ್ಲಿ ಅನ್ಯೋನ್ಯತೆ, ಸಾತ್ವಿಕ ಬದುಕಿನ ಚಿಂತನೆ ನಡೆಯದ ಕಾರಣ ತಪ್ಪು ತಿಳಿವಳಿಕೆಗಳು, ಗತ್ತುಗಾರಿಕೆಗಳು ಹದ್ದು ಮೀರಿ ನಿಂತಿವೆ. ಸಂತಸ ಮತ್ತು ಸಹಜೀವನ ಹಾಗೂ ಮಮತೆಯಿಂದ ತುಂಬಿ ತುಳುಕಬೇಕಾಗಿದ್ದ ಮಾನವನ ಜೀವನ, ಜೀವನ ವಿರೋಧಿ ನಿಲುವು ತಾಳಲು ಅನೇಕ ಕಾರಣಗಳಿರಬಹುದು. ಈ ಕಾರಣಗಳನ್ನು ಮುಂದಿಟ್ಟುಕೊಂಡು ಬದುಕು ಯಾತನೆ, ದೊಂಬಿ,

---

ಮಾನವ ಬದುಕಿನಲ್ಲಿ ಕ್ರಿಯಾಶೀಲವಾಗಿರುವ ಹಿಂಸೆ ಮತ್ತು ಭಯೋತ್ಪಾದನೆಯನ್ನು ನಿಗ್ರಹಿಸುವ ಏಕೈಕ ಮಾರ್ಗ ಶ್ರಮ ಸಂಸ್ಕೃತಿಯನ್ನು ಸಜ್ಜುಗೊಳಿಸುವುದಾಗಿದೆ. ನಮ್ಮ-ನಮ್ಮ ಶಕ್ತಿಗನುಸಾರ ನೈಪುಣ್ಯತೆಗನುಗುಣವಾಗಿ ಸತ್ಯ-ಶುದ್ಧ ಮತ್ತು ಪ್ರಾಮಾಣಿಕ, ಶ್ರಮದಾಯಕ ಕೆಲಸದಲ್ಲಿ ತೊಡಗಿದರೆ ಹಸಿವು-ಬಡತನಕ್ಕೆ ಆಸ್ಪದವೇ ಇರಲಾರದು. ದುಡಿದು ಉಣ್ಣುವ ಪರಿಪಾಠದಲ್ಲಿಯೆ ಹಿಂಸೆಯನ್ನು ತಡೆಯುವ ಶಕ್ತಿ ಇದೆ. ಶ್ರಮ ಶಕ್ತಿಯು ಭಯೋತ್ಪಾದನೆ, ಬಂದೂಕಿನ ಉಪಟಳವನ್ನು ನಿವಾರಿಸುವ ಸೂಕ್ತ ಮಾರ್ಗವಾಗಿದೆ.

ದುಗುಡ, ಜೀವಹರಣ, ಹತ್ಯೆಗೆ ಮುಂದಾಗುವುದು ಯೋಗ್ಯವೆ ? ಇದು ಪ್ರತಿಯೊಬ್ಬರೂ ವಿಚಾರ ಮಾಡುವ ಮತ್ತು ರಚನಾತ್ಮಕ ಬದುಕನ್ನು ರೂಢಿಸಿಕೊಳ್ಳುವ ಅಗತ್ಯವನ್ನು ಸೂಚಿಸುತ್ತದೆ. ಮಾನವನನ್ನು ಕೊಲ್ಲುವ ಶಸ್ತ್ರಾಸ್ತ್ರಗಳು ಎಷ್ಟೊಂದು ಭಯಾನಕವಾಗಿವೆ ಎಂದರೆ ಅರಿವಿಗೂ ಬಾರದಂತೆ, ಯಾವ ಸುಳಿವೂ ಇಲ್ಲದಂತೆ ಒಂದು ಜನಾಂಗವನ್ನೇ ಭೂಮಿಯಿಂದ ಮಾಯವಾಗುವಂತೆ ಮಾಡುವ ಶಕ್ತಿ ಹೊಂದಿವೆ. ಒಂದು ಅರ್ಥದಲ್ಲಿ 'ಬದುಕು' ಶಸ್ತ್ರಾಸ್ತ್ರಗಳ ಪೈಪೋಟಿಯಲ್ಲಿ ಸಿಲುಕಿಕೊಂಡು ಭಯ ಭಯಾನಕತೆಯಿಂದ ಸುತ್ತುವರಿಯಲ್ಪಟ್ಟಿದೆ. 'ಸೈತಾನನು ಒಳ್ಳೆಯ ವ್ಯಕ್ತಿಗಳನ್ನು ಆಕರ್ಷಿಸಲು ಯತ್ನಿಸಿದರೆ ಕೆಟ್ಟವರು ಸೈತಾನನ್ನು ಆಕರ್ಷಿಸಲು ಯತ್ನಿಸುತ್ತಾರೆ' ಎಂಬ ತರ್ಕ ಗಾದೆ ಮಾತನ್ನು ಪೂರ್ಣಸತ್ಯವನ್ನಾಗಿಸಲು ಜಗದ ಜನ ಪೈಪೋಟಿಯಲ್ಲಿದ್ದಂತೆ ವರ್ತಿಸುತ್ತಲಿದ್ದಾರೆ.

ಜಗದ ಅಮೂಲ್ಯ ಸಂಪತ್ತು ಮತ್ತು ಸಮಯ ಹಿಂಸೆ-ಭಯೋತ್ಪಾದಕತೆಯನ್ನು ನಿಗ್ರಹಿಸುವುದಕ್ಕೆ ವ್ಯಯವಾಗುವ ಹಂತಕ್ಕೆ ತಲುಪಿದೆ. ಮತಾಂಧತೆ ಮತ್ತು ಅಧಿಕಾರದ ಅಮಲಿನಲ್ಲಿ ಮನುಕುಲದ ವಿನಾಶಕ್ಕೆ ಹಪಹಪಿಸುವ ಶಕ್ತಿಗಳನ್ನು ಗುರುತಿಸಿದರೂ ಏನೂ ಮಾಡಲಾಗದ ಸ್ಥಿತಿ, ಅಸಹಾಯಕತೆ ಇಂದಿನ ಬದುಕು ಒಳಗೊಂಡಿರುವುದಕ್ಕೆ ವಿಶೇಷ ಅಭ್ಯಾಸದ ಅಗತ್ಯವಿಲ್ಲ. ಮಾನವ ಬದುಕಿನ ಬಗ್ಗೆ ಅತ್ಯಂತ ಕಾಳಜಿ ವಹಿಸಿದ್ದ ಮಹಾನ್ ಚಿಂತಕ ಬರ್ಟ್ರೆಂಡ್ ರಸೆಲ್ ಒಂದೆಡೆ ಹೇಳಿರುವ ಮಾತುಗಳು ಉಲ್ಲೇಖನೀಯ : ''ಸಾಧನವಾಗಿ ಮಾನವೀಯ ಕೌಶಲ್ಯ ಮತ್ತು ಗುರಿಯಾಗಿ ಮಾನವೀಯ ಅವಿವೇಕಗಳ ನಡುವಣ ಸ್ಪರ್ಧೆಯ ನಡುವೆ ನಾವೀಗ ಸಿಕ್ಕಿಕೊಂಡಿದ್ದೇವೆ. ಗುರಿಯಾಗಿ ನಮ್ಮ ಅವಿವೇಕವನ್ನು ಪರಿಗಣಿಸಿದಾಗ ಕೌಶಲ್ಯದಲ್ಲಿನ ಪ್ರತಿಯೊಂದು ಹೆಚ್ಚಳವೂ ನಮ್ಮನ್ನು ಕೆಟ್ಟದರತ್ತಲೇ ಕೊಂಡೊಯ್ಯುತ್ತದೆ. ಅಜ್ಞಾನ ಮತ್ತು ಅಸಾಮರ್ಥ್ಯಗಳಿಂದಾಗಿ ಮಾನವ ಜನಾಂಗ ಇದುವರೆಗೆ ಉಳಿದುಕೊಂಡು ಬಂದಿದೆ. ಆದರೆ ಅವಿವೇಕದ ಜೊತೆಗೆ ಜ್ಞಾನ ಮತ್ತು ಸಾಮರ್ಥ್ಯ ಬೆರೆತುಕೊಂಡಿದ್ದೇ ಆದರೆ, ಉಳಿವಿನ ಬಗ್ಗೆ ಯಾವುದೇ ಖಚಿತವಾದ ಭರವಸೆಯೂ ಇರಲಾರದು. ಜ್ಞಾನವೇ ಶಕ್ತಿ. ಆದರೆ ಅದು ಕೆಡುಕಿಗೆಂತೋ ಒಳಿತಿಗೂ ಅಂತೆಯೇ ಶಕ್ತಿಯಾಗಿ ಪರಿಣಮಿಸಬಹುದು. ಇದರಿಂದ ನಾವು ಸಾಧಿಸಬಹುದಾದದ್ದು ಏನೆಂದರೆ ಜ್ಞಾನದಷ್ಟೇ ಪ್ರಮಾಣದಲ್ಲಿ ಮನುಷ್ಯರು ವಿವೇಕವನ್ನು ಹೆಚ್ಚಿಸಿಕೊಳ್ಳದೆ ಹೋದರೆ, ಜ್ಞಾನದ ಹೆಚ್ಚಳ ದುಃಖದ ಹೆಚ್ಚಳವೇ ಆಗಿ ಪರಿಣಮಿಸುತ್ತದೆ.''




ಮೈಸೂರಿನಲ್ಲಿ ದಿನಾಂಕ ೨೬-೭-೨೦೦೭ರಂದು ನವಕರ್ನಾಟಕ ಪುಸ್ತಕ ಮೇಳ ಪ್ರಾರಂಭವಾಯಿತು. ಖ್ಯಾತ ಸಾಹಿತಿ ದೇವನೂರು ಮಹಾದೇವ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಮತ್ತು ನವಕರ್ನಾಟಕ ಪ್ರಕಾಶನದ ಇತ್ತೀಚಿನ ಮೂರು ಕೃತಿಗಳ ಲೋಕಾರ್ಪಣೆ ಮಾಡಿದರು. ಜನಪ್ರಿಯ ವಿಜ್ಞಾನ ಲೇಖಕರಾದ ಪ್ರೊ॥ ಅಡ್ಯನಡ್ಕ ಕೃಷ್ಣಭಟ್ ಪುಸ್ತಕ ಮೇಳವನ್ನು ಉದ್ಘಾಟಿಸಿದರು.




ವೇದಿಕೆಯ ಮೇಲಿರುವವರು (ಎಡದಿಂದ ಬಲಕ್ಕೆ) ಲೇಖಕ ಅರವಿಂದ ಚೊಕ್ಕಾಡಿ, ಪ್ರೊ॥ ಅಡ್ಯನಡ್ಕ ಕೃಷ್ಣಭಟ್, ದೇವನೂರು ಮಹಾದೇವ, ಲೇಖಕ ಎಲ್. ಎಸ್. ಶ್ಯಾಮಸುಂದರ ಶರ್ಮಾ ಮತ್ತು ನವಕರ್ನಾಟಕ ಮೈಸೂರು ಮಳಿಗೆಯ ವ್ಯವಸ್ಥಾಪಕ ಎನ್. ಕೆ. ಸತ್ಯನಾರಾಯಣ.

ಮಾನವನ ಬದುಕು ಹಸಿವು ಮತ್ತು ಬಡತನದಿಂದ ಮುಕ್ತವಾಗಲು ಮಾನವ ಬುದ್ಧಿ ಸಹಕರಿಸಬೇಕೇ ವಿನಾ ಹಸಿವು ಮತ್ತು ಬಡತನ ಉಲ್ಬಣಗೊಳ್ಳಲು ಮಾನವ ಬುದ್ಧಿ ದಾರಿ ಮಾಡಿಕೊಡಬಾರದು. ಶೋಷಣೆಗೆ ಮುಕ್ತ ದ್ವಾರ ತೆರೆಯುವಂತೆ ಪ್ರೋತ್ಸಾಹಿಸುವ 'ಬುದ್ಧಿ' ಮನುಕುಲಕ್ಕೆ ಮಾರಕವಾಗುತ್ತದೆ. 'ಮಾನವ ಸ್ವಭಾವ' ಮೂಲತಃ ಬದಲಾಗದ ಹೊರತು ಹಸಿವು ಮತ್ತು ಬಡತನಕ್ಕೆ ಪರಿಹಾರ ದೊರೆಯುವುದು ಅಸಾಧ್ಯ. ಹಸಿವು ಮತ್ತು ಬಡತನ ನಿವಾರಣೆಗಾಗಿ ಅನೇಕ ಯೋಜನೆಗಳು, ಸಹಾಯ-ಸವಲತ್ತುಗಳು ಕಾಲಕಾಲಕ್ಕೆ ನಿರೂಪಗೊಂಡರೂ ಅವುಗಳು ನೈಜ ಫಲಾನುಭವಿಗಳಿಗೆ ತಲುಪದಿರುವುದು ಒಂದೆಡೆಯಾದರೆ ಸಹಾಯ-ಸವಲತ್ತು ಸದುಪಯೋಗಪಡಿಸಿಕೊಳ್ಳದ ಸಂದರ್ಭ ಇನ್ನೊಂದಾಗಿದೆ. ಕೋಟ್ಯನುಕೋಟಿ ಅನುದಾನ ಮತ್ತು ಸಾರ್ವಜನಿಕ ಸಮಯ ಹಾಗೂ ಜನಬಲ ಹಸಿವು ಮತ್ತು ಬಡತನ ನಿವಾರಣೆಗೆ ಕಂಕಣಬದ್ಧವಾಗಿದ್ದರೂ ನಿಚ್ಚಳ ಪರಿಣಾಮ ಗೋಚರಿಸುತ್ತಿಲ್ಲ. ಈ ಯೋಜನೆ, ಸಹಾಯ ಸವಲತ್ತುಗಳ ಸುತ್ತ ಎದ್ದಿರುವ ವಿವಾದ ಹಗರಣ ಸಾರ್ವತ್ರಿಕವಾಗಿ ನಿದ್ದೆಗೆಡಿಸುವ ಸಂಗತಿಯಾಗಿ ಮುಂದುವರಿದಿದೆ. ಸಹಾಯ ಸವಲತ್ತು ಕೊಡುವಲ್ಲಿಯ ತಾರತಮ್ಯ, ಸ್ವಜನ ಪಕ್ಷಪಾತ, ಭ್ರಷ್ಟಾಚಾರ, ವಂಚನೆ-ಮೋಸ ಆಕ್ರೋಶ-ಹಿಂಸೆಗೆ ಕಾರಣವಾಗುತ್ತದೆಂಬ ಅನಿಸಿಕೆಗೆ ಎರಡು ಮಾತಿಲ್ಲ. ಆದರೆ ಈ ಹೋರಾಟವು ಮಾನವ ಜೀವಹರಣಕ್ಕೆ ಹತ್ಯೆಗೆ ತಳಹದಿಯಾಗಬಾರದೆಂಬ ಮಾನವ ಸಹಜ ಕಾಳಜಿ ಇರಬೇಕಾಗಿರುವುದು ಅಗತ್ಯ. ಸತತ ಸಂಘರ್ಷ-ಘರ್ಷಣೆಯೊಳಗೆ ಬದುಕನ್ನು ನಿಭಾಯಿಸಲು ಹೊರಟಿರುವ ಮಾನವರೆಲ್ಲರೂ ಬಿಲ್‌ಗ್ರೇಡ್ ಚೆಂಡಿನಂತಿದ್ದಾರೆಂಬ ಚಿಂತಕ ಬರ್ಟ್ರೆಂಡ್ ರಸೆಲ್‌ರ ಮಾತು ಪುನಃ ಪುನಃ ನೆನಪಿಗೆ ಸದಾ ಬರದಿರಲಾರದು.

ಮಾನವ ಬದುಕಿನಲ್ಲಿ ಕ್ರಿಯಾಶೀಲವಾಗಿರುವ ಹಿಂಸೆ ಮತ್ತು ಭಯೋತ್ಪಾದನೆಯನ್ನು ನಿಗ್ರಹಿಸುವ ಏಕೈಕ ಮಾರ್ಗ ಶ್ರಮ ಸಂಸ್ಕೃತಿಯನ್ನು ಸಜ್ಜುಗೊಳಿಸುವುದಾಗಿದೆ. ನಮ್ಮ-ನಮ್ಮ ಶಕ್ತಿಗನುಸಾರ ನೈಪುಣ್ಯತೆಗನುಗುಣವಾಗಿ ಸತ್ಯ-ಶುದ್ಧ ಮತ್ತು ಪ್ರಾಮಾಣಿಕ, ಶ್ರಮದಾಯಕ ಕೆಲಸದಲ್ಲಿ ತೊಡಗಿದರೆ ಹಸಿವು-ಬಡತನಕ್ಕೆ ಆಸ್ಪದವೇ ಇರಲಾರದು. ದುಡಿದು ಉಣ್ಣುವ ಪರಿಪಾಠದಲ್ಲಿಯೆ ಹಿಂಸೆಯನ್ನು ತಡೆಯುವ ಶಕ್ತಿ ಇದೆ. ಶ್ರಮಶಕ್ತಿಯು ಭಯೋತ್ಪಾದನೆ, ಬಂದೂಕಿನ ಉಪಟಳವನ್ನು ನಿವಾರಿಸುವ ಸೂಕ್ತ ಮಾರ್ಗವಾಗಿದೆ. ಶ್ರಮಶಕ್ತಿಗಳು ಸಂಘಟನೆಗೊಂಡು ಕಾಯಕದ ಮಹತ್ವವನ್ನು ಅರುಹುತ್ತ ಸಾಗಿದಲ್ಲಿ ಹಸಿವು-ಬಡತನಗಳೆಲ್ಲವೂ ನೀಗಿ ಸತ್ವ ಶುದ್ಧ ಮಾನವ ವ್ಯಕ್ತಿತ್ವ ನಿರ್ಮಾಣಗೊಳ್ಳಲು ಸಾಧ್ಯವಾಗುತ್ತದೆ. ನ್ಯಾಯಯುತ ಪಾಲು ಶ್ರಮಶಕ್ತಿಯನ್ನು ಉಪಯೋಗಿಸಿಕೊಂಡಲ್ಲಿ ಸುಲಭವಾಗಿ ದೊರೆಯುತ್ತದೆ. ಇಲ್ಲಿ ಕಿತ್ತಾಟ, ಒತ್ತಾಯ, ಅನಗತ್ಯ ಬಲ ಪ್ರಯೋಗದ ಅಗತ್ಯತೆ ಎಂದೂ ಉದ್ಭವವಾಗುವುದಿಲ್ಲ. ಶ್ರಮಶಕ್ತಿಯ ಉಪಯೋಗ ಒಂದು ಅರ್ಥದಲ್ಲಿ ಮಾನವ ಶಕ್ತಿಯ ಸದುಪಯೋಗವೇ ಆಗಿದೆ. ಮಾನವ ಬದುಕಿನ ಶಕ್ತಿಯಾಗಿರುವ ಶ್ರಮ ಜೀವನ ಉದಾತ್ತ ಮೌಲ್ಯಗಳ ವಾಹಕವಾಗಿದೆ. ಇದನ್ನೇ ಜಗತ್ತಿನ ಪ್ರಸಿದ್ಧ ನಾಟಕಕಾರ ಬರ್ನಾರ್ಡ್ ಷಾ ಅವರು ಹೀಗೆ ಹೇಳಿದ್ದಾರೆ : ''ನೀವು ಪ್ರಬಲವೆಂದು ಭಾವಿಸುವ ಒಂದು ಉದ್ದೇಶಕ್ಕಾಗಿ ಉಪಕರಣವಾಗುವುದು ಬದುಕಿನ ನಿಜವಾದ ಸಂತೋಷದ

ಮೂಲ. ಬರೇ ಗೊಣಗಿಕೊಂಡು ಸಂಕಟಪಟ್ಟುಕೊಂಡು ಜಗತ್ತು ನಮ್ಮನ್ನು ಸುಖವಾಗಿ ಇಡಲು ಪ್ರಯತ್ನ ಮಾಡುತ್ತಿಲ್ಲ ಎಂದು ಸದಾ ದೂರು ಹೇಳಿಕೊಳ್ಳುತ್ತ ಬದುಕುವುದಕ್ಕಿಂತಲೂ ಪ್ರಕೃತಿಯ ಒಂದು ಶಕ್ತಿಯಾಗುವುದು ಒಂದು ಮಹತ್ವದ ಸಂಗತಿ.'' ದುಡಿಮೆಯೇ ಬದುಕು ಎಂಬ ಸೂತ್ರ ಮೇಲ್‌ಸ್ತರಕ್ಕೆ ಏರಿದಾಗ ಬಂದೂಕು, ಯುದ್ಧಕ್ಕೆ ಆಸ್ಪದವೇ ಇರಲಾರದು. ಮಾನವ ಬದುಕುವುದೆಂದರೆ ದುಡಿಯುತ್ತ, ಶ್ರಮದಲ್ಲಿ ನಿರತರಾಗುವುದೆಂದೇ ಅರ್ಥ. ಅಸ್ತಿತ್ವಕ್ಕಾಗಿ ಹೋರಾಟ ಮಾಡುವುದೆಲ್ಲವೂ ದುಡಿಮೆಯ ಭಾಗವಾಗಬೇಕು. ಅಂದಾಗ ಹಿಂಸೆ-ಭಯೋತ್ಪಾದನೆಗೆ ಆಸ್ಪದವೇ ದೊರೆಯ ದಂತಾಗುತ್ತದೆ. ಹಿಂಸೆ-ಭಯೋತ್ಪಾದನೆಯನ್ನು - ಸದೆ ಬಡೆಯುವ ಸರಳಮಾರ್ಗ ದುಡಿಮೆಯಲ್ಲಿಯೇ ಸಕಲ ಭಾಗ್ಯವನ್ನು ಕಂಡುಕೊಳ್ಳುವುದಾಗಿದೆ. ನಮ್ಮ ಸುತ್ತಮುತ್ತ ಬಂದೂಕಿನ ಗುರಿ ಇದೆ ಎಂದು ಅಡಗಿ ಕುಳಿತರೆ ಮಾನವನ ಬದುಕಿನ ಮಹತ್ತರ ಉದ್ದೇಶವೇ ವಿಫಲಗೊಳಿಸಿದಂತೆ ಆಗುತ್ತದೆ. ಬಂದೂಕಿಗೂ ದುಡಿಮೆಯ ದೀಕ್ಷೆ ತೊಡಿಸುವ ಧೈರ್ಯ-ಚೈತನ್ಯ ಹೊರಹೊಮ್ಮುವ ಕಾಲಘಟ್ಟ ನಿರ್ಮಿಸುವುದೇ ಶ್ರಮಶಕ್ತಿಯ ಕಾರ್ಯವಾಗಿದೆ.



ಮಣ್ಣಿನ ಲೋಕದ ರೈತನಿಗೂ ಬಣ್ಣದ ಲೋಕದ ರೈತನಿಗೂ ಇರೋ ವ್ಯತ್ಯಾಸವನ್ನೇ ಇಲ್ಲೀವರೆಗೂ ತಿಳ್ಕೊಂಡಿರಲಿಲ್ಲಾ ಅನ್ಸುತ್ತೆ ಅಲ್ವೇ..?!

ಶ್ರಮದ ಕಾಯಕವನ್ನೇ ನಿರ್ವಹಿಸಲು ಮುಂದಾಗದಿರುವ ಜನಾಂಗವಿಂದು ಬಂದೂಕು ಹಿಡಿದು ಹಸಿವು-ಬಡತನ ಹರಿದುಕೊಳ್ಳಲು ಮುಂದಾಗಿರುವ ಜೊತೆಗೆ ಬಾಳಿನ ಮೂಲ ಉದ್ದೇಶವನ್ನೇ ಅರಿಯದಷ್ಟು ಜಡತ್ವವನ್ನು ತಂದುಕೊಂಡಿದೆ. ಮಾನವ ಬದುಕಿಗೆ ಕಳಂಕ ಹಚ್ಚಲು ಪೈಪೋಟಿಗಿಳಿದಿರುವ ಬಹುಮಂದಿಯ ಮನಃಸ್ಥಿತಿಯು ಹದವಾಗಿರದ್ದನ್ನು ಸೂಚಿಸುತ್ತದೆ. ಶ್ರಮದ ದುಡಿಮೆಯಿಂದ ದೂರಾಗುತ್ತಿರುವ ಇಂದಿನ ಮಾನವನ ಕಾರ್ಯ ಚಟುವಟಿಕೆಗಳನ್ನು ನಿರೀಕ್ಷಿಸಿರುವ ಜಗತ್ತಿನ ಪ್ರಸಿದ್ಧ ವಿದ್ವಾಂಸ ರಾಟ್ರೆ ಟೈಲರ್ ಅವರ ಈ ಮಾತು ಮನುಕುಲಕ್ಕೆ ಎಚ್ಚರಿಕೆಯ ದಾಟಿಯ ದಾಗಿದೆ: ಸುಮಾರು ಕ್ರಿ.ಶ. ೨೦೫೦ರ ವೇಳೆಗೆ ನಮ್ಮ ಮಾನವ ಸಮಾಜ ಒಂದು ಪ್ರಾಣಿಗಳ ಒಕ್ಕಲು ಪ್ರದೇಶಕ್ಕೆ ಸಮವಾಗುತ್ತದೆ. ಬೇರೇನೂ ಅಲ್ಲ. ಮನುಷ್ಯ ಅನೇಕ ಭಾರಗಳನ್ನು ಶ್ರಮಗಳನ್ನು ಕಳಚಿಕೊಂಡು ಇಂದು ತನಗೆ ತಾನೇ ಭಾರವಾಗಿದ್ದಾನೆ. ಯಂತ್ರಗಳ ಸಹಾಯದಿಂದ ಬದುಕನ್ನು ತೂಗಿಕೊಳ್ಳಲು ಹೊರಟಿರುವ ಇಂದಿನ ಮಾನವ ಯಂತ್ರಗಳ ಗುಲಾಮನಾಗುತ್ತಿದ್ದಾನೆಂಬ ಮಾತಿನಲ್ಲಿ ಬದುಕಿನ ಆಂತರ್ಯದ ಅರ್ಥ ತುಂಬಿದೆ. ಮನುಷ್ಯನ ಬದುಕಿನಲ್ಲಿ ನಂಬಿಕೆ-ವಿಶ್ವಾಸಗಳಂಥ ಸಾಮಾನ್ಯ ಸಂಗತಿಗಳು ಮಾಯವಾದಾಗ ಅತಂತ್ರ, ಅಳುಕು, ಭಯಭೀತಿ, ಅಸ್ಥಿರತೆ, ಅಧೀರತೆ, ನಿರಾಸಕ್ತಿ ಒಡಮೂಡಿ ಅಮಾನುಷ ಕೃತ್ಯಕ್ಕೆ ಯಥಾವತ್ತಾಗಿ ಧುಮುಕುವ ಸಾಧ್ಯತೆಯೊಂದಿಗೆ ನ್ಯಾಯಪರ ಹೋರಾಟದ ಮುಖವಾಡಕ್ಕೆ ಬೆಂಬಲ ಪಡೆಯುವುದೂ ಸಹ ಸಹಜಗೊಳ್ಳುತ್ತದೆಂಬ ಎಚ್ಚರಿಕೆ ಇರಬೇಕಾದ್ದು ಅವಶ್ಯಕ.

ಮಾನವ ಬದುಕು ಹೋರಾಟದ ಚಿಲುಮೆಯಾಗಿದೆ. ಸಕಾರಾತ್ಮಕ ಎಲ್ಲ ಬೆಳವಣಿಗೆ-ಪ್ರಗತಿ-ಅಭಿವೃದ್ಧಿಗೆ ಹೋರಾಟವೇ ಶಕ್ತಿಯಾಗಿದೆ. ರಚನಾತ್ಮಕ ಪ್ರಗತಿಯ ಪ್ರತಿ ಹಂತದಲ್ಲಿ ಮಾನವ ಸದ್ಭಾವದ ತುಡಿತ-ಮಿಡಿತಗಳಿವೆ. ಸದ್‌ವಿವೇಕದ ಮಾನವನ ಮನಸ್ಸಿನಲ್ಲಿ ತುಳುಕಾಡುತ್ತಿರುವ ದುರಾಸೆ, ಮಹತ್ವಾಕಾಂಕ್ಷೆ, ಸುಖ-ಅಧಿಕಾರ-ಸಂಪತ್ತಿನ ಲಾಲಸೆಗಳು ಎಬ್ಬಿಸಿರುವ ಬಿರುಗಾಳಿಯು ಮನು ಕುಲವನ್ನು ವಿನಾಶಕ್ಕೆ ನೂಕುತ್ತಿರುವುದರ ವಿರುದ್ಧ ರಚನಾತ್ಮಕ ಅಷ್ಟೇ ಶಾಂತಿ-ಅಹಿಂಸೆಯುತ ಹೋರಾಟದ ಅಗತ್ಯವಿದೆ. ಯಾವ ಆಧುನಿಕ ಶಸ್ತ್ರಾಸ್ತ್ರಗಳೂ ಬದುಕಿಗೆ ನೆಮ್ಮದಿ ತರಲಾರವು. ಹಿಂಸಾತ್ಮಕ ಭಯೋತ್ಪಾದನೆ, ವಿಧ್ವಂಸಕ ಹೋರಾಟಗಳು ಎಂದೂ ಹಸಿವು-ಬಡತನ ಹಿಂಗಿಸಲಾರವೆಂಬ ಸಾಮಾನ್ಯ ಅರಿವನ್ನು ಪಸರಿಸುವ ಅಗತ್ಯ ಇಂದಿನದಾಗಿದೆ.

ಸ. ರಾ. ಸುಳಕೂಡೆ
೧೩೧೯, ರಾಮತೀರ್ಥನಗರ, ಬೆಳಗಾವಿ - ೫೯೦ ೦೧೫

# ಪತ್ರಿಕೆಯ ಸುದ್ದಿ

ಪತ್ರಿಕೆಯಲ್ಲಿ
ಬೇಯುತ್ತಿರುವ ಪ್ರತಿ ಹೆಣ್ಣಿನ ಸುದ್ದಿ
ಓದಿ ನನಗನಿಸುತ್ತದೆ
ಆ ಬೆಂಕಿಯ
ಜ್ವಾಲೆಯ ಕಾವು
ರಾಚುತ್ತಲಿದೆ
ಎಲ್ಲೋ ನನ್ನ ತನಕವೂ ಎಂದು
ಪ್ರತಿ ಬಾರಿ
ನೊಂದು ಕರಕಲಾಗುತ್ತೇನೆ
ಆದರೆ ಚಿಕಿತ್ಸೆಯಾಗುವುದೇ ಇಲ್ಲ.

ಮನೆಯೊಳಗೆ ಬಿದ್ದಿರುವ
ಟಿ. ವಿ., ಫ್ರಿಜ್, ಸ್ಕೂಟರ್
ಇವನ್ನೆಲ್ಲ ನೋಡುತ್ತಾ
ಮನದೊಳಗೆ
ಇವೆಲ್ಲ ನನಗಾಗಿ
ಎನ್ನುವ ಭಾವ ಮೂಡುವುದೇ ಇಲ್ಲ.

ಹೀಗನಿಸುತ್ತದೆ ನನಗೆ
ನಾನಿದ್ದೇನೆ
ಏಕೆಂದರೆ ಇವೆಲ್ಲಾ ಇವೆ
ಅಥವಾ
ಎಲ್ಲಿಯ ತನಕ
ಇವೆಲ್ಲ ಇರುತ್ತವೋ ಅಲ್ಲಿವರೆಗೆ ಮಾತ್ರ
ನಾನಿರುತ್ತೇನೆ.

ಇವೆಲ್ಲ ನಷ್ಟವಾಗುತ್ತಲೆ
ಬರುತ್ತವೆ ಎರಡು ಮೂರು ಜೋಡಿ ಕೈ
ನನ್ನ ಕೊರಳು, ಕುರುಳನ್ನು
ಬಿಗಿದು ಹಿಡಿಯಲು
ಆಗ ನನ್ನ ರೋಮ ರೋಮ
ಚೀತ್ಕರಿಸಿಯಾವು.

ಆದರೆ ಪ್ರತಿಯೊಂದು ದನಿ
ನುಸುಳಿ ಹೋಗುತ್ತದೆ
ಗದ್ದಲದ
ಸಂತೆಯೊಳಗೆ
ಆಗಲೇ ತುಳುಕಿಬಿಡುತ್ತದೆ
ಕೆಲ ಲೀಟರು ಗ್ಯಾಸು
ಕಿಡಿ ಕಾರುತ್ತದೆ ಬೆಂಕಿ ಕಡ್ಡಿ
ಮತ್ತೆ ನಾನು...
ನಾನೂ ಜೀವ ಪಡೆಯುತ್ತೇನೆ
ಪತ್ರಿಕೆಯ ಸುದ್ದಿಯಾಗಿ.



ಹಿಂದಿ ಮೂಲ : ಸುನೀತಾ ಶರ್ಮ
ಅನು : ತಾ. ಶ್ರೀ. ಗುರುರಾಜ್ ಎಲ್ಲಾಪುರ
ಅಧ್ಯಾಪಕರು, ಪ್ರೌಢಶಾಲಾ ವಿಭಾಗ, ಸರ್ಕಾರಿ ಪದವಿ ಪೂರ್ವ ಕಾಲೇಜು, ವಿಜಯಪುರ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ

# ಬುಧಾವಲೋಕನಕ್ಕೊಂದು ಅವಕಾಶ

**ಮೋ**ಡ ಬಿಡುವು ಕೊಡಬಹುದು ಎಂದು ಆಶಿಸಬಹುದಾದ ತಿಂಗಳು ಇದು. ಆದುದರಿಂದ ನಕ್ಷತ್ರ ಲೋಕದ ವಿಶ್ವರೂಪ ಪ್ರತ್ಯಕ್ಷವಾದರೆ ಆಶ್ಚರ್ಯವಿಲ್ಲ. ಚಂದ್ರನಿಲ್ಲದಾಗ ಶುಭ್ರ ಆಕಾಶ ದೊರಕಿದರಂತೂ ವೀಕ್ಷಿಸಲು ಮರೆಯದಿರಿ. ಏಕೆಂದರೆ ಸಂಜೆಯ ಆಕಾಶ ನಮ್ಮ ಗೆಲಾಕ್ಸಿ ಆಕಾಶಗಂಗೆಯ ಸುಂದರ ನೋಟ ಒದಗಿಸುತ್ತದೆ. ಗುರುಗ್ರಹದ ಹೊರತಾಗಿ ಸಂಜೆಯ ಆಕಾಶದಲ್ಲಿ ಯಾವ ಪ್ರಕಾಶಮಾನ ಚುಕ್ಕೆಯೂ ಇಲ್ಲ. ಅದರ ಸಹಾಯದಿಂದ ವೃಶ್ಚಿಕರಾಶಿ ಮತ್ತು ಧನುರಾಶಿಗಳನ್ನು ಗುರುತಿಸುವುದು ಸುಲಭ. ಆಕಾಶಗಂಗೆಯ ಹರಿವು ಆರಂಭವಾಗುವುದೇ ಅದರ ಸನಿಹದಲ್ಲಿ. ಉತ್ತರಕ್ಕೆ ಹೊರಟಿರುವ ಭಾಗವನ್ನು ಗಮನಿಸಿ. ಅದು ಲೈರಾ (ವೀಣಾ) ಮತ್ತು ಅಕ್ವಿಲಾ (ಗರುಡ) ಮೂಲಕ ಹರಿಯುತ್ತದೆ. ನದಿಯ ಆಚೀಚೆ ಇರುವ ಈ ಎರಡು ಪುಂಜಗಳ ಪ್ರಖರ ನಕ್ಷತ್ರಗಳು ಅಭಿಜಿತ್ ಮತ್ತು ಶ್ರವಣ. ವಿರಹಿಗಳ ಕತೆಯೊಂದು ಸೃಷ್ಟಿಯಾಗಲು ಇದು ಸೊಗಸಾದ ಮಂಚಿಕೆ ಒದಗಿಸಿದೆ. ತಂದೆಯ ಹಟಕ್ಕೆ ಮಣಿದ ತರುಣಿ ನದಿಯ ಈ ಬದಿಯಲ್ಲಿ; ನದಿ ದಾಟಲಾರದ ತರುಣ ಆ ಬದಿಯಲ್ಲಿ, ಇವರಿಬ್ಬರ ಪ್ರೇಮ ಸಂದೇಶ ರವಾನೆಗೊಂದು ಹಂಸ. ಅದೇ ರಾಜಹಂಸ (ಸಿಗ್ನಸ್). ಈ ಮೂರೂ ಪುಂಜಗಳ ಮೂರು ಪ್ರಖರ ನಕ್ಷತ್ರಗಳು ಅಂದಾಜಾಗಿ ಸಮಬಾಹು ತ್ರಿಕೋಣ ರಚಿಸುತ್ತವೆ. ಇದನ್ನು ಐರೋಪ್ಯರು ಬೇಸಿಗೆ ತ್ರಿಕೋಣ ಎಂದು ಕರೆದಿದ್ದಾರೆ. ಪೂರ್ವದಲ್ಲಿ ಮಕರ ಮತ್ತು ಕುಂಭ ಎರಡೂ ಕ್ಷೀಣ ಪುಂಜಗಳು. ಉತ್ತರದಲ್ಲಿ ಸಪ್ತರ್ಷಿಗಳು. ನೆತ್ತಿಯ ಮೇಲಿರುವುದರಿಂದ ಕ್ಷೀಣವಾದರೂ ಹರ್‌ಕ್ಯುಲಿಸ್ (ಭೀಮ) ಅನ್ನು ಗುರುತಿಸುವುದು ಸಾಧ್ಯ.

ನೀಲಿ ನಕ್ಷತ್ರ ಚಿತ್ರಾ ಮತ್ತು ಕೆಂಪು ಸ್ವಾತಿ ಪಶ್ಚಿಮದತ್ತ ಸರಿದಿವೆ. ಸಂಜೆಯಲ್ಲಿ ಕಾಣಬಹುದಾದ ಮತ್ತೊಂದು ಗ್ರಹ ಬುಧ. ಇದು ದಿಗಂತದ ಅಂಚಿನಲ್ಲಿ ಚಿತ್ರಾ ನಕ್ಷತ್ರದ ಆಸುಪಾಸಿನಲ್ಲೇ ಕಾಣುತ್ತದೆ. ೨೨ರಂದು ಅಕ್ಕಪಕ್ಕದಲ್ಲೇ ಕಾಣುವುವು. ಆ ಮುಂದೆಯೂ ಈ ಎರಡು ಚುಕ್ಕೆಗಳನ್ನು ಗಮನಿಸುತ್ತಿರಿ. ಚಿತ್ರಾ ದೂರ ಸರಿದು ದಿಗಂತದ ಅಂಚಿನಲ್ಲಿ ಮಂಕಾಗಿ ಕಳೆದೇಹೋಗುವುದು; ಆದರೆ ಬುಧ ಸಂಜೆಗೆಂಪಿನಿಂದ ಮೇಲೇರತೊಡಗುವುದು, ಪ್ರಕಾಶಮಾನವಾಗುವುದು, ತಿಂಗಳ ಕೊನೆಗೆ ಸ್ಫುಟವಾಗಿ ಕಾಣುವುದು. ಬುಧಾವಲೋಕನಕ್ಕೆ ಇದು ಅತ್ಯುತ್ತಮ ಅವಕಾಶ.

ಸಂಜೆಯ ಆಕಾಶದಿಂದ ಸರಿದ ಶುಕ್ರಗ್ರಹ ಬೆಳಗಿನ ಜಾವ ಕಾಣತೊಡಗುವುದು. ಸುಮಾರು ೧೫ನೆಯ ತಾರೀಖಿನ ನಂತರ ಇದನ್ನು ಗುರುತಿಸಲು ಏನೇನೂ ಕಷ್ಟ ಪಡಬೇಕಾಗುವುದಿಲ್ಲ. ಶನಿ ಗ್ರಹವೂ ಬೆಳಗಿನ ಆಕಾಶಕ್ಕೆ ಸರಿದಿದೆಯಾದರೂ ಸಂಜೆಗೆಂಪಿನಲ್ಲಿ ಗುರುತಿಸುವುದು ಕಷ್ಟ. ಅಮಾವಾಸ್ಯೆಯ ಎರಡು ದಿನ ಮುಂಚೆ ಚಂದ್ರನಿಗೆ ಅಂಟಿಕೊಂಡಂತೆ ಕಾಣುವ ಚುಕ್ಕೆಯೇ ಶನಿ. ಮಧ್ಯ ರಾತ್ರಿಯ ಹೊತ್ತಿಗೆ ಉದಯಿಸುವ ಮಂಗಳ ಗ್ರಹ ಬೆಳಗಿನ ಜಾವ ಕಾಣುವುದು. ವೃಷಭದಿಂದ ಮಿಥುನದತ್ತ ಓಡುವುದು.

ಆಗಸ್ಟ್ ತಿಂಗಳ ಉಲ್ಕಾವೃಷ್ಟಿಯ ನಂತರ ಈಗ ಬಿಡುವು: ಸುಮಾರು ಮುಂದಿನ ತಿಂಗಳವರೆಗೂ.

ತನ್ನ ಕಕ್ಷೆಯಲ್ಲಿ ಮುಖ್ಯ ಹಂತವನ್ನು ಭೂಮಿ ೨೩ರಂದು ದಾಟಲಿದೆ. ಅದೇ ಶರದ್ ವಿಷುವ. ಹಗಲು ರಾತ್ರಿಗಳ ಅವಧಿ ಸಮ. ಕೆಲವೊಂದು ಸಂಸ್ಕೃತಿಗಳಲ್ಲಿ ಹೊಸ ವರ್ಷಕ್ಕೆ ಇದೇ ನಾಂದಿ. (ನಮ್ಮಲ್ಲಿಯ ಯುಗಾದಿಗೆ ವಸಂತ ವಿಷುವ ಆಧಾರ)

ಈ ತಿಂಗಳಲ್ಲೊಂದು ಗ್ರಹಣವೂ ಇದೆ. ಆದರೆ ನಮಗೆ ಕಾಣುವುದಿಲ್ಲ.

ಸೆಪ್ಟೆಂಬರ್ ೧೮ರ ಸಂಜೆ ವೃಶ್ಚಿಕರಾಶಿಯಲ್ಲಿ ಚಂದ್ರ, ಗುರು ಮತ್ತು ಜ್ಯೇಷ್ಠ

## ಖಗೋಳ ದಿನಚರಿ

೪ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
ಚಂದ್ರ-ಮಂಗಳ ಸಮಾಗಮ* (೬ ಡಿಗ್ರಿ)
೭ ಶುಕ್ರ ತಟಸ್ಥ (ಹಿನ್ನಡೆ ಮುಕ್ತಾಯ)
೮ ಶುಕ್ರ - ಚಂದ್ರ ಸಮಾಗಮ* (೧೦ ಡಿಗ್ರಿ)
೯ ಶುಕ್ರ - ಶನಿ ಸಮಾಗಮ*
೧೦ ಚಂದ್ರ-ಶನಿ ಸಮಾಗಮ* (ಆಚ್ಛಾದನೆ ಕಾಣುವುದಿಲ್ಲ); ಚಂದ್ರ ಕೇತು ಬಿಂದುವಿನಲ್ಲಿ
೧೧ ಅಮಾವಾಸ್ಯೆ (೧೮:೪೪ಕ್ಕೆ) ಪಾರ್ಶ್ವ ಸೂರ್ಯ ಗ್ರಹಣ ೧೫:೫೬ ರಿಂದ ೨೦:೦೭ ರವರೆಗೆ. ಭಾರತಕ್ಕೆ ಕಾಣುವುದಿಲ್ಲ
೧೩ ಬುಧ - ಚಂದ್ರ ಸಮಾಗಮ* (೩ ಡಿಗ್ರಿ)
೧೫ ಚಂದ್ರ - ಭೂಮಿ ಗರಿಷ್ಠ ಅಂತರ
೧೮ ಗುರು - ಚಂದ್ರ ಸಮಾಗಮ* (೬ ಡಿಗ್ರಿ)
೧೯ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೨ ಬುಧ-ಚಿತ್ರಾ ೦.೧ ಡಿಗ್ರಿ ಅಂತರದಲ್ಲಿ*
೨೩ ಶರದ್ ವಿಷುವ ೧೫:೨೧ಕ್ಕೆ
ಶುಕ್ರದ ಗರಿಷ್ಠ ಪ್ರಕಾಶ
೨೫ ಚಂದ್ರ ರಾಹು ಬಿಂದುವಿನಲ್ಲಿ
೨೭ ಹುಣ್ಣಿಮೆ ೦೧:೧೫ಕ್ಕೆ
೨೮ ಚಂದ್ರ-ಭೂಮಿ ಅಂತರ ಕನಿಷ್ಠ
೨೯ ಬುಧ ಗ್ರಹದ ಗರಿಷ್ಠ ಕೋನೋನ್ನತಿ *

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ,
ಹೈ ಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

**ಬೆಂ**ಗಳೂರು ನಗರ ಮಧ್ಯೆಯಲ್ಲಿದ್ದ ಕೇಂದ್ರ ಕಾರಾಗೃಹದ ಹೊರನೋಟ ನನಗೆ ಹೊಸತೇನೂ ಅಲ್ಲ. ಸುಮಾರು ಐವತ್ತು ವರ್ಷಗಳಿಂದ ಕಾಣುತ್ತಿರುವ ಪರಿಚಿತ ದೃಶ್ಯ. ಅದೊಂದು ಐತಿಹಾಸಿಕ ಮಹತ್ವವುಳ್ಳ ಸೆರೆಮನೆ. ಬ್ರಿಟಿಷರಿಂದ ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ, ಇಪ್ಪತ್ತೆರಡು ಎಕರೆ ವಿಸ್ತೀರ್ಣದಲ್ಲಿ ನಿರ್ಮಾಣವಾದದ್ದು. ಮುಂದೆ, ಅನೇಕ ಸ್ವಾತಂತ್ರ್ಯ ಹೋರಾಟಗಾರರು, ಸತ್ಯಾಗ್ರಹಿಗಳು ಮುಂತಾದವರು ಸೆರೆವಾಸ ಮಾಡಿದ ಸ್ಥಳವೂ ಆಗಿತ್ತು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಭಾರತದ ವಿಖ್ಯಾತ ರಾಜಕೀಯ ನಾಯಕರನ್ನೂ ಅಲ್ಲಿ ಇರಿಸಲಾಗಿತ್ತು. ನಾನು ಮಹಾರಾಣಿ ಕಾಲೇಜಿಗೆ ವರ್ಗವಾಗಿ ಬಂದಾಗ, ಎದುರಿನ ಕೇಂದ್ರ ಸೆರೆಮನೆ ದಿನನಿತ್ಯದ ನೋಟ. ವಿಶಾಲ ಕಾಂಪೌಂಡಿನಲ್ಲಿ ಜನಸಂದಣಿ, ಅಪರಾಧಿಗಳನ್ನು ಕಾಣಲು-ಭೇಟಿಯಾಗಲು ಕಾಯುತ್ತಿರುವ ಬಂಧುಗಳ, ಕೆಲವೊಮ್ಮೆ ಎಳೆ ಮಕ್ಕಳ ಸಮೇತ ಬಂದಿರುವ ಮಹಿಳೆಯರ ಸಾಲು, ಪೊಲೀಸ್ ವಾಹನಗಳು, ಹೆಬ್ಬಾಗಿಲ ಹೊರಗೆ ಕಡಲೆಕಾಯಿ ಇತ್ಯಾದಿ ಮಾರುವವರು, ಹೀಗೆ ಜನ ನಿಬಿಡ ಚಟುವಟಿಕೆಯ ದೃಶ್ಯಗಳು. ನಮಗೆ ಏನೆಲ್ಲ ಭಾವನೆಗಳು, ಆದರೆ ಅವೂ ರೂಢಿಯಾದಂತೆ ನಿರ್ಭಾವಿಕ ವ್ಯವಹಾರ. ಒಮ್ಮೆ ಡಿ.ಜಿ.ಪಿ. (ಪ್ರಿಸನ್ಸ್) ಆಗಿದ್ದ ಹಿರಿಯ ಮಿತ್ರರಾದ ಸಿ. ಎಸ್. ಮಲ್ಲಯ್ಯನವರು ನನ್ನನ್ನೂ, ಹಿರಿಯರಾದ ಪ್ರೊ॥ ಎಸ್. ಸತ್ಯನಾರಾಯಣರಾವ್ ಅವರನ್ನೂ ಆಹ್ವಾನಿಸಿ ಸೆರೆಮನೆಯ ವಿವಿಧ ಭಾಗಗಳನ್ನು ತೋರಿಸಿದ್ದನ್ನು ಮರೆಯುವಂತಿಲ್ಲ. ಅವರು ಮಾಡಿದ ಪ್ರಯೋಗಗಳ ವಿವರ, ತರಕಾರಿ ಬೆಳೆಸಿ, ಹೊರಗೆ ಮಾರಾಟ ಮಾಡಿ, ಆ ಹಣವನ್ನು ಅಪರಾಧಿಗಳ ಹೆಸರಿನಲ್ಲಿ ಜಮಾ ಮಾಡುವುದು, ಆಗ ನಡೆದ ಕೆಲವು ಸ್ವಾರಸ್ಯ ಘಟನೆಗಳು ಇತ್ಯಾದಿ. ಗಲ್ಲುಗಂಬದ ಸ್ಥಳ - ಮೌನಿಯಾಗುವಂತೆ ಮಾಡಿತ್ತು. ಅಪರಾಧಿಗಳ ಕೊಠಡಿಗಳು- ಆಗೆಲ್ಲ ನಮ್ಮ ಗಮನ ಅಪರಾಧಿಗಳ, ಅವರ ಸಮವಸ್ತ್ರ ಇತ್ಯಾದಿ ಆ ಕಡೆಗೇ ಇತ್ತು. ಮುಂದೊಮ್ಮೆ ಯಾವುದೋ ಸಂದರ್ಭ, ಉಪನ್ಯಾಸ ನೀಡಲು ಹೋಗಿದ್ದುದೂ ನೆನಪು. ಉಪನ್ಯಾಸ ನೆನಪಿಲ್ಲ. ವಿಶಾಲ ಹಜಾರದಲ್ಲಿ ಸಾಲಾಗಿ ಶಿಸ್ತಿನಿಂದ ಕುಳಿತಿದ್ದ ಕೈದಿಗಳು. ಅದೊಂದು ಬಗೆಯ ಸಾಮಾಜಿಕ ಇಂಟರ್ ಆ್ಯಕ್ಷನ್ ಕಾರ್ಯಕ್ರಮ. ಮುಂದೆ, ಕೆ. ಎಸ್. ಭಗವಾನ್ ಅವರು ರೂಪಾಂತರಿಸಿದ್ದ ಷೇಕ್ಸ್‌ಪಿಯರ್ ನಾಟಕವನ್ನು ಕೈದಿಗಳೇ ಅಭ್ಯಾಸ ಮಾಡಿ ಯಶಸ್ವಿಯಾಗಿ ಪ್ರದರ್ಶಿಸಿದ್ದನ್ನು ಪತ್ರಿಕೆಗಳಲ್ಲಿ ಓದಿದ್ದೆ. ಅಪರಾಧಿ ಕೈದಿಗಳಲ್ಲೂ ಇದ್ದ ಒಳಸತ್ವದ ಪ್ರಕಾಶನ ಎಂಬಂತೆ.

ಈಗ ಅಲ್ಲಿ ಸೆಂಟ್ರಲ್ ಜೈಲ್ ಇಲ್ಲ. ಕಟ್ಟಡಗಳನ್ನು ಒಡೆದುಹಾಕಲಾಗಿದೆ. ಕಾರಾಗೃಹ ಪರಪ್ಪನ ಅಗ್ರಹಾರಕ್ಕೆ ಸ್ಥಳಾಂತರವಾಗಿದೆ. ಸ್ಥಳಾಂತರಗೊಂಡಾಗ ಎಲ್ಲ ಸಾಮಾನು, ಪರಿಕರ, ಉಪಕರಣ, ಮರಮುಟ್ಟು ಇತ್ಯಾದಿಯನ್ನೂ ಖಾಲಿ ಮಾಡಿ ಒಯ್ಯಲಾಯಿತು. ಕಟ್ಟಡ ಕೆಡವುವ ಮುನ್ನ ಈ ನಡುವಿನ ಅಂತರದಲ್ಲಿ ಕಲಾವಿದ ರಾಘವ ಶ್ರೇಯಸ್ ತೆಗೆದ ಛಾಯಾಚಿತ್ರಗಳ ಸಂಗ್ರಹ ಮಾತ್ರ ಉಳಿದಿದೆ. ಅವುಗಳ ಪ್ರದರ್ಶನ ಕಂಡಾಗ ಒಂದು ಐತಿಹಾಸಿಕ ಸೆರೆಮನೆಯ ಪಳೆಯುಳಿಕೆಗಳು ಎಂಬ ಭಾವ ಮೂಡಿತು. ಇದು ಬೇರೆಯೇ ಒಂದು ಪ್ರಪಂಚವನ್ನು ತೋರುವಂತಹುದು. ಇದುವರೆಗೆ ಕಂಡಿದ್ದ ಹೊರ ನೋಟಕ್ಕಿಂತ ಭಿನ್ನವಾದ ಒಳನೋಟ ನೀಡುವಂತಹುದು. ಸೆರೆಮನೆಯ ಒಳಗಿನ ಬಗೆಬಗೆಯ ನೋಟಗಳೆಂದಲ್ಲ. ಕೈದಿಗಳ ಅಂತರಂಗಕ್ಕೆ, ಮನೋಲೋಕಕ್ಕೆ ಇಣುಕು ನೋಟವೂ ಆಗುತ್ತದೆ ಎನಿಸಿತು. ಅಲ್ಲಿ ಛಾಯಾಚಿತ್ರಗಳ ಮೂಲಕ ಇನ್ನೊಂದು ಲೋಕವೇ ತೆರೆದುಕೊಳ್ಳುತ್ತದೆ.

* * *

ಲ್ಯಾವೆಲಿ ರಸ್ತೆಯ ಟೈಮ್ಸ್ ಅಂಡ್ ಸ್ಪೇಸ್ ಆರ್ಟ್ ಗ್ಯಾಲರಿಯಲ್ಲಿ ೨೦೦೭, ಜುಲೈ ೬ ರಿಂದ ೧೨ರವರೆಗೆ 'ದಿ ಇನ್ವಿಸಿಬಲ್ ಟೌನ್' ಶೀರ್ಷಿಕೆಯ ಛಾಯಾಚಿತ್ರ ಪ್ರದರ್ಶನ. ಛಾಯಾಚಿತ್ರ ಕಲಾವಿದ ರಾಘವ ಶ್ರೇಯಸ್ ಬರೋಡಾದ ಎಂ.ಎಸ್. ವಿಶ್ವವಿದ್ಯಾಲಯದ ಬಿ.ಎಫ್.ಎ. ಪದವೀಧರರು. ಕಳೆದ ಐದು ವರ್ಷಗಳಿಂದ ಛಾಯಾಚಿತ್ರ ಕಲೆಯನ್ನು ಅಪೂರ್ವ ದಾಖಲಾತಿಗಳಿಗಾಗಿ, ಸಾಕ್ಷ್ಯಚಿತ್ರಗಳಿಗಾಗಿ ಬಳಸಿ ಕಾರ್ಯನಿರತರಾಗಿರುವವರು. ಅನೇಕ ಛಾಯಾಚಿತ್ರ ಕಮ್ಮಟಗಳನ್ನು, ರಸಾಸ್ವಾದನಾ ಶಿಬಿರಗಳನ್ನು ನಡೆಸಿರುವವರು, ಕಲಾ ಶಿಕ್ಷಣ ಸಂಸ್ಥೆಗಳಲ್ಲಿ ಉಪನ್ಯಾಸ ನೀಡಿರುವವರು. ತಂದೆ ಹವ್ಯಾಸಿ ಛಾಯಾಚಿತ್ರಗಾರರಾಗಿದ್ದರು. ಅವರ ನಿಧನಾನಂತರ, ತಾಯಿ ಕೊಡಿಸಿದ ಕ್ಯಾಮೆರಾ, ಅನಂತರ ಅವರಿಗೆ ಹೊಸ ಲೋಕ, ಕ್ಷೇತ್ರದ ಬಾಗಿಲನ್ನೇ ತೆರೆಯಿಸಿತು. ಛಾಯಾಚಿತ್ರ ತಂತ್ರ, ಕಲಾತ್ಮಕತೆ, ವೃತ್ತಿಪರತೆಗಳು ಕೈಗೂಡುತ್ತವೆ. ಅದಕ್ಕಿಂತ ವಸ್ತು, ವಿಷಯಗಳ ಮೂಲಕ ಬದುಕಿನ ಅರ್ಥದ ಹುಡುಕಾಟದ ಕಡೆಗೆ ಅವರ ಆಸಕ್ತಿ. ಸಾಮಾನ್ಯ ವಿಷಯ, ದೃಶ್ಯ, ನೋಟಗಳೂ ಆಂತರಿಕ ಅರ್ಥ ಪ್ರಕಾಶನಕ್ಕೆ ಅವಕಾಶ ಕಲ್ಪಿಸುತ್ತವೆ. ಛಾಯಾಚಿತ್ರಗಳ ಸೂಚ್ಯತೆ, ಧ್ವನಿ, ಸೂಕ್ಷ್ಮ ವಿವರಗಳು ವಿಶೇಷ ಅನುಭವ, ಚಿಂತನೆಗಳಿಗೆ ಎಡೆಮಾಡುತ್ತವೆ ಎಂಬ ದೃಷ್ಟಿ ಅವರದು. ಗೆಳೆಯ ರಾಘವೇಂದ್ರರು ಸೆರೆಮನೆಯ ಬಗ್ಗೆ ಗಮನ ಸೆಳೆದಾಗ ಮೊದಲು ಆಸಕ್ತಿ ಮೂಡಲಿಲ್ಲ ಎನ್ನುತ್ತಾರೆ. ಆದರೆ, ಒಮ್ಮೆ ಸೆರೆಮನೆ ಒಳಹೊಕ್ಕಾಗ ಆಶ್ಚರ್ಯ ಕಾದಿತ್ತು ಎನ್ನುತ್ತಾರೆ. ಅನುಮತಿ ಪಡೆದು ತೆಗೆದ ಚಿತ್ರಗಳು ಮುನ್ನೂರರಷ್ಟು. ಅಂದು ಪ್ರದರ್ಶಿತಗೊಂಡಿದ್ದ ಚಿತ್ರಗಳು ಕೇವಲ ಇಪ್ಪತ್ತೊಂಬತ್ತು. ಆಯ್ಕೆ ಹೇಗೆ ಮಾಡಿದಿರಿ, ಒಂದು ವಿಷಯ, ಸೂತ್ರ ಏನಾದರೂ ಯೋಚಿಸಿದ್ದಿರಾ ಎಂದು

# ಒಂದು ಸೆರೆಮನೆಯ ಪಳೆಯುಳಿಕೆಗಳು

ಪ್ರೊ॥ ಎಂ. ಎಚ್. ಕೃಷ್ಣಯ್ಯ



ಕೇಳಿದ್ದಕ್ಕೆ ಹಾಗೇನೂ ಇಲ್ಲ ಎನ್ನುತ್ತಾರೆ. ಆಯ್ಕೆಯಲ್ಲಿ ಅವರ ಅಪ್ರಜ್ಞೆಯೂ ನೆರವಾಗಿರಬಹುದು ಎನಿಸುತ್ತದೆ. ಚಿತ್ರಗಳಲ್ಲಿ ರೂಪಪ್ರಜ್ಞೆ ಇದೆ. ಕಣ್ಣಿನ ಆಯ್ಕೆ ಇದೆ. ಕೆಲವು ಚಿತ್ರಗಳ ವರ್ಣಸಾಂಗತ್ಯವೂ ಗಮನಾರ್ಹ. ಇಷ್ಟಾದರೂ ನಮ್ಮ ಗಮನ ಸೆಳೆಯುವುದು ಶೂನ್ಯ, ನಿಶ್ಶಬ್ದ, ಮೌನ ತುಂಬಿದ ದೃಶ್ಯಗಳು. ನೋಡುತ್ತ ನೋಡುತ್ತ ಚಿತ್ರಗಳೂ ಮಾತಾಡತೊಡಗುತ್ತವೆ. ನೂರಾರು ಶಬ್ದಗಳು ಹೇಳಲಾರದ್ದನ್ನು ಛಾಯಾಚಿತ್ರಗಳು ವ್ಯಕ್ತಪಡಿಸುತ್ತವೆ.

ಉದ್ಘಾಟನೆಯ ಸಂಜೆ, ಬೆಂಗಳೂರಿನಲ್ಲಿ ಮೊತ್ತ ಮೊದಲನೆಯ ನರ್ಸಿಂಗ್ ಹೋಂ ತೆರೆದ, ಕೇಂದ್ರ ಕಾರಾಗೃಹದ ಪಶ್ಚಿಮದ ಎತ್ತರದ ಗೋಡೆಯಾಚೆ ರಸ್ತೆ ಪಕ್ಕದಲ್ಲಿ ಬೆಂಗಳೂರು ನರ್ಸಿಂಗ್ ಹೋಂ ಪ್ರಾರಂಭಿಸಿ, ಆ ಗೋಡೆ, ಗೋಡೆಯ ಒಳಗಿನ ಆಗು ಹೋಗುಗಳನ್ನು ದಶಕಗಳ ಕಾಲ ಕಂಡಿದ್ದ ೯೦ ವರ್ಷದ ಡಾ|| ಜಯರಾಂ ಅವರು ದೀಪ ಬೆಳಗಿ ಉದ್ಘಾಟನೆ ಮಾಡಿದರು. ಪೊಲೀಸ್ ಅಧಿಕಾರಿ ಶ್ರೀಮತಿ ಜೀಜಾ ಸಿಂಗ್ ಅವರು ಮುಖ್ಯ ಅತಿಥಿ. ಇದರಲ್ಲೂ ಔಚಿತ್ಯ ಸೂಚ್ಯವಾಗಿದೆಯೆ ಎನಿಸಿತು. ಶ್ರೇಯಸ್‌ರ ಹಿಂದಿನ ಪ್ರದರ್ಶನಗಳಿಗೆ ಕಾರಣರಾದ ಕಲಾವಿದ ಗೆಳೆಯರು ಸುರೇಶ್ ಜಯರಾಮ್, ಬಾಬು ಈಶ್ವರ ಪ್ರಸಾದ್ ಮೊದಲಾದ ಶ್ರೇಯೋಭಿಲಾಷಿಗಳು, ಬಂಧುಗಳು ಬಂದಿದ್ದರು. ನಿಧಾನವಾಗಿ ಓಡಾಡುತ್ತ ಸ್ಪಂದಿಸುತ್ತಿದ್ದ ಕಲಾವಿದ ಶ್ರೇಯಸ್. ಬಂದವರಿಗೆ ಛಾಯಾಚಿತ್ರ ಪ್ರದರ್ಶನ ಕುತೂಹಲ ಕೆರಳಿಸಿತ್ತು.

ಚಿತ್ರಗಳು ಬೇರೊಂದು ಲೋಕದ ದರ್ಶನ ಮಾಡಿಸುತ್ತವೆ ಎಂಬುದು ಸಹಜವೇ. ಇದುವರೆಗೆ ಕಾಣಸಿಗದಿದ್ದ ಲೋಕ. ಆದ್ದರಿಂದಲೇ 'ದಿ ಇನ್ವಿಸಿಬಲ್ ಟೌನ್'. ಹದಿಮೂರು ತಿಂಗಳು ಚೈನಾದ ವಿವಿಧ ಸೆರೆಮನೆಗಳಲ್ಲಿದ್ದು, ಹಲವು ಬಗೆಯ ಸಂಕಟಗಳನ್ನು ಅನುಭವಿಸಿಯೂ ದೃಢಸಂಕಲ್ಪ, ಅದಮ್ಯ ಚೈತನ್ಯ ತೋರಿದ ವಿಯಟ್ನಾಮಿನ ಹೊ ಚಿ ಮಿನ್, ಪತ್ರಕರ್ತನೊಬ್ಬನ ಪ್ರಶ್ನೆಗೆ ಕೊಟ್ಟ ಉತ್ತರ : ''ಸೆರೆಮನೆಯಲ್ಲಿ ಕಾಲ ಎಂಬುದು ಯಾವಾಗಲೂ ದೀರ್ಘವೇ.'' ಇಲ್ಲಿನ ಚಿತ್ರಗಳು ಅಪರಾಧಿಗಳ, ಕೈದಿಗಳ 'ಮನೋಕಾಲ'ದ ವ್ಯಕ್ತರೂಪಗಳಾಗಿವೆ. ಸೆರೆಮನೆಯ ಎತ್ತರದ ಗೋಪುರದ ಒಂದು ದೃಶ್ಯದಿಂದ ತೊಡಗಿ ಶೌಚಾಲಯದವರೆಗೆ. ಹೆಬ್ಬಾಗಿಲಿನ ಕಂಬಿಗಳಿಂದ ಬೆಳಕು ಒಳ ಕತ್ತಲೆಗೆ ಹಾಯ್ದಿರುವ ಒಂದು ಛಾಯಾಚಿತ್ರ. ''ಬೆಳಗಿನ ಸೂರ್ಯ ಗೋಡೆಯಾಚೆ ಏರುತ್ತಾನೆ, ಕಿರಣಗಳು ಬಾಗಿಲನ್ನು ತಟ್ಟುತ್ತವೆ, ಆದರೆ ಬೀಗ ಜಡಿದ ಬಾಗಿಲು, ಒಳಗೆ ಸೆರೆಮನೆಯಲ್ಲಿ ಕತ್ತಲೆ ಆವರಿಸಿರುತ್ತದೆ. ಆದರೆ ನಮಗೆ ಗೊತ್ತು, ಸೂರ್ಯ ಬೆಚ್ಚನೆಯ ಬಿಸಿಲು ಹರಿಸಿದ್ದಾನೆಂದು.'' (ಹೊ ಚಿ ಮಿನ್‌ರ ಒಂದು ಚೌಪದಿ – 'ಪ್ರಿಸನ್ ಡೈರಿ'ಯಿಂದ). ಒಂದು ಚಿತ್ರದಲ್ಲಿ ಬಾಗಿಲು, ಮುಂದೆ ಕಲ್ಲ ಮೆಟ್ಟಲುಗಳು, ಅಕ್ಕಪಕ್ಕ ಗಿಡ ಬಳ್ಳಿಗಳು ಬೆಳೆದಿವೆ. ಶೀರ್ಷಿಕೆ : ಸ್ಟೆಪಿಂಗ್ ಸ್ಟೋನ್ಸ್ ಟು ಎ ಪಾಸ್ಟ್. ಈಗ ಸೆರೆಮನೆಯ ನಿರ್ಜನ, ನಿರ್ವಾಸಿತ ಭೂತದ ನೆನಪು ಕಾಡುವುದೆ. ಇನ್ನೊಂದು ಚಿತ್ರದಲ್ಲಿ ಖಾಲಿಯಾದ ಶೂನ್ಯ ಉಗ್ರಾಣ. ಮತ್ತೊಂದು, ಮರದ ಕಿಟಕಿ ಕಿತ್ತು ಒಯ್ದಿರುವುದರಿಂದಾದ ಕಿಂಡಿ, ಕಿಂಡಿಯಾಚೆಗೆ, ಬೆಳಕಿನಲ್ಲಿ ಗೋಡೆ, ಗೋಡೆಯ ಮೇಲೆ ಶಿವ, ಅವನಿಗೆ ಭಿಕ್ಷೆ ನೀಡುತ್ತಿರುವ ಗಿರಿಜೆ. ಚಿತ್ರ ರಚಿಸಿದ ಕೈದಿ ಕಲಾವಿದನಿಗೆ ಯಾವ ಕರುಣಾ ಭಿಕ್ಷೆ ಬೇಕಿತ್ತೋ ಎನಿಸುತ್ತದೆ.

''ಹೊರ ಪ್ರಪಂಚದಲ್ಲಿ ಮನುಷ್ಯನಿಗೆ ಸಾವಿರಾರು ಸಂಕಷ್ಟಗಳು, ಇಲ್ಲಿ ಸೆರೆಮನೆ ವಾಸ, ಸ್ವಾತಂತ್ರ್ಯಹರಣಕ್ಕಿಂತ ಕಷ್ಟ ಮತ್ತೊಂದಿಲ್ಲ. ಒಂದು ಸರಳ ನುಡಿ, ಒಂದು ಅಂಗಸನ್ನೆಗೂ ಇಲ್ಲಿ ಹಕ್ಕಿಲ್ಲ. ನಾವು ಅವರಟ್ಟುವ ದನಗಳಂತೆ ಮಾತ್ರ'' (ಹೊ ಚಿ ಮಿನ್). ಇಂಥಲ್ಲೂ ಸ್ವಾರಸ್ಯವಾದ ದೃಶ್ಯವನ್ನು ಹಿಡಿದಿದ್ದಾರೆ ಶ್ರೇಯಸ್. ಅಲ್ಲೊಂದು 'ಒನ್ ಸ್ಟಾಪ್ ಷಾಪ್'ನ ದೃಶ್ಯ. ಕಿಟಕಿ ಕಿಂಡಿ, ಕೊಡುಕೊಳ್ಳಲು. ಪಕ್ಕದಲ್ಲಿ ತೂಗುಹಾಕಿರುವ ಫಲಕ. ದೊರೆಯುವ ಸರಕುಗಳು ಮತ್ತು ಬೆಲೆ. ೩೦ನೇ ನಂಬರ್ ಬೀಡಿ, ಸಿಗರೇಟ್, ಬೆಂಕಿಪೊಟ್ಟಣ, ಇನ್‌ಲ್ಯಾಂಡ್ ಕಾಗದ, ಮೊಟ್ಟೆ ಬನ್, ಸೋಪು ಇತ್ಯಾದಿ.ಒಂದು ಚಿತ್ರ ಸೆಲ್ ನಂ. ೩೦ ಎಂದಿರುವ ಬಾಗಿಲಿನದು. ಇನ್ನೊಂದು, ೧-೧-೧೯೬೮ ಎಂದು ಬರೆದಿದೆ, ಗೋಡೆ, ಬಳ್ಳಿ ಹುಲ್ಲು ಬೆಳೆದಿವೆ. 'ಇಲ್ಲಿ ಯಾವುದೂ ಮುಖ್ಯವಲ್ಲ, ಯಾವುದೂ ಅಮುಖ್ಯವಲ್ಲ' ಎಂದರು ಕುವೆಂಪು, ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮೊದಲ ನುಡಿಯಲ್ಲಿ. ಆ ದಿನಾಂಕ ಯಾರಿಗೋ ನೆನಪು ಮಾತ್ರ. ಈ ಚಿತ್ರದ ಸ್ವಾರಸ್ಯ ನೋಡಿ : ಕಿರಿದಾದ ಕಕ್ಕಸು, ಮಣ್ಣು ಕಸ ತುಂಬಿದೆ. ಅಲ್ಲಿಂದ ಒಂದು ಹಸಿರು ಗಿಡ ಬೆಳೆದು ಎಲೆಗಳು ತಲೆಯೆತ್ತಿವೆ. ಎಷ್ಟು ಸೂಚ್ಯ. ಏನೆಲ್ಲ ಧ್ವನಿ ಸಾಧ್ಯತೆಗಳು.

ಬೆರಗುಗೊಳಿಸುವ ಚಿತ್ರಗಳ ಒಂದು ಸರಣಿ ಮತ, ಧರ್ಮ ಭಾವನೆಗಳಿಗೆ ಸಂಬಂಧಿಸಿದೆ. ಒಂದು ಚಿತ್ರದಲ್ಲಿ ಉದ್ದನೆಯ ಹಜಾರ ಕಾಣುತ್ತಿದೆ. ಗೋಡೆಗೆಲ್ಲ ಹಸಿರು ಬಣ್ಣ. ಆಚೆಯ ತುದಿಯಲ್ಲಿ ಒಂದು ಖಾಲಿ ಪೀಠ. ಒಂದು ಡಾರ್ಮಿಟರಿಯ ದೃಶ್ಯ. ಗೋಡೆ ಮೇಲೆ ಕ್ರಿಸ್ತನ ಚಿತ್ರ. ಇನ್ನೊಂದು ದೃಶ್ಯ: ಕಾಬಾದ ಚಿತ್ರಣ, ಅತ್ತ ಲಕ್ಷ್ಮೀ, ಇತ್ತ ಕ್ರಿಸ್ತ. ಶೀರ್ಷಿಕೆ : ಕಮ್ಯೂನಲ್ ಹಾರ್ಮೊನಿ. ಇನ್ನೊಂದು ಚಿತ್ರದಲ್ಲಿ ಶಿವ, ದುರ್ಗಿ, ಈಶ್ವರ, ನಟರಾಜ ಮತ್ತು ಹನುಮಾನ್. ''ಊಟ ಮುಗಿಯಿತು, ಸೂರ್ಯ ಪಶ್ಚಿಮದಲ್ಲಿ ಮುಳುಗಿದ; ಈಗ ಎಲ್ಲ ಮೂಲೆಗಳಿಂದ ಜನಪದ ಹಾಡು ಸಂಗೀತ. ಇದ್ದಕ್ಕಿದ್ದಂತೆ, ತ್ಸಿಂಗ್ಸಿ ಸೆರೆಮನೆಯಲ್ಲಿ ಜೀವ ತುಂಬಿದಂತೆ; ಅದು ಕಲೆಗಳ ಅಕಾಡೆಮಿಯಾಗಿ ಮಾರ್ಪಡುತ್ತದೆ'' (ಹೊ ಚಿ ಮಿನ್). ರಾಮಮಂದಿರದ ಭಜನೆಗಳು ನೆನಪಿಗೆ ಬರುತ್ತವೆ. ಒಂದು ಚಿತ್ರದಲ್ಲಿ ಗೋಡೆಯ ಮೇಲೆ ಮಗು ಕ್ರಿಸ್ತನನ್ನು ಎತ್ತಿಕೊಂಡಿರುವ ಮೇರಿ, ಅತ್ತ ಪ್ರತ್ಯೇಕ ನಿಂತಿರುವ ಕ್ರಿಸ್ತನ ರಚನೆ ಸಹ ಇದೆ. ಒಂದು ಕೊಠಡಿ ಗೋಡೆ ಮೇಲೆ ಕಾಬಾದ ದೃಶ್ಯ ರಚಿತವಾಗಿದೆ. ಏನಿದು, ಏಕೆ ಹೀಗೆ ಎನಿಸುತ್ತದೆ. ಅಪರಾಧಿಗಳ ಪ್ರಪಂಚ. ಆಕಸ್ಮಿಕ ಅಪರಾಧಗಳೊ, ಅಜ್ಞಾನವೊ, ಭಾವೋದ್ರೇಕ ಸಂದರ್ಭಗಳೊ-ಹಗುರ. ಘೋರ ಅಪರಾಧಗಳು. ಹೊರಗಿನ ವರ್ತನೆಗಳ ಆಳದಲ್ಲಿ ಆ ಕ್ರೌರ್ಯಗಳ ಜೊತೆಗೆ ಈ ಮತೀಯ ನಂಬಿಕೆಗಳು. ಭಯವೆ, ಬಿಡುಗಡೆಯ ಪ್ರಾರ್ಥನೆಯೆ, ಪಶ್ಚಾತ್ತಾಪವೇ ? ಚಿಂತಿಸಿದಂತೆ ಮನಸ್ಸಿಗೂ ಜೋಮು ಹಿಡಿಯುತ್ತದೆ. ಸರಿಯಾದ ಶಿಕ್ಷಣ ಇದನ್ನೆಲ್ಲಾ ತಪ್ಪಿಸಬಲ್ಲುದು ಎನ್ನುತ್ತಾರೆ ಹೊ ಚಿ ಮಿನ್, ತಮ್ಮ ಕವನ ದಿನಚರಿಯಲ್ಲಿ. ಇಲ್ಲಿ ಎದುರಿಗೇ ಶಿಕ್ಷಣ ಸಂಸ್ಥೆಗಳಿವೆ. ಹೆಚ್ಚು ವಿದ್ಯಾವಂತರೆನಿಸಿಕೊಂಡವರೇ ಕ್ರೌರ್ಯ ತೋರುತ್ತಿದ್ದಾರೆ, ಅಪರಾಧವೆಸಗುತ್ತಿದ್ದಾರೆ. ಈ ಧಾರ್ಮಿಕ ಭಾವನೆಗಳು ನಂಬಿಕೆಗಳು ಮನಸ್ಸಿಗೆ ಸಾಂತ್ವನ ತರುವಂತಹವೆ ? 'ಪಾಪಿಗುದ್ಧಾರಮಿಹುದೆ' ಎಂದರು ಕುವೆಂಪು, ರಾಮಾಯಣ ದರ್ಶನಂನಲ್ಲಿ. ಇಂದು ಧರ್ಮವೂ ವ್ಯಾಪಾರ, ರಾಜಕೀಯವಾಗಿರುವ ಕಾಲ. ಅದಕ್ಕಿಂತ ಅಕ್ಕಪಕ್ಕದಲ್ಲೇ ಎಲ್ಲ ಮತಧರ್ಮ ಸಂಕೇತಗಳ ಒಡನಾಟ. ಸೆರೆಮನೆಯ ಹೊರಗೆ ಕಾಣದ ಮತ ಸಹಿಷ್ಣುತೆ ಇಲ್ಲಿ ಹೇಗೆ ? ಈ ಛಾಯಾಚಿತ್ರ ಪ್ರದರ್ಶನ ಒಂದು ದರ್ಶನ ನೀಡುವುದರ ಜೊತೆಗೆ, ಆ ಶೂನ್ಯ ಮೌನ ದೃಶ್ಯಗಳು, ಹಲವು ಪ್ರಶ್ನೆಗಳನ್ನೆತ್ತಿ ಕಾಡುತ್ತವೆ. ಆದ್ದರಿಂದಲೇ ಈ ಪ್ರದರ್ಶನ ವಿಶಿಷ್ಟ ಕಲಾವಿದ ರಾಘವ ಶ್ರೇಯಸ್‌ರ ಹುಡುಕಾಟ ಹಲವು ಅರ್ಥ ಸಾಧ್ಯತೆಗಳಿಗೆ ಎಡೆಮಾಡಿ ಕೊಡುತ್ತವೆ. ''ಲಿಬರ್ಟಿ ವೇರ್ ಆರ್ ಯು'' ಎಂದು ಕೇಳಿದೆ. ವಾರ್ಡರ್ ಬೆರಳು ತೋರುತ್ತಾನೆ, ''ಆಚೆ ದೂರಾಂತರದ ಸರ್ಕಾರದ ವಾಸ್ತವ್ಯ ಕಟ್ಟಡದೆಡೆಗೆ.'' ಸೆರೆಮನೆಯ ಹೊರಗೆ ಇಂದು ಸ್ವಾತಂತ್ರ್ಯವಿದೆಯೆ ?

**(ಮುಖಪುಟದ ಒಳಭಾಗದಲ್ಲಿ ಕೆಲವು ಛಾಯಾಚಿತ್ರಗಳನ್ನು ಕಾಣಬಹುದು)**

**ಪ್ರೊ|| ಎಂ. ಎಚ್. ಕೃಷ್ಣಯ್ಯ**
ನಂ. ೧೮೩, ೧ನೇ 'ಎನ್' ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

## ಅಮ್ಮ

ಕಂದ ಚೆಲ್ಲಿದ ನಗೆಹಾಲ
ಬೊಗಸೆಲಿ ಹಿಡಿದುಂಡು
ಹಸಿವಾರಿಸಿಕೊಳ್ಳುವವಳು ಅಮ್ಮ

ಸುಂದರ ಕನಸುಗಳ
ಮಡಿಲ ತೊಟ್ಟಿಲು ತೂಗಿ
ಕನಸು ನನಸಾಗುವ ಕನಸು
ಕಾಣುವವಳು ಅಮ್ಮ

ಮಗುವಿನ ಅಸ್ಪಷ್ಟ ಭಾವ
ಭಾಷೆಯನರಿತು
ಪ್ರತಿಕ್ರಯಿಸುವ ಜಾಣೆ ಅಮ್ಮ

ನಕ್ಷತ್ರಗಳೂ ನಾಚುವಂತಹ
ಹೊಳಪು ಕಣ್ಣೊಳು ಮುಗ್ಧನ
ಮನವಸೆಳೆವ ಅಯಸ್ಕಾಂತ ಅಮ್ಮ



ವರ್ಷಾ ಹೂಗಾರ
ಕಾಗವಾಡ, ಬೆಳಗಾವಿ ಜಿಲ್ಲೆ

# ಪಾಕಿಸ್ತಾನ : ಆತಂಕಕಾರಿ ಬೆಳವಣಿಗೆಗಳು

ಅರವತ್ತು ವರ್ಷ ತುಂಬಿರುವ ಪಾಕಿಸ್ತಾನ ಇನ್ನೂ ಅತಂತ್ರ ಸ್ಥಿತಿಯಲ್ಲಿದೆ. ನಾಲ್ಕನೆಯ ಜನರಲ್ ಪರ್ವೇಜ್ ಮುಷರಫ್ ಸರ್ವಾಧಿಕಾರ ಈಗ ಇಕ್ಕಟ್ಟಿನಲ್ಲಿ ಸಿಲುಕಿದೆ. ಅವರ ಪ್ರಭಾವ ಪಾಕಿಸ್ತಾನದಲ್ಲಿ ತಳಕಚ್ಚಿದೆ. ಅಮೆರಿಕಾದ ಒತ್ತಡ ಹೆಚ್ಚುತ್ತಿದೆ, ಬೆಂಬಲ ಕುಸಿಯುತ್ತಿದೆ. ಪಾಕಿಸ್ತಾನದಲ್ಲಿ ಹಿಂದಿನ ಎಲ್ಲ ಜನರಲ್‌ಗಳ ಆಡಳಿತೆಯಂತೆಯೇ ಮುಷರಫ್ ಅಧಿಕಾರ ಕೂಡ ಶಿಥಿಲಗೊಂಡು ಅಳಿಯುವ ಸ್ಥಿತಿಯಲ್ಲಿದೆ. ಇದರಿಂದ ಪಾರಾಗಿ ಮುಂಬರುವ ಚುನಾವಣೆಯಲ್ಲಿ ಮತ್ತೆ ಅಧ್ಯಕ್ಷಗಿರಿಗೆ ಏರುವುದು ಅವರಿಗೆ ಸುಲಭವಲ್ಲ. ಈಶಾನ್ಯ ಗಡಿಯಲ್ಲಿ ತಾಲಿಬಾನ್ ಹಾವಳಿ, ಇಸ್ಲಾಮಿಕ್ ಉಗ್ರಗಾಮಿಗಳ ದಾಳಿ, ತಿರುಗಿಬಿದ್ದಿರುವ ಮುಸಲ್ಮಾನ್ ಮೂಲಭೂತವಾದಿಗಳು, ನ್ಯಾಯಾಂಗವನ್ನು ಕೆದಕಿ ಕಗ್ಗಂಟಿನಲ್ಲಿ ಸಿಕ್ಕಿಕೊಂಡಿರುವುದು, ಉಗ್ರರ ಮೇಲೆ ಕಾರ್ಯಾಚರಣೆಗಾಗಿ ಹೆಚ್ಚುತ್ತಿರುವ ಅಮೆರಿಕಾದ ಒತ್ತಡ, ಬೆದರಿಕೆ - ಹೀಗೆ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡಿರುವ ಮುಷರಫ್ ದಾರಿಕಾಣದೆ ಕಂಗಾಲಾಗಿದ್ದಾರೆ. ಪಾಕಿಸ್ತಾನದಲ್ಲಿನ ಈ ಎಲ್ಲ ಬೆಳವಣಿಗೆಗಳಿಂದ ಭಾರತ-ಪಾಕಿಸ್ತಾನ ಸಂಬಂಧಗಳ ಸುಧಾರಣೆಯ ಮಾತುಕತೆಗಳು ಹಿಂದೆ ಸರಿದಿವೆ. ಏಳು ವರ್ಷಗಳ ಅಧಿಕಾರಾವಧಿಯಲ್ಲಿ ಬೇರಾವ ಪಾಕಿಸ್ತಾನಿ ಆಡಳಿತೆಯೂ ತೆಗೆದುಕೊಳ್ಳದಿದ್ದ ಧೈರ್ಯದ ನಿಲುವನ್ನು ಭಾರತ-ಪಾಕಿಸ್ತಾನ ಸಂಬಂಧಗಳ ವಿಚಾರದಲ್ಲಿ ಮುಷರಫ್ ತೆಗೆದುಕೊಂಡಿದ್ದಾರೆ. ಸಮಸ್ಯೆಗಳನ್ನು ಬಗೆಹರಿಸಲು ಮುತುವರ್ಜಿ ವಹಿಸಿ ಉಪಕ್ರಮಗಳನ್ನು ಕೈಗೊಂಡಿದ್ದಾರೆ. ಹಾಗಾಗಿ ಪಾಕಿಸ್ತಾನದ ಈಗಿನ ಬೆಳವಣಿಗೆಗಳನ್ನು ಭಾರತ ಆತಂಕದಿಂದಲೇ ಗಮನಿಸುತ್ತಿದೆ.




ಮುಷರಫ್ ಸರ್ವಾಧಿಕಾರಿ ಆಡಳಿತೆಯ ಬಗ್ಗೆ ಒಳಗೆ ಕುದಿಯುತ್ತಿದ್ದ ಅತೃಪ್ತಿ ಈಗ ಒಮ್ಮೆಗೇ ಭುಗಿಲೆದ್ದಿದೆ. ಇತ್ತ ದರಿ ಅತ್ತ ಹುಲಿ ಎನ್ನುವ ಹಾಗಾಗಿದೆ ಅವರ ಸ್ಥಿತಿ. ಇಸ್ಲಾಮಿಕ್ ಉಗ್ರಗಾಮಿಗಳ ಮೇಲೆ ಕ್ರಮ ತೆಗೆದುಕೊಂಡರೆ ಮೂಲಭೂತವಾದಿಗಳು ತಿರುಗಿ ಬೀಳುತ್ತಾರೆ. ತೆಗೆದುಕೊಳ್ಳದಿದ್ದರೆ ಅಮೆರಿಕಾದ ಅವಕೃಪೆಗೊಳಗಾಗಬೇಕಾಗುತ್ತದೆ. ಇದು ಒಂದು ಬಗೆಯಾದರೆ ಮುಷರಫ್ ಎರಡು ಅಧಿಕಾರಗಳಲ್ಲಿ ಒಂದನ್ನು ತ್ಯಜಿಸಬೇಕೆಂದು ಮಿಲಿಟರಿ ಅಧಿಕಾರಿಗಳಿಂದಲೂ ಒತ್ತಡ ಬರುತ್ತಿದೆ. ಚುನಾವಣೆಗಳು ಸಮೀಪಿಸುತ್ತಿರುವಾಗ ದೇಶದ ನ್ಯಾಯಾಂಗವನ್ನು ಎದುರುಹಾಕಿಕೊಂಡು ಫಜೀತಿಗೆ ಸಿಕ್ಕಿಬಿದ್ದಿದ್ದಾರೆ. ಏನೇ ಆದರೂ ಈಗ ಮುಷರಫ್ ಹಲ್ಲಿಲ್ಲದ ಹುಲಿಯಂತಾಗಿದ್ದಾರೆ. ದೇಶದ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನು ನಿಷ್ಕ್ರಿಯಗೊಳಿಸಿದ್ದು, ಅನಂತರ ಜರುಗಿದ ಘಟನೆಗಳು, ಜನಾಂದೋಲನ ಹಾಗೂ ಮೊದಲ ಬಾರಿಗೆ ಸರ್ವಾಧಿಕಾರಿ ಜನರಲ್ ಒಬ್ಬನ ಕ್ರಮದ ವಿರುದ್ಧ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪು ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ಚಳುವಳಿಗೆ ಹೊಸ ಚೈತನ್ಯ ನೀಡಿದೆ. ಅದೇ ಸಮಯದಲ್ಲಿ ಇಸ್ಲಾಮಿಕ್ ಮೂಲಭೂತವಾದಿಗಳ ಚಟುವಟಿಕೆಯೂ ಹೆಚ್ಚಾಗಿದೆ. ಲಾಲ್ ಮಸ್‌ಜಿದ್ ಘಟನೆ ಅದಕ್ಕೆ ನಿದರ್ಶನ. ಪಾಕಿಸ್ತಾನದ ಗಡಿಯಲ್ಲಿ ತಾಲಿಬಾನ್‌ಗಳ ಪ್ರಾಬಲ್ಯ ಹೆಚ್ಚಾಗಿದೆಯಲ್ಲದೆ ಬಲೂಚಿಸ್ತಾನದ ಬುಡಕಟ್ಟುಗಳೂ ಜೊತೆಗೆ ಸೇರಿರುವುದು ಮುಷರಫ್‌ಗೆ ನುಂಗಲಾರದ ತುತ್ತು. ಪಾಕಿಸ್ತಾನದ ಗಡಿಯಿಂದ ತಾಲಿಬಾನ್ ಉಗ್ರಗಾಮಿಗಳು ಆಫ್ಘಾನಿಸ್ತಾನದ ಮೇಲೆ ನಡೆಸುತ್ತಿರುವ ದಾಳಿಯಿಂದ ಅಮೆರಿಕ ಆತಂಕ ಗೊಂಡಿದೆ. ಆಫ್ಘಾನಿಸ್ತಾನದಲ್ಲಿ ಪ್ರವೇಶಿಸಿ ಕೈಸುಟ್ಟುಕೊಂಡಿರುವ ಬುಷ್ ಆಡಳಿತೆ ಉಗ್ರಗಾಮಿಗಳ ಮೇಲೆ ಬಾಂಬು ದಾಳಿ ನಡೆಸುವಂತೆ ಜನರಲ್ ಮುಷರಫ್ ಮೇಲೆ ಒತ್ತಡ ಹೇರುತ್ತಿದೆ. ಕೆಲ ದಿನಗಳ ಹಿಂದೆ ಅಮೆರಿಕದ ವಕ್ತಾರನೊಬ್ಬ ಪಾಕಿಸ್ತಾನದ ಗಡಿಯಲ್ಲಿ ಅಮೆರಿಕನ್ ಸೇನಾ ಕಾರ್ಯಾಚರಣೆ ಬಗ್ಗೆ ಕೂಡ ಸೂಚನೆ ನೀಡಿದ್ದ. ಇಷ್ಟೆಲ್ಲಾ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿರುವ ಮುಷರಫ್ ಇದರಿಂದ ಹೊರಬರಲು ಒಂದು ಸಂದರ್ಭದಲ್ಲಿ ತುರ್ತುಪರಿಸ್ಥಿತಿ ಘೋಷಿಸು ವರೆಂಬ ವದಂತಿಯೂ ಇತ್ತು. ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕೊಂಡಲೀಸಾ ರೈಸ್ ಮಧ್ಯಪ್ರವೇಶದಿಂದ ಅದು ತಪ್ಪಿತು ಎಂದು ಸುದ್ದಿ. ಇದುವರೆಗೆ ಅಮೆರಿಕದ ನಿಷ್ಠಾವಂತನಾಗಿ ಸೇವೆ ಸಲ್ಲಿಸಿರುವ ಜನರಲ್‌ನ್ನು ಉಳಿಸುವುದು ಅಮೆರಿಕಾಗೆ ಬೇಕು. – ಇನ್ನೊಬ್ಬನನ್ನು ತಯಾರು ಮಾಡುವವರೆಗೆ.



**ಸೀಯಾರ್ಕೆ**

ಭಾರತದಂತೆಯೇ ೧೯೪೭ರ ಆಗಸ್ಟ್ ಮಧ್ಯದಲ್ಲಿ ಸ್ವತಂತ್ರ ರಾಷ್ಟ್ರವಾಗಿ ಉದಯಿಸಿದ ಪಾಕಿಸ್ತಾನ ಅಸ್ತಿತ್ವಕ್ಕೆ ಬಂದಾಗಿನಿಂದಲೂ ಒಂದಲ್ಲ ಒಂದು ಬಿಕ್ಕಟ್ಟನ್ನು ಎದುರಿಸುತ್ತಿದೆ. ಅಮೆರಿಕಾ ದೊಂದಿಗೆ ನಿಕಟ ಸಂಬಂಧ ಬೆಳೆಸಿಕೊಂಡು, ಆಶ್ರಯ ಪಡೆದ ಪಾಕಿಸ್ತಾನ ಒಂದು ರೀತಿಯಲ್ಲಿ ಅಮೆರಿಕಾದ ಇನ್ನೊಂದು ಉಪಸಂಸ್ಥಾನವಾಗಿಯೇ ಉಳಿದಿದೆ. ಈಶಾನ್ಯದಲ್ಲಿ ಆಫ್ಘಾನಿಸ್ತಾನ, ಉತ್ತರದಲ್ಲಿ ಸೋವಿಯೆತ್ ಒಕ್ಕೂಟ ಮತ್ತು ಚೀಣಾ, ಪೂರ್ವದಲ್ಲಿ ಭಾರತ, ದಕ್ಷಿಣದಲ್ಲಿ ಅರಬ್ಬೀ ಸಮುದ್ರವನ್ನು ಗಡಿಯಾಗಿ ಹೊಂದಿರುವ ಪಾಕಿಸ್ತಾನ ಸಿಂದ್, ಪಂಜಾಬ್, ಬಲೂಚಿಸ್ತಾನ, ಈಶಾನ್ಯ ಗಡಿ ಪ್ರದೇಶ ಮತ್ತು ಪೂರ್ವ ಬಂಗಾಳ ಪ್ರಾಂತ್ಯ ಗಳನ್ನು ಒಳಗೊಂಡಿದ್ದ ರಾಷ್ಟ್ರ. ೧೯೭೧ರಲ್ಲಿ ಪೂರ್ವ ಪಾಕಿಸ್ತಾನ ಎನಿಸಿ ಕೊಂಡಿದ್ದ ಪೂರ್ವ ಬಂಗಾಳ ಪ್ರತ್ಯೇಕಗೊಂಡು ಬಾಂಗ್ಲಾದೇಶ ಎಂಬ ಸ್ವತಂತ್ರ ರಾಷ್ಟ್ರವಾಯಿತು. ಆಯಕಟ್ಟಿನ ಪ್ರದೇಶದಲ್ಲಿರುವ ಪಾಕಿಸ್ತಾನ ಅಮೆರಿಕಾದ ಮಡಿಲಿಗೆ ಬಿದ್ದದ್ದು ಆಶ್ಚರ್ಯವೇನಿಲ್ಲ. ಶೀತಯುದ್ಧದ ಕಾಲದಲ್ಲಿ ರಷ್ಯಾ, ಚೀಣಾಗಳ ಗಡಿಯಲ್ಲಿರುವ ಈ ದೇಶದ ಪ್ರಾಮುಖ್ಯತೆ ಎಷ್ಟೆಂದು ವಿವರಿಸು ವುದು ಅನಗತ್ಯ. ಇದಲ್ಲದೆ ಭಾರತದ ಮೇಲೆ ಒತ್ತಡ ಹೇರಲು ಪಾಕಿಸ್ತಾನ ಅಮೆರಿಕಾಗೆ ಒಂದು ಊರುಗೋಲು ಬೇರೆ ಆಯಿತು. ಅದರಿಂದಲೇ ಅಮೆರಿಕ ಹೊಸೆದ ಮಿಲಿಟರಿ ಕೂಟಗಳಲ್ಲಿ ಪಾಕಿಸ್ತಾನ ಸೇರಿಕೊಂಡಿತು. ಇತಿಹಾಸವನ್ನು ಗಮನಿಸಿದರೆ ಪಾಕಿಸ್ತಾನದಲ್ಲಿ ನಾಗರಿಕ ಸರ್ಕಾರ ಆಡಳಿತದಲ್ಲಿದ್ದುದು ಇಪ್ಪತ್ತು ವರ್ಷ ಗಳಿಗೂ ಕಮ್ಮಿ. ಉಳಿದಂತೆ ಎಲ್ಲ ಮಿಲಿಟರಿ ಸರ್ವಾಧಿಕಾರವೇ, ಜನರಲ್‌ಗಳ ಆಡಳಿತವೇ. ಪ್ರಾರಂಭದಿಂದಲೂ ಪಾಕಿಸ್ತಾನದ ಮಿಲಿಟರಿ ದೇಶದ ಆಡಳಿತ ಯಂತ್ರದ ಮೇಲೆ ನಿಯಂತ್ರಣ ಹೊಂದಿದೆ. ೧೯೪೭ರಲ್ಲಿ ರೂಪುಗೊಂಡ ಪಾಕಿಸ್ತಾನ ಒಂಬತ್ತು ವರ್ಷಗಳ ಕಾಲ ಬ್ರಿಟಿಷ್ ಕಾಮನ್‌ವೆಲ್ತ್‌ನ ಆಧಿಪತ್ಯದಲ್ಲಿತ್ತು. ೧೯೫೬ರಲ್ಲಿ ಅದು ಇಸ್ಲಾಮಿಕ್ ಗಣರಾಜ್ಯವಾಗಿ ರೂಪುಗೊಂಡಿತು. ೧೯೫೮ರಲ್ಲಿ ಅಧಿಕಾರ ಗ್ರಹಣ ಮಾಡಿದ ಜನರಲ್ ಅಯೂಬ್ ಖಾನ್ ೧೯೬೨ರಲ್ಲಿ ಸಂವಿಧಾನವನ್ನು ಅಧ್ಯಕ್ಷೀಯ ವ್ಯವಸ್ಥೆಯಾಗಿ ಮಾರ್ಪಡಿಸಿ, ೧೯೬೯ರವರೆಗೆ ಅಧಿಕಾರದಲ್ಲಿದ್ದ. ಅನಂತರ ಇವನನ್ನು ಪದಚ್ಯುತಗೊಳಿಸಿ ಜನರಲ್ ಯಾಹ್ಯಾ ಖಾನ್ ಅಧಿಕಾರಕ್ಕೆ ಬಂದ. ಪೂರ್ವ ಪಾಕಿಸ್ತಾನ ಪ್ರತ್ಯೇಕಗೊಂಡು ಬಾಂಗ್ಲಾದೇಶ ಉದಯಿಸಿದ್ದು ಇವನ ಕಾಲದಲ್ಲೇ. ಬಹುಮತಗಳಿಸಿದ್ದ ಪೂರ್ವ ಬಂಗಾಳದ ಮುಜಿಬುರ್ ರೆಹಮಾನ್‌ಗೆ ಪ್ರಧಾನಿ ಹುದ್ದೆ ನೀಡದೆ, ಪಂಜಾಬ್ ಸಿಂದ್‌ಗಳ ಒತ್ತಾಯಕ್ಕೆ ಮಣಿದು ಜುಲ್ಫಿಕರ್ ಅಲಿ ಭುಟ್ಟೋವನ್ನು ಪ್ರಧಾನಿಯಾಗಿ ನೇಮಿಸಿದ್ದೇ ಅಂತರ್ಯುದ್ಧ ಮತ್ತು ಪಾಕಿಸ್ತಾನದ ತುಂಡರಿಕೆಗೆ ಕಾರಣವಾಯಿತು. ೧೯೭೧ರಲ್ಲಿ ಅಧಿಕಾರ ತ್ಯಜಿಸಿದ ಯಾಹ್ಯಾ ಖಾನ್ ಭುಟ್ಟೋಗೆ ಅಧಿಕಾರ ಹಸ್ತಾಂತರಿಸಿದ. ಐದು ವರ್ಷ ಭುಟ್ಟೋ ಆಡಳಿತೆ, ನಾಗರಿಕ ಸರ್ಕಾರ.

೧೯೭೭ರಲ್ಲಿ ಜನರಲ್ ಜಿಯಾ ಉಲ್ ಹಕ್ ಅಧಿಕಾರ ಗ್ರಹಣ ಮಾಡಿ, ಭುಟ್ಟೋವನ್ನು ಬಂಧಿಸಿ, ಮರಣದಂಡನೆಗೆ ಗುರಿಪಡಿಸಿದ. ಹತ್ತು ವರ್ಷ ಆಡಳಿತ ನಡೆಸಿದ ಜನರಲ್ ಜಿಯಾ ೧೯೮೮ರಲ್ಲಿ ವಿಮಾನ ದುರಂತದಲ್ಲಿ ಅಸುನೀಗಿದ. ಅನಂತರ ಸುಮಾರು ಒಂದು ದಶಕದ ಕಾಲ ನಾಗರಿಕ ಆಡಳಿತೆ ಬೆನಜೀರ್ ಭುಟ್ಟೋ ಮತ್ತು ನವಾಜ್ ಶರೀಫ್ ಅಧಿಕಾರ. ೧೯೯೯ರಲ್ಲಿ ಜನರಲ್ ಪರ್ವೇಜ್ ಮುಷರಫ್ ಅಧಿಕಾರ ಪ್ರಾರಂಭ. ಈ ಬಗೆಯಲ್ಲಿ ಪಾಕಿಸ್ತಾನದ ಇತಿಹಾಸದುದ್ದಕ್ಕೂ ಅಲ್ಲಿನ ಮಿಲಿಟರಿ ರಾಜಕೀಯದ ಮೇಲೆ ಬಲವಾದ ನಿಯಂತ್ರಣ ಇರಿಸಿ ಕೊಂಡಿರುವುದನ್ನು ಕಾಣುತ್ತೇವೆ. ಪಾಕಿಸ್ತಾನದ ಆಡಳಿತೆಯಲ್ಲಿನ ಪ್ರತಿಯೊಂದು ಬದಲಾವಣೆಯೂ ಭಾರತ-ಪಾಕಿಸ್ತಾನ ಸಂಬಂಧಗಳ ಮೇಲೆ ಪರಿಣಾಮ ಬೀರಿದೆ. ಸಮಸ್ಯೆಗಳು ಬಗೆಹರಿಯದೆ ಉಳಿದಿವೆ.

ಪಾಕಿಸ್ತಾನದ ಪ್ರಮುಖ ರಾಜಕೀಯ ಪಕ್ಷಗಳು ಪಾಕಿಸ್ತಾನ ಪೀಪಲ್ಸ್ ಪಾರ್ಟಿ, ಮುತ್ತಾಹಿದಾ ಕ್ವಾಮಿ ಚಳುವಳಿ, ಮುಸ್ಲಿಮ್ ಲೀಗ್ (ಜನರಲ್ ಮುಷರಫ್‌ಗೆ ಬೆಂಬಲವಾಗಿರುವ ಪಾರ್ಟಿ). ಉಳಿದವೆಲ್ಲ ಸಣ್ಣಪುಟ್ಟ ಪಕ್ಷಗಳು. ಪ್ರಮುಖ ವಿರೋಧ ಪಕ್ಷಗಳ ನಾಯಕರು ದೇಶದ ಹೊರಗುಳಿದಿದ್ದಾರೆ. ಚುನಾವಣೆಗಳು ನಡೆದರೂ ಅವು ಮುಕ್ತವಾಗಿರುವುದು ಸಂಶಯ. ಏಕೆಂದರೆ ಮಿಲಿಟರಿಯ ಪ್ರಭಾವದಿಂದ ಅದು ದೂರವಾಗಿರದು. ಚುನಾವಣೆಯಲ್ಲಿ ಯಾವ ಒಂದು ಪಕ್ಷವೂ ಬಹುಮತ ಗಳಿಸುವ ಸ್ಥಿತಿಯಲ್ಲಿಲ್ಲ. ಯಾವುದೇ ಸರಕಾರ ಅಧಿಕಾರಕ್ಕೆ ಬಂದರೂ ಮಿಲಿಟರಿಯ ಪ್ರಭಾವದ ಅಡಿಯಲ್ಲಿಯೇ ಕೆಲಸ ಮಾಡಬೇಕು. ಮಿಲಿಟರಿಯ ಮೇಲೆ ನಿಯಂತ್ರಣ ಹೊಂದುವುದು ಕಷ್ಟ. ಜನರಲ್ ಮುಷರಫ್‌ಗೆ ಬಂದಿರುವ ಫಜೀತಿಯೂ

ಅದೇ. ಸಮವಸ್ತ್ರ ಬಿಟ್ಟು ಜನರಲ್ ಹುದ್ದೆ ಬೇರೆಯವರಿಗೆ ವಹಿಸಿ ಅಧ್ಯಕ್ಷಗಿರಿ ಪಡೆದರೆ ಸೇನೆ ಮೇಲೆ ಹತೋಟಿ ತಪ್ಪಿದಂತೆ. ಅಧಿಕಾರ ಯಾವಾಗ ಬೇಕಾದರೂ ಹೋದೀತು ಎಂಬ ಹೆದರಿಕೆ. ಪಾಕಿಸ್ತಾನದ ಈ ಬೆಳವಣಿಗೆಗಳು ನಿಜಕ್ಕೂ ಆತಂಕಕಾರಿ. ಭಾರತ ಇದನ್ನು ಎಚ್ಚರದಿಂದ ಗಮನಿಸ ಬೇಕಾಗಿದೆ. ಸುಭದ್ರ ವ್ಯವಸ್ಥೆ ಅಸ್ತಿತ್ವಕ್ಕೆ ಬಂದರೆ ವ್ಯವಹರಿಸುವುದು ಸುಲಭ. ಪಾಕಿಸ್ತಾನದಲ್ಲಿ ಪ್ರಾರಂಭವಾಗಿರುವ ಪ್ರಜಾಪ್ರಭುತ್ವ ಚಳವಳಿ ಯಶಸ್ವಿಯಾಗಲಿ ಎಂದು ಹಾರೈಸೋಣ.

## ಅಮೆರಿಕದ ಆಶ್ವಾಸನೆಗಳನ್ನು ನಂಬಬಹುದೇ ?

ಅಮೆರಿಕಾ ತನ್ನ ಹಿತಾಸಕ್ತಿಗಳನ್ನು ಸಾಧಿಸಿಕೊಳ್ಳಲು ಆಶ್ವಾಸನೆಗಳ ಮಹಾಪೂರವನ್ನೇ ಹರಿಸುತ್ತದೆ. ಒಪ್ಪಂದಗಳನ್ನು ಮಾಡಿಕೊಳ್ಳುತ್ತದೆ. ಆಶ್ವಾಸನೆಗಳನ್ನು ಪೂರೈಸುವುದು, ಒಪ್ಪಂದ ಗಳನ್ನು ಜಾರಿಗೆ ತಾರದಿರುವುದು ಆಡಳಿತೆಯ ಮರ್ಜಿಯ ಮೇಲೆ ಅವಲಂಬಿತವಾಗಿರುತ್ತದೆ. ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಅಮೆರಿಕಾದ ಆಶ್ವಾಸನೆಗಳೆಂದರೆ ತುಟಿಗೆ ತುಪ್ಪ ಸವರಿದಂತೆ. ಕೆಲಸವಾಗುತ್ತಿದ್ದ ಹಾಗೆ ಅದು ಕರಗಿಹೋಗುತ್ತದೆ. ಅಮೆರಿಕಾದ ಆಮಿಷಗಳಿಗೆ, ಆಶ್ವಾಸನೆಗಳಿಗೆ ಬಲಿಯಾದ ದೇಶಗಳಲ್ಲಿ ಮುಖ್ಯವಾದ್ದು ಸೋವಿಯೆತ್ ಒಕ್ಕೂಟ. ಪೊಳ್ಳು ಆಶ್ವಾಸನೆಗಳನ್ನು ನಂಬಿ ಇಡೀ ವ್ಯವಸ್ಥೆಯೇ ಕುಸಿದು ಛಿದ್ರಗೊಂಡಿದ್ದು ಎಲ್ಲರಿಗೂ ತಿಳಿದಿರುವ ವಿಷಯ. ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಒಪ್ಪಂದವನ್ನು ಮಾಡಿಕೊಂಡು ದೇಶದ ಸಾರ್ವಭೌಮತ್ವಕ್ಕೇ ಧಕ್ಕೆ ತರುತ್ತಿರುವ ಮನಮೋಹನ್ ಸಿಂಗ್ ಸರಕಾರ ಇದನ್ನು ಅರಿತುಕೊಳ್ಳದೇ ಇರುವುದು ಶೋಚನೀಯ.

> **ಇರಾಕ್‌ನಿಂದ ಮರಳುವುದೆಂದು ?**
>
> ಬುಷ್ ಹೇಳುತ್ತಾರೆ, ವಾಸ್ತವಿಕ ಸನ್ನಿವೇಶ ನೋಡಿ
> ನಾವು ಕಾಲ್ತೆಗೆಯಬೇಕು, ಎಂದು; ಅಂದರೆ
> ಇಂದಿಗಿಂತ ಕಡಿಮೆ ಪ್ರತಿಕೂಲ ಇರಬೇಕು - ಎಂದು.
> ಹಾಗಿದ್ದರೆ ನಾವೆಂದೋ ಕಿತ್ತು ಬರಬೇಕಿತ್ತು;
> ಏಕೆಂದರೆ ಸನ್ನಿವೇಶ ಇನ್ನೂ ಪ್ರತಿಕೂಲವಾಗುತ್ತಲೇ
> ಹೋಗುತ್ತದೆ.
>
> **-ಕ್ಯಾಲ್ವಿನ್ ಟ್ರಲಿನ್**
> (ಅಮೆರಿಕಾದ ದಿ ನೇಷನ್ ಪತ್ರಿಕೆ, ಡಿಸೆಂಬರ್ ೨೦೦೬)

೧೯೯೦ರಲ್ಲಿ ಅಂದು ಅಮೆರಿಕಾದ ಅಧ್ಯಕ್ಷನಾಗಿದ್ದ ಜಾರ್ಜ್ ಬುಷ್ ಮತ್ತು ಸೋವಿಯೆತ್ ಒಕ್ಕೂಟದ ಅಧ್ಯಕ್ಷ ಮಿಖಾಯಿಲ್ ಗೊರ್ಬಚೆವ್ ಹಲವು ಒಪ್ಪಂದಗಳಿಗೆ ಸಹಿ ಹಾಕಿದ್ದರು. ಈ ಒಪ್ಪಂದಗಳೇ ಸೋವಿಯೆತ್ ಒಕ್ಕೂಟದ ಸರ್ವನಾಶಕ್ಕೆ ಕಾರಣವಾಯಿತು. ಅಮೆರಿಕಾದ ಆಡಳಿತೆ ನಿರಂತರವಾಗಿ ಈ ಒಪ್ಪಂದಗಳನ್ನು ಉಲ್ಲಂಘನೆ ಮಾಡುತ್ತ ಬಂದಿದೆ. ಅವುಗಳ ಪೈಕಿ ಮುಖ್ಯವಾದ ಒಂದು ಪೂರ್ವ ಜರ್ಮನಿ ಮತ್ತು ಪೂರ್ವ ಯುರೋಪಿನ ದೇಶಗಳಲ್ಲಿ ವಿದೇಶೀ ಸೇನೆಗಳನ್ನು ನೆಲೆಗೊಳಿಸುವುದಿಲ್ಲ ಮತ್ತು ನ್ಯೂಕ್ಲಿಯರ್ ಅಸ್ತ್ರಗಳನ್ನು ತಂದಿಡುವುದಿಲ್ಲ ಎನ್ನುವುದು. ಈ ಆಶ್ವಾಸನೆಯನ್ನು ಮುರಿದು ಪೂರ್ವ ಯೂರೋಪಿನ ಹತ್ತು ದೇಶಗಳನ್ನು ನ್ಯಾಟೋ ಕೂಟಕ್ಕೆ ಸೇರಿಸಿಕೊಳ್ಳಲಾಗಿದೆ. ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ನ್ಯಾಟೋ ಕೂಟ ವಿಸರ್ಜನೆಯಾಗಬೇಕಿತ್ತು. ಆದರೆ ಆಗಿರುವುದೇ ಬೇರೆ. ಇದು ಸಾಲದು ಎನ್ನುವಂತೆ ಈಗ ಚೆಕ್ ಗಣರಾಜ್ಯ ಮತ್ತು ಪೋಲೆಂಡಿನಲ್ಲಿ ಕ್ಷಿಪಣಿ ನಿರೋಧಕ ನೆಲೆಗಳನ್ನು ನಿರ್ಮಿಸಲು ಅಮೆರಿಕ ಹೊರಟಿದೆ. ಇದು ಹೊಸ ಶಸ್ತ್ರಾಸ್ತ್ರ ಪೈಪೋಟಿಗೆ ಎಡೆಮಾಡಿ ಕೊಡುವ ಸಾಧ್ಯತೆ ಇದೆ. ರಷ್ಯಾದ ಅಧ್ಯಕ್ಷ ವ್ಲದಿಮಿರ್ ಪುಟಿನ್ ಅಮೆರಿಕಾದ ಕ್ರಮಗಳಿಗೆ ಪ್ರತ್ಯುತ್ತರವಾಗಿ ಪ್ರಕ್ಷೇಪಕ ಕ್ಷಿಪಣಿ ನಿರೋಧಕ (ಎಬಿಎಂ) ಒಪ್ಪಂದವನ್ನು ರದ್ದುಗೊಳಿಸಿದೆ. ಪಶ್ಚಿಮ ಯೂರೋಪಿನ ದೇಶಗಳ ಗಡಿಗೆ ಸಮೀಪವಾಗಿ ರಷ್ಯ ಟ್ಯಾಂಕುಗಳನ್ನು ಮತ್ತು ಭಾರಿ ಫಿರಂಗಿಗಳನ್ನು ಪುನರ್ನಿಯೋಜಿಸಲು ಹಿಂಜರಿಯುವುದಿಲ್ಲವೆಂದೂ ಎಚ್ಚರಿಸಿದೆ.

ಈ ಬೆಳವಣಿಗೆಗಳು ಏಕಾಏಕಿಯಾಗಿ ಉದ್ಭವಿಸಿದ್ದಲ್ಲದೆ ರಷ್ಯಾದಲ್ಲಿ ವ್ಲದೀಮಿರ್ ಪುಟಿನ್ ಅಧಿಕಾರಕ್ಕೆ ಬಂದ ಮೇಲೆ ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿ ತಹಬಂದಿಗೆ ಬಂದಿದ್ದು, ವಿದೇಶಾಂಗ ವ್ಯವಹಾರಗಳ ಕ್ಷೇತ್ರದಲ್ಲಿ ಸ್ವತಂತ್ರವಾದ ನಿಲುವನ್ನು ತೆಗೆದುಕೊಳ್ಳ ಲಾರಂಭವಾದ ನಂತರ ಪ್ರಾರಂಭವಾಯಿತು. ರಷ್ಯಾ ಮತ್ತೆ ಚೇತರಿಸಿಕೊಂಡು ಬಲಗೊಳ್ಳುವು ದಾಗಲಿ, ಸ್ವತಂತ್ರ ನಿಲುವನ್ನು ತಳೆಯುವುದಾಗಲಿ ಅಮೆರಿಕಾದ ಹಿತಾಸಕ್ತಿಗೆ ಸರಿಹೊಂದದು. ಹಳೆಯ ಸೋವಿಯೆತ್ ಒಕ್ಕೂಟದ ಗಣರಾಜ್ಯಗಳನ್ನು ರಷ್ಯಾದ ಮೇಲೆ ಎತ್ತಿಕಟ್ಟಲು ಅಮೆರಿಕಾದ ರಾಜಕಾರಣಿಗಳು ನೇರವಾಗಿ ಪ್ರಯತ್ನಿಸಿದ್ದಾರೆ. ರಂಗುರಂಗಿನ ಕ್ರಾಂತಿ ಪ್ರಚೋದಿಸಲು ಸನ್ನಾಹ ನಡೆಸಿದ್ದಾರೆ. ಅಮೆರಿಕಾದ ನಿಷ್ಠಾವಂತ ಹಿಂಬಾಲಕ ಬ್ರಿಟನ್ ಈ ವಿಷಯದಲ್ಲಿ ಹಿಂದೆಬಿದ್ದಿಲ್ಲ. ಶೀತಯುದ್ಧ ಕಾಲದಲ್ಲಿನಂತೆ ರಾಜತಾಂತ್ರಿಕ ಸಮರ ಸಾರಿದೆ. ಈಚೆಗೆ ಬ್ರಿಟನ್ ಅಲೆಕ್ಸಾಂಡರ್ ನೆಂಕೋ ಸಾವಿನ ಪ್ರಕರಣವನ್ನು ಮುಂದುಮಾಡಿ ನಾಲ್ಕು ಮಂದಿ ರಷ್ಯನ್ ರಾಜತಾಂತ್ರಿಕ ಸಿಬ್ಬಂದಿಯನ್ನು ಹೊರಹಾಕಿತು. ಅದಕ್ಕೆ ಪ್ರತಿಯಾಗಿ ರಷ್ಯಾ ಕೂಡ ಬ್ರಿಟಿಷ್ ರಾಜತಾಂತ್ರಿಕರನ್ನು ಹೊರಹಾಕಿತು.

ಒಟ್ಟಿನಲ್ಲಿ ರಷ್ಯಾ ಮತ್ತು ಪಶ್ಚಿಮ ರಾಷ್ಟ್ರಗಳ ಮಧ್ಯೆ ಸಂಬಂಧಗಳಲ್ಲಿ ಎಲ್ಲವೂ ಸರಿಯಾಗಿಲ್ಲ. ಹಲವು ಅಂತಾ ರಾಷ್ಟ್ರೀಯ ಸಮಸ್ಯೆಗಳ ವಿಚಾರದಲ್ಲಿ ರಷ್ಯಾ ಸ್ವತಂತ್ರವಾದ ನಿಲುವನ್ನು ತೆಗೆದುಕೊಳ್ಳುತ್ತಿರುವುದು ಅಮೆರಿಕ ಮತ್ತು ಪಶ್ಚಿಮ ಯೂರೋಪಿನ ಮಿತ್ರ ರಾಷ್ಟ್ರಗಳಿಗೆ ಅಸಹನೀಯವಾಗಿದೆ. ಅದರಿಂದೇ ಕಿರುಕುಳ. ಮನಮೋಹನ್ ಸಿಂಗ್ ಕಂಪನಿ ಇದರಿಂದ ಪಾಠ ಕಲಿಯುವುದೆ ?

**ಸೀಯಾರ್ಕೆ**
'ಚೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ,
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಜನಾರೋಗ್ಯದ ಅನಾರೋಗ್ಯ

ಡಾ|| ಪ್ರಕಾಶ್ ಸಿ. ರಾವ್

ಇತ್ತೀಚಿಗೆ ನಮ್ಮ ಹಣಕಾಸು ಮಂತ್ರಿ ಹೆಮ್ಮೆಯಿಂದ ಭಾರತ ಟ್ರಿಲಿಯನ್ ಡಾಲರ್ ಎಕಾನಮಿ ಕ್ಲಬ್ಬಿಗೆ ಸೇರಿರುವುದಾಗಿ ಹೇಳುತ್ತಿರುವ ಸಂದರ್ಭದಲ್ಲಿ ನಮ್ಮ ಸರ್ಕಾರವು ಆರೋಗ್ಯಕ್ಕಾಗಿ ಪ್ರತಿತಿಂಗಳು ತಲಾ ೧೭ ರೂಪಾಯಿ ಮಾತ್ರ ಖರ್ಚು ಮಾಡುತ್ತಿರುವುದು ವಿರೋಧಾಭಾಸವಾಗಿದೆ. ಜನರು ತಮ್ಮ ಆರೋಗ್ಯ ಸುಧಾರಿಸಲು ಅನಾರೋಗ್ಯ ಚಿಕಿತ್ಸೆಗೆ ತಾವೇ ಖರ್ಚು ಮಾಡುವ ಪರಿಸ್ಥಿತಿ ಬಂದಿದೆ. ಬಡತನದಿಂದಾಗಿ ಜನರು ಹೆಚ್ಚು ಹೆಚ್ಚು ಅನಾರೋಗ್ಯದಿಂದ ಬಳಲುವಾಗ ಆರೋಗ್ಯ ಸುಧಾರಣೆಗಿಂತ ಅನಾರೋಗ್ಯ ಚಿಕಿತ್ಸೆಗೆ ಪ್ರಾಮುಖ್ಯತೆ ಬಂದಂತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಜನಾರೋಗ್ಯ ಸುಧಾರಿಸಲು ಸರ್ಕಾರದ ನೀತಿ ಏನಾಗಿರಬೇಕು ?

ಬೆಳಗಿನ ಜಾವ 'ವಾಕ್' ಮಾಡುವುದು, 'ಡಯಟ್' ಮಾಡುವುದು, 'ಧ್ಯಾನ' ಮಾಡುವುದು ಮುಂತಾದವುಗಳು ಪಟ್ಟಣಗಳಲ್ಲಿ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸುತ್ತಿವೆ. ದಿನಪತ್ರಿಕೆಗಳು ಈ ವಿಷಯಗಳನ್ನು ತಿಳಿಸಲು ಆರೋಗ್ಯ ಪುರವಣಿಯನ್ನು ಪ್ರಕಟಿಸುತ್ತಿವೆ. ಅಲೋಪತಿಯ ಅಡ್ಡಪರಿಣಾಮಗಳನ್ನು ಗುರಿಯಿಟ್ಟುಕೊಂಡು ಆಯುರ್ವೇದ ಹಾಗೂ ಹೋಮಿಯೋಪತಿಗಳು ಆರೋಗ್ಯ ಸುಧಾರಿಸಲು ಮುಂದಾಗಿವೆ. ವೈದ್ಯರು, ನರ್ಸಿಂಗ್ ಹೋಂಗಳು, ಆಸ್ಪತ್ರೆಗಳು, ಖೊಟ್ಟಿ ವೈದ್ಯರು ಜನರ ಅನಾರೋಗ್ಯವೊಂದನ್ನೇ ಗುರಿಯಿಟ್ಟುಕೊಂಡು ಪೈಪೋಟಿ ನಡೆಸುತ್ತಿದ್ದಾರೆ. ಈ ಪೈಪೋಟಿಯಲ್ಲಿ ಭಾಗವಹಿಸದೆ ಸರ್ಕಾರಿ ಆರೋಗ್ಯ ಕೇಂದ್ರಗಳು ಕ್ಷೀಣಿಸುತ್ತ ಮುಂದುವರೆದಿವೆ. ಈ ಎಲ್ಲ ಪ್ರಯತ್ನಗಳು ಜನರ ವೈಯಕ್ತಿಕ ಆರೋಗ್ಯ ಸುಧಾರಣೆಗೆ ಮಾತ್ರ ಗಮನ ಹರಿಸುತ್ತವೆ ಎಂಬುದನ್ನು ಗಮನಿಸಬೇಕಾಗಿದೆ.

ಆರೋಗ್ಯ ಸುಧಾರಣೆಯ ಇನ್ನೊಂದು ಉತ್ತಮ ಆಯಾಮವೆಂದರೆ ಜನಾರೋಗ್ಯ ಸುಧಾರಣೆ. ಈ ಪ್ರಯತ್ನದಲ್ಲಿ ಸರ್ಕಾರದ ಪಾತ್ರ ಬಹಳ ಕಿರಿದಾದುದು. ಜನಾರೋಗ್ಯ ಸುಧಾರಿಸಲು ಜನರಿಗೆ ಜೀವನದ ಅಗತ್ಯತೆಗಳಾದ ನೀರು, ಪೌಷ್ಟಿಕ ಆಹಾರ, ನೆಮ್ಮದಿಯ ಪರಿಸರ, ಆತಂಕರಹಿತ ವಾತಾವರಣ, ಉದ್ಯೋಗ, ವಸತಿ, ಆರೋಗ್ಯ ಸೇವೆಗಳು, ಔಷಧಿಗಳು ಮುಂತಾದವುಗಳನ್ನು ದೊರಕಿಸಿಕೊಡಬೇಕಾಗುತ್ತದೆ. ಈ ಎಲ್ಲ ಅಂಶಗಳನ್ನು ಒಳಗೊಂಡಿರುವ ವ್ಯವಸ್ಥೆಯನ್ನು ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಎಂದು ವಿಶ್ವ ಆರೋಗ್ಯ ಸಂಸ್ಥೆ ಗುರುತಿಸುತ್ತದೆ. ಈ ವ್ಯವಸ್ಥೆಯನ್ನು ಜಾರಿಗೊಳಿಸಿದರೆ ಮಾತ್ರ ಜನಾರೋಗ್ಯ ಸಾಧನೆ ಸಾಧ್ಯ ಎಂದು ೧೯೭೮ರಲ್ಲಿಯೇ ಅಭಿಪ್ರಾಯಪಟ್ಟಿದೆ ಹಾಗೂ ಈ ವ್ಯವಸ್ಥೆಯನ್ನು ಅಳವಡಿಸಲು ಎಲ್ಲ ದೇಶಗಳಿಗೆ ಕರೆ ನೀಡಿದೆ.

**ಭಾರತದ ಜನಾರೋಗ್ಯ ಪರಿಸ್ಥಿತಿ** : ಬಡತನ ಮತ್ತು ಅನಕ್ಷರತೆ ಎದ್ದುಕಾಣುತ್ತಿರುವ ನಮ್ಮ ದೇಶದಲ್ಲಿ ಹೆಚ್ಚಿನ ಜನರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಇಂದಿಗೂ ನಮ್ಮ ದೇಶದಲ್ಲಿ ಆರೋಗ್ಯ ಸಮಸ್ಯೆಗಳು ತಡೆಗಟ್ಟಬಹುದಾದ ಗುಣಪಡಿಸಬಹುದಾದ ಸಮಸ್ಯೆಗಳಾಗಿವೆ. ಉದಾಹರಣೆಗೆ, ಸಾಂಕ್ರಾಮಿಕ ರೋಗಗಳು, ಪೌಷ್ಟಿಕ ಆಹಾರದ ಕೊರತೆಯಿಂದ ಆಗುವ ರೋಗಗಳು. ಗ್ರಾಮೀಣ ಪ್ರದೇಶದಲ್ಲಿ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯನ್ನು ಸುಧಾರಿಸಬಹುದಾದ ಸರಕಾರಿ ಆರೋಗ್ಯ ಕೇಂದ್ರಗಳು ಜನರಿಗೆ ಹತ್ತಿರದಲ್ಲಿವೆ. ಆದರೆ ಅಲ್ಲಿಯ ವ್ಯವಸ್ಥೆ ಸರಿಯಾಗಿಲ್ಲ. ಪಟ್ಟಣಗಳಲ್ಲಿ ಖಾಸಗಿ ವಲಯದ ಸುಸಜ್ಜಿತ ಆರೋಗ್ಯ ಕೇಂದ್ರಗಳಿವೆ. ಆದರೆ ಅಲ್ಲಿಯ ಸೇವೆಗಳು ದುಬಾರಿ ಹಾಗೂ ಜನಸಾಮಾನ್ಯರಿಗೆ ಎಟುಕದಂತಿವೆ. ಆರೋಗ್ಯ ಸೌಲಭ್ಯಗಳು ದೊರಕುವಲ್ಲಿ ಅಸಮಾನತೆ ಎದ್ದುಕಾಣುತ್ತದೆ. ಸಾಂಪ್ರದಾಯಿಕ ಪದ್ಧತಿಗಳು ನಮ್ಮ ದೇಶದ ಗ್ರಾಮಗಳಲ್ಲಿ ಜೀವಂತವಾಗಿದ್ದು ಈಗೀಗ ಕಡೆಗಣಿಸಲ್ಪಟ್ಟಿರುವುದರಿಂದ ಕ್ಷೀಣಿಸುತ್ತಿವೆ. ನಮ್ಮ ದೇಶದಲ್ಲಿ ಔಷಧಿ ಉದ್ಯಮದ ಬೆಳವಣಿಗೆ ಅಪಾರವಾಗಿದ್ದರೂ ಜನರಿಗೆ ಅಗತ್ಯ ಔಷಧಿಗಳು ದೊರಕುತ್ತಿಲ್ಲ. ಪ್ರಾರಂಭದಲ್ಲಿ ಜನಪರ ಆರೋಗ್ಯ ನೀತಿಯನ್ನು ಜಾರಿಗೊಳಿಸುವ ಪ್ರಯತ್ನಗಳು ಜರುಗಿದ್ದರೂ ಅಂತಹ ಪ್ರಯತ್ನಗಳು ಮೊಟಕುಗೊಂಡು ಆರೋಗ್ಯನೀತಿ ಅಸಮರ್ಪಕವಾಗಿದೆ. ಇಂದಿನ ಜನಾರೋಗ್ಯ ಪರಿಸ್ಥಿತಿಯನ್ನು ಅಂಕಿಸಂಖ್ಯೆಗಳ ಮೂಲಕ ನೋಡೋಣ.

೧೯೯೮ರ ಮಾನವ ಅಭಿವೃದ್ಧಿ ವರದಿಯು ಜಗತ್ತಿನ ಹಲವಾರು ರಾಷ್ಟ್ರಗಳಲ್ಲಿಯ ಆರೋಗ್ಯ ಪರಿಸ್ಥಿತಿಯನ್ನು ನೀಡಿದೆ :

| ಸೂಚ್ಯಾಂಕಗಳು | ಮುಂದುವರೆದ ೨೫ ರಾಷ್ಟ್ರಗಳು | ಮುಂದುವರೆಯುತ್ತಿರುವ ರಾಷ್ಟ್ರಗಳು | ಹಿಂದುಳಿದ ೪೩ ರಾಷ್ಟ್ರಗಳು |
|---|---|---|---|
| ಜೀವನಾಪೇಕ್ಷೆ ದರ | ೭೬ ವರ್ಷ | ೬೨.೨ ವರ್ಷ | ೫೧.೨ ವರ್ಷ |
| ಸಾಕ್ಷರತಾ ದರ | ೯೮.೬ % | ೭೦.೪ % | ೪೯.೨ % |
| ಮಾತೃ ಮರಣ ಸಂಖ್ಯೆ (ಒಂದು ಲಕ್ಷ ಹೆರಿಗೆಗೆ) | ೩೦ | ೪೮೮ | ೧೧೦೦ |
| ೫ ವರ್ಷಕ್ಕಿಂತ ಕಡಿಮೆ ವಯಸ್ಸಿನ ಶಿಶುಗಳ ಮರಣ | ೧೬ | ೬೫ | ೧೭೦ |

ಮುಂದುವರೆಯುತ್ತಿರುವ ರಾಷ್ಟ್ರಗಳಿಗೆ ಹೋಲಿಸಿದರೆ ನಮ್ಮ ದೇಶದ ಆರೋಗ್ಯ ಸ್ಥಿತಿ ಉತ್ತಮವಾಗಿಲ್ಲ.

ಕ್ಷಯರೋಗ ಭಾರತದಲ್ಲಿ ಕಂಡುಬರುವ ಸಾಮಾನ್ಯ ರೋಗ. ಈ ರೋಗವನ್ನು ಸಂಪೂರ್ಣ ಗುಣಪಡಿಸಲು ಔಷಧಿಗಳಿವೆ. ಆದರೆ ಕ್ಷಯರೋಗ ಭಾರತದಲ್ಲಿ ಹೆಚ್ಚುತ್ತಲಿದೆ !

೧೯೪೭ : ೨೦ ಲಕ್ಷ ಕ್ಷಯರೋಗಿಗಳು, ೫ ಲಕ್ಷ ಕ್ಷಯರೋಗಿಗಳ ಸಾವು.

೨೦೦೦ : ೧೨೦ ಲಕ್ಷ ಕ್ಷಯರೋಗಿಗಳು, ೫ ಲಕ್ಷ ಕ್ಷಯರೋಗಿಗಳ ಸಾವು.

**ಬೆಳಗಿನ ಜಾವ 'ವಾಕ್' ಮಾಡುವುದು, 'ಡಯಟ್' ಮಾಡುವುದು, 'ಧ್ಯಾನ' ಮಾಡುವುದು ಮುಂತಾದವುಗಳು ಪಟ್ಟಣಗಳಲ್ಲಿ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸುತ್ತಿವೆ. ದಿನಪತ್ರಿಕೆಗಳು ಈ ವಿಷಯಗಳನ್ನು ತಿಳಿಸಲು ಆರೋಗ್ಯ ಪುರವಣಿಯನ್ನು ಪ್ರಕಟಿಸುತ್ತಿವೆ. ಅಲೋಪತಿಯ ಅಡ್ಡಪರಿಣಾಮಗಳನ್ನು ಗುರಿಯಿಟ್ಟುಕೊಂಡು ಆಯುರ್ವೇದ ಹಾಗೂ ಹೋಮಿಯೋಪತಿಗಳು ಆರೋಗ್ಯ ಸುಧಾರಿಸಲು ಮುಂದಾಗಿವೆ.**

ಭಾರತದಲ್ಲಿ ೧೦೦೦ ಜೀವಂತ ಮಕ್ಕಳ ಜನನಕ್ಕೆ ಸಂಬಂಧಿಸಿದ ಶಿಶು ಮರಣ ಸಂಖ್ಯೆ

(ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ)

| | | |
|---|---|---|
| ಭಾರತ | ೭೮.೫ (೯೨-೯೩) | ೬೭.೬ (೯೮-೯೯) |
| ಕರ್ನಾಟಕ | ೬೫.೪ | ೫೧.೫ |
| ಒರಿಸ್ಸಾ | ೧೧೨.೧ | ೮೧.೦ |
| ಕೇರಳ | ೨೩.೮ | ೧೬.೩ |

ಇಂದಿಗೂ ಶಿಶು ಮರಣ ಸಂಖ್ಯೆ ಮುಂದುವರೆದ ರಾಷ್ಟ್ರಗಳಿಗೆ ಹೋಲಿಸಿದರೆ ಭಾರತದಲ್ಲಿ ಹೆಚ್ಚಾಗಿಯೇ ಇದೆ. ಆದರೆ ಇತರೆ ರಾಜ್ಯಗಳಿಗೆ ಹೋಲಿಸಿದರೆ ಕೇರಳದಲ್ಲಿ ಕಡಿಮೆ ಇದೆ. ಕೇರಳದಲ್ಲಿ ಬೆಳವಣಿಗೆಯ ಕಾರಣದಿಂದಾಗಿ ಆರೋಗ್ಯ ಸೂಚ್ಯಂಕಗಳು ಉತ್ತಮವಾಗಿವೆ. ಅಲ್ಲದೆ, ಮುಂದುವರೆದ ರಾಷ್ಟ್ರಗಳ ಸೂಚ್ಯಂಕಗಳಿಗೆ ಸರಿಸಾಟಿಯಾಗಿವೆ.

▸ ಲಸಿಕೆ ಪಡೆದ ಮಕ್ಕಳ ಸಂಖ್ಯೆ :

(ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ)

| | | |
|---|---|---|
| ಭಾರತ | ೩೫.೪ % (೯೨-೯೩) | ೪೨ % (೯೮-೯೯) |
| ಕರ್ನಾಟಕ | ೫೨.೨ % | ೬೦ % |

ಭಾರತವು ಔಷಧಿಗಳನ್ನು ತಯಾರಿಸುವ ಉದ್ಯಮ ಹೊಂದಿದ್ದರೂ, ಲಸಿಕೆಗಳಿಗಾಗಿ ಪರಾವಲಂಬಿಯಾಗಿದೆ. ಇತ್ತೀಚಿಗೆ ಕೇವಲ ಪೋಲಿಯೊ ಲಸಿಕೆಗಳ ಬಗ್ಗೆ ಗಮನಹರಿಸುತ್ತ ಇತರ ಲಸಿಕೆಗಳ ಬಗ್ಗೆ ನಿರ್ಲಕ್ಷ್ಯ ತೋರಿಸಿದೆ.

▸ ಸಾಂಸ್ಥಿಕ ಹೆರಿಗೆ

(ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ)

| | | |
|---|---|---|
| ಭಾರತ | ೨೬ % (೯೨-೯೩) | ೩೩.೬ % (೯೮-೯೯) |
| ಕರ್ನಾಟಕ | ೩೮.೫ % | ೫೧.೧ % |
| ಒರಿಸ್ಸಾ | ೧೪.೧ % | ೨೨.೯ % |

ಭಾರತದಲ್ಲಿ ಹೆಚ್ಚಿನ ಹೆರಿಗೆಗಳು ಮನೆಯಲ್ಲಿಯೇ ಆಗುತ್ತವೆ. ಇದರಿಂದಾಗಿ, ಮಾತೃ ಮರಣ ಹಾಗೂ ಶಿಶು ಮರಣ ಸಂಖ್ಯೆ ಹೆಚ್ಚಿನ ಮಟ್ಟದಲ್ಲಿವೆ.

ಅಂಕಿಸಂಖ್ಯೆಗಳೇ ಆರೋಗ್ಯ ಪರಿಸ್ಥಿತಿಯನ್ನು ಸ್ಪಷ್ಟಗೊಳಿಸುವುದಿಲ್ಲ. ಆದರೂ ಸರ್ಕಾರದ ಈ ಅಂಕಿಸಂಖ್ಯೆಗಳನ್ನು ಕಡೆಗಣಿಸಲಾಗುವುದಿಲ್ಲ.

ಜನಾರೋಗ್ಯದ ಈ ಚಿಂತಾಜನಕ ಪರಿಸ್ಥಿತಿಗೆ ಹಲವಾರು ಕಾರಣಗಳನ್ನು ಗುರುತಿಸಬಹುದಾಗಿದೆ :

- ಯಾವುದೇ ನಿರ್ದಿಷ್ಟ ಆರೋಗ್ಯ ನೀತಿ, ಔಷಧಿ ನೀತಿ, ಲಸಿಕಾ ನೀತಿ, ಜನಸಂಖ್ಯಾ ನೀತಿ ಇಲ್ಲದಿರುವುದು.
- ಆರೋಗ್ಯ ನಿರ್ಧಾರಕಗಳಾದ ಸ್ವಚ್ಛ ಕುಡಿಯುವ ನೀರು, ನೈರ್ಮಲ್ಯ, ಪೌಷ್ಟಿಕ ಆಹಾರ, ವಸತಿ, ಉದ್ಯೋಗ ಮುಂತಾದವುಗಳ ಬಗ್ಗೆ ಗಮನಹರಿಸದೇ ಇರುವುದು.
- ಮುಂಗಡ ಪತ್ರದಲ್ಲಿ ಆರೋಗ್ಯಕ್ಕೆ ಅಗತ್ಯವಿದ್ದಷ್ಟು ಹಣಕಾಸಿನ ಮಂಜೂರಾತಿ ಇಲ್ಲದಿರುವುದು.
- ಆರೋಗ್ಯಕ್ಕೆ ಭಾರತ ಕೇವಲ ಒಟ್ಟು ಆದಾಯದ ೦.೯% ಮಾತ್ರ ಖರ್ಚು ಮಾಡುತ್ತಿದೆ. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಆರೋಗ್ಯಕ್ಕೆ ಒಟ್ಟು ಆದಾಯದ ೫%ರಷ್ಟು ಹಣಕಾಸಿನ ಅಗತ್ಯತೆ ಇದೆ.
- ಪ್ರಾಥಮಿಕ ಆರೋಗ್ಯ ವ್ಯವಸ್ಥೆಯನ್ನು ಜಾರಿಗೊಳಿಸದೆ ಇರುವುದು. ಸರಕಾರ ಆರೋಗ್ಯ ಕ್ಷೇತ್ರದ ಜವಾಬ್ದಾರಿಯಿಂದ ಹಿಂತೆಗೆಯುತ್ತಿರುವುದು. ಇದರಿಂದ ನೈರ್ಮಲ್ಯ ಸಾಧನೆಗೆ ಅಡ್ಡಿಯುಂಟಾಗಿರುವುದು.
- ಜಾಗತೀಕರಣ, ಉದಾರೀಕರಣ, ಖಾಸಗೀಕರಣ ನೀತಿಗಳಿಂದಾಗಿ ಸಮಗ್ರ ಪ್ರಾಥಮಿಕ ಆರೋಗ್ಯ ನೀತಿಯೇ ಬುಡಮೇಲಾಗುತ್ತಿರುವುದು.
- ಮಹಿಳೆ, ಮಕ್ಕಳು, ದಲಿತರು, ಅಲ್ಪಸಂಖ್ಯಾತರು, ವೃದ್ಧರು ಮತ್ತು ಅಂಗವಿಕಲರ ಆರೋಗ್ಯದ ಬಗ್ಗೆ ಗಮನಹರಿಸದಿರುವುದು.
- ಗ್ರಾಮೀಣ ಪ್ರದೇಶದ ಜನರ ಆರೋಗ್ಯವನ್ನು ಕಡೆಗಣಿಸಿರುವುದು.
- ವೈದ್ಯಕೀಯ ಶಿಕ್ಷಣ ಸಮರ್ಪಕವಾಗಿ ಇಲ್ಲದಿರುವುದು. ಜನರ ಆರ್ಥಿಕ, ಸಾಮಾಜಿಕ ಆಯಾಮಗಳಿಗೆ ಮಹತ್ವ ಕೊಡದೇ ಇರುವುದು. ವೈದ್ಯಕೀಯ ಸಂಶೋಧನೆಗಳಿಗೆ ಅಪಾರ ಸಾಧ್ಯತೆಗಳಿದ್ದರೂ ಅದನ್ನು ಕಡೆಗಣಿಸಿರುವುದು.
- ಔಷಧಿ, ಲಸಿಕೆ ನೀತಿ, ಸಾಂಪ್ರದಾಯಿಕ ಚಿಕಿತ್ಸಾ ಪದ್ಧತಿಯನ್ನು ಕಡೆಗಣಿಸಲಾಗಿರುವುದು.

ಜನಸಾಮಾನ್ಯರಿಗೆ ಆರೋಗ್ಯ ಹಾಗೂ ಆರೋಗ್ಯ ಕ್ಷೇತ್ರದ ಬಗ್ಗೆ ಕನಿಷ್ಠ ಮಾಹಿತಿಯ ಅರಿವಿಲ್ಲ. ಜನಾರೋಗ್ಯ ಸುಧಾರಿಸಲು ಜನಪರ ಹೋರಾಟಗಳು ಜರುಗುತ್ತಿದ್ದರೂ ಅದನ್ನು ಸುಧಾರಿಸುವತ್ತ ವೈದ್ಯಕೀಯ ಕ್ಷೇತ್ರ ಯಾವ ಕಳಕಳಿಯನ್ನೂ ಹೊಂದಿಲ್ಲ. ಎಡಪಕ್ಷಗಳನ್ನು ಬಿಟ್ಟರೆ ಬೇರಾವ ರಾಜಕೀಯ ಪಕ್ಷಗಳೂ ಆರೋಗ್ಯದ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ರಾಜಕೀಯದ ಬಗ್ಗೆ ಜನರಲ್ಲಿ ಸಿನಿಕತೆಯೂ ಹೆಚ್ಚಾಗುತ್ತಿದೆ. ಜನಾರೋಗ್ಯದ ಅನಾರೋಗ್ಯವನ್ನು ಸರಿಪಡಿಸುವುದೆಂತು ?

**ಆರೋಗ್ಯ ನಿರ್ಧರಿಸುವ ಸಾಮಾಜಿಕ ಅಂಶಗಳು**

ಮಾನವನ ದಿನನಿತ್ಯದ ಅಗತ್ಯತೆಗಳೆಂದರೆ ಸ್ವಚ್ಛ ಕುಡಿಯುವ ನೀರು, ಪೌಷ್ಟಿಕ ಆಹಾರ, ಶಿಕ್ಷಣ, ನೈರ್ಮಲ್ಯ, ಉದ್ಯೋಗ, ಬದುಕಲು ಯೋಗ್ಯವಾದ ವಸತಿಗೃಹ ಇತ್ಯಾದಿ. ಇವುಗಳಿಲ್ಲದೆ ಜೀವನಮಟ್ಟ ಸುಧಾರಣೆಯಾಗಲಿ, ಆರೋಗ್ಯ ಸುಧಾರಣೆಯಾಗಲಿ ಸಾಧ್ಯವಿಲ್ಲ. ಕೇವಲ ಔಷಧಿ, ಆಸ್ಪತ್ರೆ, ವೈದ್ಯಕೀಯ ಸೇವೆಗಳಿಂದಲೂ ಆರೋಗ್ಯ ಸುಧಾರಣೆ ಸಾಧ್ಯವಿಲ್ಲ. ಪ್ರಜಾಪ್ರಭುತ್ವದಲ್ಲಿ ಸರಕಾರಗಳು ಇವೆಲ್ಲವುಗಳನ್ನು ಒದಗಿಸುವ ಕರ್ತವ್ಯ ಹೊಂದಿರಬೇಕು. ಆದರೂ ಇವುಗಳ ಪೂರೈಕೆಯಾಗದಿರುವುದು ಕಂಡುಬರುತ್ತದೆ. ವಿಶ್ವ ಆರೋಗ್ಯ ಸಂಸ್ಥೆ ಈ ಸಾಮಾಜಿಕ ನಿರ್ಧಾರಕಗಳನ್ನು ಜನರಿಗೆ ಒದಗಿಸಲು ಸರ್ಕಾರಗಳ ಮೇಲೆ ಒತ್ತಡ ತರುತ್ತಿದೆ. ಸರ್ಕಾರವು ಆರೋಗ್ಯ ಸುಧಾರಣೆ ಯೋಜನೆಗಳಿಗಾಗಿ ಹಣ ವಿನಿಯೋಗಿಸಿದರೆ ಅದು ವೆಚ್ಚವಲ್ಲ. ಅಂತಹ ವಿನಿಯೋಗ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗಾಗಿ ಹೂಡುವ ಹಣ ಅಷ್ಟೆ.

ಪ್ರಜಾಪ್ರಭುತ್ವದಲ್ಲಿ ಇವೆಲ್ಲವನ್ನೂ ಈಡೇರಿಸುವುದು ಸರ್ಕಾರದ ಕರ್ತವ್ಯವೂ ಕೂಡ.

**ಕುಡಿಯುವ ನೀರು**

ಬೇಸಿಗೆ ಬಂದರೆ ಮಾತ್ರ ನೀರು ಸರಬರಾಜಿನ ಕೊರತೆಯ ಬಗ್ಗೆ ಪತ್ರಿಕೆಗಳಲ್ಲಿ ಹೇಳಿಕೆಗಳನ್ನು ನೋಡುತ್ತೇವೆ. ನೀರು ಸರಬರಾಜು ಮಾಡಲು ೫೦ ಕೋಟಿ ರೂಪಾಯಿ ಮಂಜೂರು ಮಾಡಲಾಗುತ್ತದೆ ಎಂಬಂತಹ ಹೇಳಿಕೆಗಳನ್ನು ಕೊಟ್ಟು ಸರ್ಕಾರ ಹೆಸರು ಗಿಟ್ಟಿಸಿಕೊಳ್ಳಲು ಪ್ರಯತ್ನ ಮಾಡುತ್ತಿದೆಯೆ ಹೊರತು, ನೀರಿನ ವ್ಯವಸ್ಥೆ ಸರಿಯಾಗಿ ಇಲ್ಲದಿರುವುದರ ಬಗ್ಗೆ ಜನರಿಗೆ ವಾಸ್ತವಿಕ ವಿಷಯವನ್ನು ತಿಳಿಸುವುದೇ ಇಲ್ಲ. ಇನ್ನು ಕೆಲವು ಸ್ಥಳಗಳಲ್ಲಿ ಸ್ಥಳೀಯ ಕೌನ್ಸಿಲರ್ ಹಾಗೂ ಎಂ.ಎಲ್.ಎ.ಗಳು "ಉಚಿತ ಕುಡಿಯುವ ನೀರು" ಸರಬರಾಜು ಮಾಡುತ್ತ ಚುನಾವಣೆಗೆ ತಯಾರಿ ನಡೆಸಲು ಮುಂದಾಗಿರುತ್ತಾರೆ. ಕುಡಿಯುವ ನೀರಿನ ಬಗ್ಗೆ ಸರಕಾರ ನಿರ್ಲಕ್ಷ್ಯ ತೋರಿಸಿದೆ. ಇಂದಿಗೂ ಅನೇಕ ಗ್ರಾಮಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಇಲ್ಲ. ಅತ್ಯಗತ್ಯವಾದ ಕುಡಿಯುವ ನೀರನ್ನು ಸರ್ಕಾರ ಪೂರೈಸದೆ ಇರುವುದು ಖಂಡನೀಯ. ಒಂದು ಅಧ್ಯಯನದ ಪ್ರಕಾರ ಶೇ. ೫೨ರಷ್ಟು ಜನರು ಅಸುರಕ್ಷಿತ ನೀರನ್ನು ಉಪಯೋಗಿಸುತ್ತಿದ್ದಾರೆ. ಇನ್ನೊಂದು ಅಧ್ಯಯನದ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಶೇ. ೪೮ ಜನರು ಹಾಗೂ ಪಟ್ಟಣಗಳಲ್ಲಿ ಶೇ. ೭೧.೨ರಷ್ಟು ಜನರು (ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ) ಕೊಳಾಯಿ ನೀರನ್ನು ಉಪಯೋಗಿಸುತ್ತಿದ್ದಾರೆ.

ಕುಡಿಯುವ ನೀರಿನ ಬಗ್ಗೆ ಆರ್ಥಿಕ ತಜ್ಞರು, ಹೆಚ್ಚಾಗಿ ತಲೆಕೆಡಿಸಿಕೊಂಡಿಲ್ಲ ಎಂಬುದಂತೂ ಸತ್ಯ.

ನೀರಿನ ಸಮಸ್ಯೆ ಈಗ ಇನ್ನೊಂದು ಹಂತ ತಲುಪಿದೆ. ಅದೆಂದರೆ ನೀರು ಸರಬರಾಜನ್ನು ಖಾಸಗೀಕರಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ. ಈಗಾಗಲೆ ಬಾಟಲಿ ನೀರಿನ ವ್ಯವಹಾರ ಸಾವಿರಾರು ಕೋಟಿ ರೂ.ಗಳಷ್ಟಾಗಿದೆ. ಮುಂದಿನ ದಿನಗಳಲ್ಲಿ ನೀರಿನಿಂದ ಉಂಟಾಗುವ ಸಾಂಕ್ರಾಮಿಕ ರೋಗಗಳನ್ನು ಎದುರಿಸಬೇಕಾಗಬಹುದು !

**ನೈರ್ಮಲ್ಯ ಸಾಧನೆ :** ಆರೋಗ್ಯ ಸಾಧನೆಗೆ ನೈರ್ಮಲ್ಯ ಅತ್ಯಗತ್ಯ. ನೈರ್ಮಲ್ಯ ಸಾಧನೆಗೆ ಶೌಚಾಲಯದ ಬಳಕೆ ಕಡ್ಡಾಯವೆನಿಸುತ್ತದೆ. ಭಾರತದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಕೇವಲ ಶೇ. ೨೧.೯ರಷ್ಟು ಜನರು ಶೌಚಾಲಯ ಬಳಸಿದರೆ, ಪಟ್ಟಣಗಳಲ್ಲಿ ಶೇ. ೮೨.೭ ಜನರು ಶೌಚಾಲಯ ಬಳಸುತ್ತಾರೆ. ಈ ಸಾಧನೆಯಲ್ಲಿ ನಾವು ಜಗತ್ತಿನ ಬಡದೇಶಗಳನ್ನೂ ಹಿಂದೆ ಹಾಕಿದ್ದೇವೆ ! ಉದಾಹರಣೆಗೆ, ಕೀನ್ಯಾದಲ್ಲಿ ಶೇ. ೮೧ರಷ್ಟು, ಟಾಂಝಾನಿಯಾದಲ್ಲಿ ಶೇ. ೮೬, ನೈಜೀರಿಯಾದಲ್ಲಿ ಶೇ. ೪೧, ಉಗಾಂಡಾದಲ್ಲಿ ಶೇ. ೫೭, ಶ್ರೀಲಂಕಾದಲ್ಲಿ ಶೇ. ೬೩ ಹಾಗೂ ಪಾಕಿಸ್ತಾನದಲ್ಲಿ ಶೇ. ೫೬ ಜನರು ಶೌಚಾಲಯಗಳನ್ನು ಬಳಸುತ್ತಾರೆ. ಎಷ್ಟೋ ಕಡೆಗಳಲ್ಲಿ ಜನರು ಶೌಚಾಲಯ ಬಳಸಲು ಮುಂದೆ ಬರುತ್ತಿಲ್ಲ. ಆದ್ದರಿಂದ ಸರ್ಕಾರ ಜನರಿಗೆ ಅಗತ್ಯ ಶಿಕ್ಷಣ ಮಾಹಿತಿ ನೀಡಿ, ಜನರ ನಡವಳಿಕೆ ಬದಲಿಸಲು ಪ್ರಯತ್ನಿಸಬೇಕು. ನೈರ್ಮಲ್ಯ ಸಾಧನೆಗೆ ಖಾಸಗಿ ಕ್ಷೇತ್ರವೂ ಮುಂದೆ ಬರುತ್ತಿಲ್ಲ; ಮುಂದೆ ಬರಲು ಸಾಧ್ಯವೂ ಇಲ್ಲ. ಕಾರಣ, ಅಲ್ಲಿ ಲಾಭವಿಲ್ಲ ಅಲ್ಲವೇ ! ಇದರ ಪರಿಣಾಮವಾಗಿ ನಮ್ಮ ದೇಶದಲ್ಲಿ ಸೊಳ್ಳೆ ಹತೋಟಿ ಸಾಧನಗಳ ಬಹುಕೋಟಿ ಉದ್ಯಮ ತಲೆಯೆತ್ತಿ ನಿಂತಿದೆ.

**ಶಿಕ್ಷಣ :** ಶಾಲೆಗಳಿರುವ ಸಮಾಜದಲ್ಲಿ ಶಾಲೆಗಳಿರದ ಸಮಾಜಕ್ಕಿಂತ ಉತ್ತಮ ಆರೋಗ್ಯದ ಸೂಚ್ಯಂಕಗಳು ಕಂಡುಬರುತ್ತವೆ. ನಾವು ಇಲ್ಲಿಯವರೆಗೂ ಪ್ರಾಥಮಿಕ ಶಿಕ್ಷಣವನ್ನು ಸಾಧಿಸಲಾಗಿಲ್ಲ. ಭಾರತದ ವಿಶಿಷ್ಟ ಸಮಸ್ಯೆಯೆಂದರೆ, ಶಾಲೆಯಿಂದ ಹೊರನಡೆಯುವವರ ಹೆಚ್ಚಳ. ಈ ಸಮಸ್ಯೆ ಭಾರತಕ್ಕೆ ವಿಶೇಷವಾದ್ದು. ಸಂವಿಧಾನದಲ್ಲಿ ಮಕ್ಕಳಿಗೆ ೧೪ ವರ್ಷದವರೆಗೆ ಉಚಿತ ಶಿಕ್ಷಣ ಎಂದು ಹೇಳಲಾಗಿದ್ದರೂ ಅದು ಸಾಧ್ಯವಾಗುತ್ತಿಲ್ಲ. ಉದಾರೀಕರಣ ನೀತಿಯಿಂದ ಶಿಕ್ಷಣ ಕ್ಷೇತ್ರಕ್ಕೆ ಭಾರಿಪೆಟ್ಟು ಬಿದ್ದುದರ ಕಾರಣ ಅನುದಾನ ಕಡಿತ. ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಬೇಕು. ಬಾಲಕಾರ್ಮಿಕರನ್ನು ಕೆಲಸಕ್ಕಿಟ್ಟುಕೊಳ್ಳುವುದನ್ನು ಕೂಡಲೆ ತಡೆಯಬೇಕು. ಈ ಕ್ರಮಗಳಿಂದ ಶಿಕ್ಷಣ ಸುಧಾರಿಸುವುದಲ್ಲದೆ, ಆರೋಗ್ಯ ಸುಧಾರಣೆಯೂ ಆಗುತ್ತದೆ.

**ಉದ್ಯೋಗ :** ದುಡಿಮೆ ವ್ಯಕ್ತಿಗಳ ಹಾಗೂ ಕುಟುಂಬದ ಸುರಕ್ಷತೆಗೆ ಸಹಾಯವಾಗುತ್ತದೆ. ಈಗಿನ ದಿನಗಳಲ್ಲಿ ಉದ್ಯೋಗಗಳು ಹೆಚ್ಚುವುದರ ಬದಲು ಕಡಿಮೆಯಾಗುತ್ತಿವೆ. ಅಸಂಘಟಿತ ಕ್ಷೇತ್ರ ಹೆಚ್ಚುತ್ತಲಿದೆ. ಇದು ಜನಜೀವನದ ಮೇಲೆ ನೇರ ಪ್ರಭಾವ ಬೀರಲಿದೆ. ಭಾರತದಲ್ಲಿ ಪ್ರತಿಶತ ಶೇ. ೯೦ರಷ್ಟು ಜನ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಉದ್ಯೋಗದಲ್ಲಿ ಶೇಕಡಾವಾರು ಕಡಿತ ೬೧.೪ (೧೯೯೨)ರಿಂದ ೫೪.೮ (೧೯೯೪) ಮುಟ್ಟಿದೆ. ಅದೇ ಸಮಯದಲ್ಲಿ ಅಸಂಘಟಿತ ಕ್ಷೇತ್ರದಲ್ಲಿ ಉದ್ಯೋಗದ ಹೆಚ್ಚಳ ಶೇ. ೨೩.೨ (೧೯೯೨)ರಿಂದ ಶೇ. ೩೨ (೧೯೯೪) ಆಗಿದೆ. ಇದಲ್ಲದೆ, ಉದ್ಯೋಗದ ಸಾಂದರ್ಭೀಕರಣವು ಹೆಚ್ಚುತ್ತಲಿದೆ. ಈ ಉದ್ಯೋಗದಲ್ಲಿ ಕಡಿಮೆ ದುಡಿಮೆ ಹಾಗೂ ಅಸುರಕ್ಷಿತತೆ ಹೆಚ್ಚು.

ಇದಲ್ಲದೆ, ವ್ಯವಸಾಯ, ಆಹಾರ ವಿತರಣೆ ವ್ಯವಸ್ಥೆ, ಬಡತನ ನಿವಾರಣೋಪಾಯಗಳ ಬಗ್ಗೆ ಸರ್ಕಾರ ಗಮನಹರಿಸಿ ಕೂಡಲೇ ಆ ಕ್ಷೇತ್ರಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸಬೇಕಿದೆ. ಈ ಕನಿಷ್ಠ ನೀತಿಗಳನ್ನೂ ಪಾಲಿಸದಿದ್ದರೆ ನಮ್ಮ ಇಂದಿನ ವ್ಯವಸ್ಥೆಯನ್ನು ಹೇಗೆ ತಾನೆ ಪ್ರಜಾಪ್ರಭುತ್ವ ಎಂದು ಕರೆಯುವುದು ?

**ಪ್ರಕಾಶ್ ಸಿ. ರಾವ್**
೧೧೮೫, ೫ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಎಲ್. ಎನ್. ಕಾಲೊನಿ, ಯಶವಂತಪುರ, ಬೆಂಗಳೂರು - ೨೨

# ಗೊಂದಲಪುರದಲ್ಲಿ ಸಿಯೆಮ್ಮರ ವಾಸ!

**ಮಂ**ಪರು ಪರೀಕ್ಷೆಗೊಳಗಾದವರಂತೆ ತೂಕಡಿಸುತ್ತಿದ್ದ ಸೆಕ್ಯೂರಿಟಿ ಸಿಬ್ಬಂದಿಗೆ ಚಳ್ಳೆಹಣ್ಣು ತಿನ್ನಿಸಲು ತರಲೆ ತಿಪ್ಪನಿಗೆ ಕಷ್ಟವಾಗಲಿಲ್ಲ. ಆತ ಡಿಸಿಎಂರ ಮುಂದೆ ಧುತ್ತೆಂದು ಬಂದು ನಿಂತಾಗ, ಮಂಕು ಕವಿದವರಂತೆ ಕುಳಿತಿದ್ದ ಅವರಿಗೆ ನಿಜವಾಗಿ ಗಾಬರಿಯಾಯಿತು.

''ಸರಣ್ರೀ ! ನಾನು ತರ್ಲೆ ತಿಪ್ಪ. ಗೊಂದಲಪುರದೋನು !''

ಸ್ವಲ್ಪ ಕಕ್ಕಾಬಿಕ್ಕಿಯಾದ ಡಿಸಿಎಂ, ಸಾವರಿಸಿಕೊಂಡು ಮುಖದಲ್ಲಿ ದೇಶಾವರಿ ನಗೆ ತಂದುಕೊಂಡು, ''ಓಹೋ, ತಿಪ್ಪಣ್ಣೋರು... ಎಲ್ರೂ ಆರಾಮಾಗಿದ್ದೀರಾ ?'' ಎಂದು ವಿಚಾರಿಸಿಕೊಂಡರು. ಸಾಮಾನ್ಯವಾಗಿ ಚುನಾವಣೆಗಳು ಸಮೀಪಿಸಿದಾಗ ರಾಜಕಾರಣಿಗಳಿಗೆ 'ಲೋಕವೇ ನನ್ನ ಮನೆ, ಮಾನವಕುಲವೇ ನನ್ನ ಕುಟುಂಬ' ಎಂಬ ಮಾತು ನೆನಪಾಗುವುದು ಸಹಜವಷ್ಟೆ.

ತರಲೆ ತಿಪ್ಪ ಸಹ ಈಗ ಸಾಕಷ್ಟು ಬದಲಾಗಿದ್ದ. ಆತನ ಹೆಂಡತಿ ಆತನಿಗೆ 'ಮೈಗಳ್ಳ' ಎಂಬ ಪ್ರೀತಿಯ ಪ್ರಶಸ್ತಿ ನೀಡಿದ್ದರೂ, ಗೊಂದಲಪುರದ ಜನರು 'ಇವ ನಮ್ಮವ' ಎಂಬ ಅಂಗೀಕಾರ ನೀಡಿದ್ದರು. ಸಿದ್ದೇಶ್ವರಾನಂದಜಿಯ ಸಹವಾಸದಿಂದ ಆತ ಗುಂಡಯ್ಯನ ಗವಿಯಲ್ಲಿ ಭಜನೆ ಪಾರ್ಟಿಗೆ ಸೇರುತ್ತಿದ್ದ. 'ಹಾವು ತುಳಿದೆನೆ ಮಾನಿನಿ ಹಾವು ತುಳಿದೆನೆ' ಮತ್ತು 'ನಾವ್ ಮಜೂರಿ ಮಾಡ್ತೀವಿ ನಿಮಗೆ, ನೀವ್ ನಡೀರಿ ಮೇಲ್ಗಡೆ ಮನೆಗೆ' – ಮುಂತಾದ ತತ್ವಪದಗಳನ್ನು ಹಾಡುತ್ತ ಮೈಮರೆತು ತಲೆದೂಗುತ್ತಿದ್ದ. ಇನ್ನೊಂದು ಕಡೆ ಆತ ಬಂಗಾರಿಯ ಆಪ್ತಸಲಹೆಗಾರ. ಬಂಗಾರಿ ಹೋಟೆಲಿನಲ್ಲಿ ಊರ ವಿದ್ಯಮಾನಗಳ ಬಗ್ಗೆ ರನ್ನಿಂಗ್ ಕಾಮೆಂಟರಿ ನೀಡುತ್ತ ಗೊಂದಲಪುರದ ಅಧಿಕೃತ ವಕ್ತಾರನೂ ಆಗಿದ್ದ. ಹಾಗೆಯೇ ಆತನದು 'ಹಿತ್ತಾಳೆ ಕಿವಿ' – ಎಂದು ಬಂಗಾರಿ ಮೆಚ್ಚಿನ ಬಿರುದು ನೀಡಿದ್ದಳು. ಗೊಂದಲಪುರದ 'ಗಾಸಿಪ್ ಮಾಂಗರ್'ನೂ ಹೌದು. ಇಷ್ಟರ ಜೊತೆಗೆ ಇದಾನ ಸೌದದಲ್ಲಿ ಕ್ಲಾಸ್ ಫೋರ್ ಆಗಿರುವ ಈರಾಂಜ್ನಿ ಈತನ ಪಾಲಿಟಿಕ್ಸ್ ಗುರು! ಊರ ಪಂಚಾಯ್ತಿ ಕಟ್ಟೆಯ ಮತ್ತೊಬ್ಬ ಸದಸ್ಯನಾದ ಸಿಂಗ್ರಿ, 'ಇಂವ ಒಳೊಳ್ಗೇ ನಕ್ಸಲೈಟ್ ಆಗಿರುವಂಗದೆ ಕಣಜ್ಜೋ' ಎಂದು ಈತನ ಬಗ್ಗೆ ಯಜಮಾನ ಗುರುವಜ್ಜನಲ್ಲಿ ಅನುಮಾನ ಹುಟ್ಟಿಸಿದ್ದ.

''ನಮ್ಗೇನಾಗದೆ ಬುಡಿ! ಮಳೆ ಬೆಳೆ ಇಲ್ದೆ ಇದ್ರೂ ಗುಂಡೇಸ್ವರನ್ ಕರ್ಣೆಯಿಂದ ಚಂದಾಗಿದ್ದೀವಿ. ನಮ್ದೇನು ಎಂಗಿದ್ರೂ ನಡೀತ್ತೆ. ನೀವ್ಯಾಕೆ ಇಂಗೆ ಬೀಪಿ ಏರಿಸ್ಕಂಡಂಗೆ ಮಂಕಾಗ್ ಕುಂತಿದ್ದೀರಿ ?'' ಎಂದ.

ಡಿಸಿಎಂ ಏನೂ ಉತ್ತರ ಹೇಳದೆ ನಿಟ್ಟುಸಿರಿಟ್ಟರು.

'ಪಾಪ ನಮ್ ಎಡೂರಪ್ನೋರು' ಎನ್ನಿಸಿತು ತಿಪ್ಪನಿಗೆ. ''ಯಾವಾಗ್ಲೂ ನಗ್ತ ನಗ್ತ ಇರ್ಬೇಕು. ನಮ್ ಸದಾನಂದ ಗೌಡ್ರನ್ ನೋಡಿ. ಒಳ್ಗೆ ಕ್ವಾಪ ಕುದೀತಾ ಇದ್ರು ಮೋಕ ನಗ್ತಾ ಇರ್ತದೆ...'' – ಎಂದ.

''ತಿಪ್ಪಣ್ಣಾ ಮನುಷ್ಯಾ ಎಲ್ಲಿವರೆಗೆ ಬಗ್ ನಡೀಬೇಕು ನೀನೆ ಹೇಳು. ಮೂಗಿಗೆ ಮಣ್ ಮೆತ್ಗೊಳ್ಳುವರ್ಗೂ ಬಗ್‌ಬಹುದಪ್ಪ. ಆಮ್ಯಾಲೂ ಮೇಲ್ಗಡೆಯಿಂದ ತುಳೀತಾ ಹೋದ್ರೆ ? ಶಿವ ಶಿವಾ ಆಗಲ್ಲ ಕಣಪ್ಪ!'' ದೊಡ್ಡ ನಿಟ್ಟುಸಿರುಬಿಟ್ಟರು.

''ಬುಟ್ಹಾಕಿ ಅತ್ಲಾಗೆ! ನಮ್ ಈರಾಂಜ್ನಿ ಏಳೂವಂಗೆ ಪಾಲಿಟಿಕ್ಸ್‌ನಲ್ಲಿ ಲೆಗ್ ಪುಲ್ಲಿಂಗು ಬ್ಯಾಕ್ ಸ್ಟ್ಯಾಬಿಂಗು ಇದ್ದೇ ಇರ್ತದಪ್ಪ. ಆದ್ರೆ ನನ್ ಮಾತ್ನ ಬರ್ದಿಟ್ಕಳಿ. ನೀವು ಸಿಎಂ ಆಗೂದಂತೂ ಗ್ಯಾರಂಟಿ...''

''ತಿಪ್ಪಣ್ಣಾ ಕಣ್ಗೆ ನಿದ್ದೆ ಹತ್ತಾ ಇಲ್ಲ. ಕಣ್ ಮುಚ್ಚಿದ್ರೆ ಕೆಟ್‌ಕೆಟ್ ಕನ್ಸು. ಯಾರೋ ಹಿಂದ್ಗಡೆಯಿಂದ ಬಂದು ಟಾಂಗ್ ಕೊಟ್ಟು ಬೀಳಿಸ್ದಂಗೆ. ಮತ್ತೊಂದ್ ಸಲ ನನ್ ಸಫಾರಿ ಸೂಟ್‌ನ ಬಲವಂತ ಮಾಡಿ ಕಿತ್ಕಂಡಂಗೆ...''

''ಅಯ್ಯೋ ಅಂಗ್ಯಾಕೆ ಗಾಬ್ರಿಯಾಯ್ತೀರಿ ? ಬೆಚ್ಚು, ಕೆಟ್ ಕನ್ಸು, ಆಸ್ಗೆ ಒದ್ದೆ– ಇವೆಲ್ಲ ಒಂದೊಂದು ಅವಸ್ತೆ ತಾನೆ ? ನಮ್ ಚುಂಚನಗಿರಿ ಗುರ್ಗೋಳ್ ಕೈಲಿ ಒಂದು ಅಂತ್ರ ಕಟ್ಟಿಸ್ಕಂಡ್ರೆ ಯಾವ್ ಸೋಂಕಿದ್ರೂ ಸರಿಯಾಯ್ತದೆ. ಕೆಟ್ ಕನ್ಸು ಒಳ್ಳೆ ಕನ್ಸು ಯಾವ್ದೂ ಕಾಣಿಸ್ದೆನೆ ಒಳ್ಳೆ ಮಾಮೇರಿ ನಿದ್ದೆ ಬರ್ತದೆ...''

''ತಿಪ್ಪಣ್ಣ ನಮ್ ಅಡ್ವೈಸರ್‌ಗಳೆಲ್ಲ ಯೂಸ್‌ಲೆಸ್‌ಗಳು. ಯಾರೂ ಇಂಥ ಅಡ್ವೈಸ್ ಮಾಡ್ಲಿಲ್ಲ ನೋಡು. ಆದ್ರೂ ಧೈರ್ಯ ಬರೋಲ್ಲ!''

''ನಮ್ಮ ಈರಾಂಜ್ನಿ ಏಳ್ತಿದ್ದ – ಪುಕ್ಕಲ್ರಿಗಲ್ಲ ಪಾಲಿಟಿಕ್ಸ್ ಅಂತ. ಬಂದದ್ದೆಲ್ಲಾ ಬರ್ಲಿ ಒಂದ್ ಕೈ ನೋಡೇ ಬಿಡ್ತೀನಿ ಅನ್ನೋ ಗುಂಡ್ಗೆ ಇರ್ಬೇಕು. ನೀವು ಸಿಎಂ ಆಗೋದನ್ನ ತಪ್ಸೋಕೆ ಯಾವ್ ಮೊನ್ಗಾರನ್ ಕೈಲೂ ಆಗೊಲ್ಲ. ಬೇಕಾದ್ರೆ ಬರ್ದಿಟ್ಕಳಿ ನನ್ ಮಾತ್ನ...!''

ತಾನು ಸಿಎಂ ಆದಂತೆ ಕಲ್ಪಿಸಿಕೊಂಡ ಡಿಸಿಎಂ ಒಂದು ಕ್ಷಣ ಸಂಭ್ರಮಿಸಿದರು. ಮನಸ್ಸಿನ ಗೊಂದಲ ಸ್ವಲ್ಪ ಕಡಿಮೆಯಾದಂತೆನಿಸಿತು.

''ಗೊಂದಲಪುರದಲ್ಲಿರುವ ಮಠ ಯಾವುದು ? ಜಗದ್ಗುರುಗಳು ಯಾರು ? ದೇವಸ್ಥಾನ ಯಾವುದು ?'' ಎಂದೆಲ್ಲ ಆತ್ಮೀಯತೆಯಿಂದ ವಿಚಾರಿಸಿದರು.

ಈರಾಂಜ್ನಿ ಹೇಳಿದ್ದುದೆಲ್ಲ ತರಲೆ ತಿಪ್ಪನ ನೆನಪಿಗೆ ಬಂತು. ಹಣಕಾಸಿನ ಮಂತ್ರಿಯೂ ಆಗಿರುವ ಡಿಸಿಎಂ, ಅನೇಕ ಮಠಗಳಿಗೆ, ಹಸು ಸಾಕುವವರಿಗೆ ಕೈ ಬಿಚ್ಚಿ ಧಾರಾಳ ಹಣ ಸ್ಯಾಂಕ್ಷನ್ ಮಾಡಿದ್ದಾರೆ. ಕಬ್ಬಿಣ ಕಾಯ್ದು ಹಣ್ಣಾಗಿರುವಾಗ ಸುತ್ತಿಗೆಯಿಂದ ಬಡಿದರೆ ಕಬ್ಬಿಣವನ್ನು ಕೊಡಲಿಯಾಗಿಯೋ, ಕುಡುಗೋಲಾಗಿಯೋ, ನೇಗಿಲ ಗುಳವಾಗಿಯೋ ಮಾಡಬಹುದು ಎಂಬುದನ್ನು ಕೆಂಪಾಚಾರಿಯ ಕುಲುಮೆಯಲ್ಲಿ ಸ್ವತಃ ಕಂಡಿದ್ದ ತಿಪ್ಪ.

''ಎಡೂರಪ್ನೋರೆ ನೀವೇ ನಮ್ಮ ಸಿಯೆಮ್ಮು. ಇದು ಗುಂಡೇಸ್ವರನ್ ಪಾದ್ದಾಣೆ ಸತ್ಯ. ನಮ್ಮೂರಿನ್ ಸಿದ್ದಪ್ಪಾಜಿ ಗುಡಿ ಸಣ್‌ದು. ವಾರಕ್ಕೊಂದು ಪೂಜೆ, ವರ್ಸಕೊಂದ್ ಜಾತ್ರೆ. ನಮ್ ಸಿದ್ದೇಸ್ವರಾನಂದ್‌ಜಿ ಇತ್ತೀಚ್ಗೆ ಗುಂಡೇಸ್ವರನ್ ಗವೀಲಿ ಒಂದ್ ಮಟ ಕಟ್ಕಂಡು, ಬಜಣೆ ಪಜಣೆ ಮಾಡ್ಕಂಡವ್ನೆ. ನಾನೂ ಒಯ್ತೀನಿ ಅನ್ನಿ. ನಮ್ಮೂರಲ್ಲಿ ಎಲ್ರೂ ಎಮ್ಮೆ ಸಾಕವ್ರೆ. ಮನೆಗೊಂದು ಕುರಿ, ನಮ್ಗೆಲ್ಲ ಒಂದೊಂದು ಸೈಕಲ್ಲು. ಮಾನ್ಯ ಮು.ಮಂ.ಗಳು ಇವಕ್ಕೆ ದನ ಸಾಯಾ ಮಾಡ್ಬೇಕು ಅಂತ ಬೇಡ್ಕೆ ಮಾಡ್ತೀನಿ!'' ಎಂದು ತರಲೆ ತಿಪ್ಪ ಹಿಂದಿನ ಕಾಲದ ಅರ್ಜಿ ಧಾಟಿಯಲ್ಲಿ ಅರಿಕೆ ಮಾಡಿಕೊಂಡ.

ಇಷ್ಟು ಹೊತ್ತಿಗೆ ಡಿಸಿಎಂ ಪ್ರಸನ್ನರಾಗಿದ್ದಂತಿತ್ತು. ಅವರ ಮುಖದಲ್ಲಿ ಒಂದು ಸಣ್ಣ ನಗೆ ಮಿಂಚಿದಂತಾಯಿತು.

ತರಲೆ ತಿಪ್ಪನ ಉತ್ಸಾಹ ಇಮ್ಮಡಿಯಾಗಿತ್ತು. ತನ್ನ ಅಡ್ವೈಸನ್ನು ಮುಂದುವರಿಸಿದ. ''ಈಗ ನಮ್ ಕುಮಾರಣ್ಣೋರು ಮಾಡ್ತಾ ಅವ್ರಲ್ಲ ಗ್ರಾಮವಾಸ, ಅದನ್ನು ಮಾತ್ರ ನಿಲ್ಸ್‌ಬ್ಯಾಡಿ. ನಿಮ್ಮ



• ಬೀರಣ್ಣ

ಪಿಎಗೆ ಈಗ್ಲೆ ಆರ್ಡರ್ ಮಾಡಿ. ಅಕ್ಟೋಬರ್ ಅತ್ನೆ ತಾರೀಕು ಗೊಂದಲಪುರದಲ್ಲಿ ವಾಸ. ನಾನು ಊರ್ನೋರ್ನೆಲ್ಲ ಸೇರ್ಸಿ, ಇಂಗಿಂಗೆ ರಡಿಯಾಗಿರಿ. ನಮ್ ಸಿಯೆಮ್ಮು ನಮ್ಮೂರಲ್ಲಿ ಒಂದ್ ರಾತ್ರಿ ತಂಗ್ತಾರೆ ಅಂತ ನಮ್ ಬೀದಿಗಳ್ನೆಲ್ಲ ಗುಡ್ಸಿ, ಬಚ್ಚಲ್ ನೀರು, ಎಮ್ಮೆ ಗಂಜ್ಲ ಯಾರೂ ಬೀದಿಗ್ ತಿರ್ಗಿಸ್‌ಬಾರ್ದು. ಮಕ್ಳು ಮರಿಗಳು ದಾರಿ ಅಂಚ್ನಲ್ಲಿ ಕಕ್ಕಸ್ ಮಾಡಕ್ಕೆ ಬುಡ್ಬಾರ್ದು ಉಸಾರ್ ಅಂತ ಡಂಗೂರ ಆಕ್ಸಿ ಊರ್ ಮುಂದೆ ಚಪ್ರ ಆಕ್ಸಿ ರಡಿಯಾಗಿರ್ತೀವಿ'' ಎಂದು ಅತಿಶೀಘ್ರದಲ್ಲೇ ಆಗಲಿರುವ ಸಿಯೆಮ್ಮನ್ನು ಉಬ್ಬಿಸಿ ಒಪ್ಪಿಸಲು ಪ್ರಯತ್ನಿಸಿದ.

ಸಿಎಮ್ಮು ಏನು ಹೇಳಬೇಕೆಂದು ತೋಚದವರಂತೆ ಪೆಚ್ಚು ನಗೆ ನಗತೊಡಗಿದರು.

''ನಿಮ್ಮ ಊಟ ತಿಂಡಿ ಇಸ್ಯ ನಂಗಿರ್ಲಿ. ನಮ್ಮ ಬಂಗಾರಕ್ಕ ಏ ಕ್ಲಾಸ್ ರೊಟ್ಟಿ ಪಲ್ಯ ಮಾಡ್ತಾಳೆ. ನಮ್ಮ ಪುಟ್ನಂಜಿ ಮುದ್ದೆ ತಿರುವೂದ್ರಲ್ಲಿ ಏನಾತಿ. ಒಂದ್ಸಲ ಟಿವಿಯವರೆ ಬಂದಿದ್ರಲ್ಲ! ನಮ್ ಚೆಲುವಕ್ಕ ಜ್ವಾಳದ್ ನುಚ್ಚಿನ್ ಉಪ್ಟಿಟ್ ಮಾಡ್ತಾಳೆ, ಆದ್ರೆ ಒಂದ್ ಯಡವಟ್ಟು ಅಂದ್ರೆ ನಮ್ ಬಾವಿಗಳೆಲ್ಲ ಬತ್ತೋಗಿ ಗುಂಡಯ್ಯನ್ ಒಂಡ್‌ದಿಂದ ಎಂಗಸ್ರು ನೀರ್ ತರುವಂಗಾಗದೆ. ಏನೂ ಚಿಂತೆ ಮಾಡ್ಕಬ್ಯಾಡಿ. ಗಾಡಿ ಕಟ್ಸಿ ಮೂರ್ನಾಕ್ ಪೀಪಾಯಿ ನೀರ್ತಂದು ಸ್ಟಾಕ್‌ಮಾಡಿ ನಿಮ್ ಸಾನ ಗೀನಕ್ಕೆಲ್ಲ ಏರ್ಪಾಡ್ ಮಾಡ್ತೀವಿ.''

* * *

ತಿಪ್ಪ ಬಸ್ಸಿಳಿದು ಊರಿನ ಕಡೆ ನಡೆಯುತ್ತಿದ್ದಾಗ ಡಿ.ಸಿ. ಸಾಹೇಬರ ಜೀಪು ಎದುರಿಗೆ ಬಂತು. ಜೊತೆಯಲ್ಲೇ ತಾಸೀಲ್ದಾರ್ ಸಾಹೇಬರೂ ಇದ್ದರು. ''ಓಹೋ ನಮಸ್ಕಾರ ಬುದ್ದೀಯೋರ್ಗೆ. ಒಂದೇ ಕಡೆ ಇಬ್ಬರ್ದ್ದೂ ದರ್ಸನಾ ಆಯ್ತು. ಅಕ್ಟೋಬರ್ ಅತ್ತು ಬರ್ಕಳ್ಳಿ ಡೈರೀಲಿ. ಸಿಯೆಮ್ ನಮ್ಮೂರ್ನಲ್ಲಿ ತಂಗ್ತಾರೆ'' ಎಂದ.

## ತಮಿಳುನಾಡಿಗೆ ಕಾವೇರಿ ನೀರು

ಅವರ ಪಾಲಿನ ನೀರನ್ನೆಲ್ಲ
ಮಳೆಗಾಲದಲ್ಲೇ ಬಿಟ್ಬಿಡಿ...!
ಮತ್ತೇ ಬೇಸಿಗೆಯಲ್ಲಿ ನೀರು ಬಿಡಿ
ಎಂದು ಅವರು ಕೇಳಬಾರದು...

ಡಿ.ಸಿ.ಯವರಿಗೂ ಗಾಬರಿ. ''ಏನಯ್ಯ ತಿಪ್ಪಣ್ಣ ಸಿಯೆಮ್ಮು ನಿಮ್ಮೂರ್ಗೆ ಬರ್ತಾರಾ ? ನಮ್ಗೇನೂ ಕಮ್ಯುನಿಕೇಷನ್ ಇಲ್ವಲ್ಲಯ್ಯಾ ?'' ಎಂದರು.

''ಈಗ ಈ ಸಿಯೆಮ್ಮು ವಾರಕ್ಕೊಂದು ಊರ್ನಲ್ಲಿ ತಂಗಿದ್ದು ಜನಗಳ ಕಸ್ಟ ಸುಕ ಏನೂಂತ ಇಚಾರಿಸ್ತೀನಿ ಅಂದ್ರಪ್ಪ. ನಾನೇ ಮೊದ್ಲು ಬುಕ್ ಮಾಡ್ಕಂಡ್ ಇದೀಗ ಬರ್ತಾ ಇವ್ನಿ. ನಿಮ್ದು ಯಾವಾಗ್ಲೂ ಇದ್ದದ್ದೆ. ಕಮುನಿಕೇಸನ್ನು ಗಿಮುನಿಕೇಸನ್ನು ಅಂತ ಯಾವುದ್ಕೂ ಅಡ್‌ಗಾಲ್ ಆಕ್ತೀರಿ !'' ಎಂದು ಡಿ.ಸಿ.ಯವರ ಮೇಲೆ ತಿರುಗಿಬಿದ್ದ.

''ಈ ಜನ ತೀರಾ ಕೆಟ್ಟೋಗಿದಾರೆ ಕಣ್ರಿ. ಬಡವಾ ನೀ ಮಡಗಿದಂಗಿರು ಅನ್ನೂದೇನೂ ಇಲ್ಲ. ಈಗ್ನೋಡಿ ಈ ತರಲೆ ಮನುಷ್ಯ ಸಿಯೆಮ್ಮು ನಮ್ಮೂರಿಗ್ ಬರ್ತಾರೆ ಅಂತ ಜ್ವಾಪಾಳದ್ ಮಾತ್ರೆ ಕೊಟ್ಟ! ಗೊಂದಲಪುರದಲ್ಲಿ ರಸ್ತೆ, ಬೀದಿ, ಬಚ್ಲು – ಯಾವ್ದೂ ಸರಿಯಿಲ್ಲ. ನೀರಂತೂ ಮೊದ್ಲೇ ಇಲ್ಲ. ನಾಲ್ಕ್ ಟ್ಯಾಂಕರ್‌ನಲ್ಲಿ ನೀರ್ನೇನೋ ತರಿಸ್ಬೋದು ಅನ್ಕಳಿ. ಎಲ್ರಿ ಸ್ಟಾಕ್ ಮಾಡೋದು ಅದನ್ನ! ಸಿಯೆಮ್ಮು ಅಂದ್ರೆ ಒಬ್ರೇ ಬರ್ತಾರೇನ್ರೀ ? ಅವ್ರ ಜೊತೆ ಬರ್ತಾರಲ್ಲಪ್ಪ ಅಫೀಷಿಯಲ್‌ಗಳು. ರಾಮಾ ರಾಮಾ! ಊರ್ನಲ್ಲಿ ಕಕ್ಕಸ್ಸೇ ಇಲ್ವಲ್ರಿ. ಅವರ್ನ ತಿಪ್ಪೇ ಗುಂಡಿಗ್ಹೋಗಿ ಅನ್ನೋಕಾಗುತ್ತೇನ್ರಿ! ಈ ಜನ ಸುಮ್ನೆ ಪ್ರಾಬ್ಲಮ್ ಕ್ರಿಯೇಟ್ ಮಾಡ್ತಾರಲ್ರಿ!'' ಎಂದು ಡಿ.ಸಿ.ಯವರು ತಹಸೀಲ್ದಾರರೊಂದಿಗೆ ತನ್ನ ಸಮಸ್ಯೆ, ಅಸಮಾಧಾನವನ್ನು ಕಾರಿಕೊಂಡರು.

ತರಲೆ ತಿಪ್ಪ ದಾರಿಯಲ್ಲಿ ಎದುರಾದವರಿಗೆಲ್ಲ ಗೊಂದಲಪುರದಲ್ಲಿ ಸಿಯೆಮ್ಮು ಒಂದ್ ದಿನ ತಂಗ್ತಾರೆ ಎಂಬ ಸುದ್ದಿ ಬಿತ್ತರಿಸುತ್ತ ಹೋದ.

ಬೀರಣ್ಣ
ಗೊಂದಲಪುರ

# ನಾನು ಬೆಳೆದಂತೆ

ದೀರ್ಘಕಾಲದ ಹಿಂದೆ
ನಾನು ನನ್ನ ಕನಸನ್ನು ಸ್ವಲ್ಪ ಮರೆತೇಬಿಟ್ಟಿದ್ದೇನೆ
ಆದರದು ಅಲ್ಲಿತ್ತು
ನನ್ನೆದುರಿಗೆ
ಸೂರ್ಯನಷ್ಟೇ ಪ್ರಜ್ವಲ
ನನ್ನ ಕನಸು
ಮತ್ತೆ ಆಗ ಗೋಡೆಯೊಂದು ಎದ್ದಿತು
ಎದ್ದಿತು ನಿಧಾನವಾಗಿ
ನಿಧಾನವಾಗಿ
ನನ್ನ ಮತ್ತು ನನ್ನ ಕನಸಿನ ನಡುವೆ
ಎದ್ದಿತು ನಿಧಾನವಾಗಿ
ಕ್ಷೀಣಿಸುತ್ತಾ
ಅವಿತಿಟ್ಟುಕೊಳ್ಳುತ್ತಾ
ನನ್ನ ಕನಸಿನ ಬೆಳಕು. ಎದ್ದಿತು ಆಕಾಶ ಮುಟ್ಟುವವರೆಗೆ
ಆ ಗೋಡೆ
ನೆರಳು
ನಾನು ಕಪ್ಪು
ನಾನು ನೆರಳಲ್ಲಿ ಮಲಗುತ್ತೇನೆ
ನನ್ನ ಕನಸಿನ ಬೆಳಕು ನನ್ನೆದುರಿಗಿಲ್ಲ
ನನ್ನ ಮೇಲಿದೆ
ದಪ್ಪಗೋಡೆ ಮಾತ್ರ
ಬರೀ ನೆರಳು
ನನ್ನ ಕೈಗಳು
ನನ್ನ ಕಪ್ಪು ಕೈಗಳು
ಗೋಡೆಯಲ್ಲಿ ನುಸುಳುತ್ತವೆ
ನನ್ನ ಕನಸನ್ನು ಕಾಣುತ್ತವೆ
ಈ ಕತ್ತಲೆಯನ್ನು ನಾಶಪಡಿಸಲು ನನಗೆ ಸಹಾಯ ಮಾಡು
ಈ ರಾತ್ರಿಯನ್ನು ಘಾಸಿಗೊಳಿಸಲು
ಈ ನೆರಳನ್ನು ಸೀಳಿ
ಸೂರ್ಯನ ಸಾವಿರ ಬೆಳಕಿಗೆ
ಸೂರ್ಯ ಸುತ್ತುವ ಸಾವಿರ ಕನಸುಗಳಿವೆ
ಸೂರ್ಯನ
ಸುತ್ತುವ ಸಾವಿರ ಕನಸುಗಳಿವೆ

ಮೂಲ : ಲ್ಯಾಂಗ್‌ಸ್ಟನ್ ಹ್ಯೂಸ್ ಕನ್ನಡಕ್ಕೆ : ಎಂ. ಎಸ್. ರಘುನಾಥ್
[illegible] ೬ನೇ ಮುಖ್ಯರಸ್ತೆ, ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಮಳೆಯಾಶ್ರಿತ ಪ್ರದೇಶಗಳ ಸುಸ್ಥಿರ ಅಭಿವೃದ್ಧಿಗಾಗಿ ರಾಷ್ಟ್ರೀಯ ಪ್ರಾಧಿಕಾರ

ಪ್ರೊ|| ಕೆ. ಸಿ. ಬಸಪ್ಪ

ಸ್ವಾತಂತ್ರ್ಯಾನಂತರದ ದಿನಗಳಲ್ಲಿ, ಕೃಷಿಕರನ್ನೊಳಗೊಂಡು ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದಂತೆ ಹತ್ತು ಹಲವು ಕಾರ್ಯ ಯೋಜನೆಗಳನ್ನು ಜಾರಿಗೆ ತರಲಾಗಿದೆ. ಅವೆಲ್ಲವುಗಳೂ ನಿರೂಪಣೆಯಲ್ಲಿ ಉತ್ತಮವೆನಿಸಿದವುಗಳೇ ಆದರೂ, ಅನುಷ್ಠಾನದ ಹಂತದಲ್ಲಿ ನಿರೀಕ್ಷಿತ ಪ್ರಗತಿ ಕಾಣಲಿಲ್ಲ. ಅನುಷ್ಠಾನಕ್ಕೆ ತಂದ ಕಾರ್ಯಯೋಜನೆಗಳೆಲ್ಲವೂ ಸಾಂಸ್ಥಿಕ ವೈಫಲ್ಯದಿಂದಲೇ ಟೀಕೆಗೆ ಗುರಿಯಾಗಿವೆ. ಅದರಂತೆಯೇ ವಿಷಮತೆಯ ನಿವಾರಣೆಗಾಗಿ ಹಮ್ಮಿಕೊಂಡ ಒಣಭೂಮಿ ಕೃಷಿಯ ಅಭಿವೃದ್ಧಿಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿಯೂ ಇದೇ ಸಮಸ್ಯೆ ಎದುರಾಗಿದೆ. ಈ ಅಂಶದ ಅರಿವಿನಿಂದಲೇ ಪ್ರಧಾನಿಯವರು ತಮ್ಮ ಕಳೆದ ವರ್ಷದ ಸ್ವಾತಂತ್ರ್ಯೋತ್ಸವ ಸಂದರ್ಭದ ಭಾಷಣದಲ್ಲಿ ಒಣಭೂಮಿ ಕೃಷಿ ಅಭಿವೃದ್ಧಿಗೆಂದೇ ಸಮಗ್ರ ನೆರವಿಗೆ ಮುಂದಾಗುವ ಸಂಯೋಜಿತ ಕಾರ್ಯಾಚರಣೆಯ ರಾಷ್ಟ್ರೀಯ ಪ್ರಾಧಿಕಾರ ಸ್ಥಾಪನೆಯ ಉದ್ದೇಶವನ್ನು ಪ್ರಸ್ತಾಪಿಸಿದರು.

ಅದರನ್ವಯ ಕೇಂದ್ರ ಗ್ರಾಮೀಣಾಭಿವೃದ್ಧಿ ಸಚಿವಾಲಯವು ಪಾರ್ಥಸಾರಥಿ ಅವರ ನೇತೃತ್ವದಲ್ಲಿ ಒಣಭೂಮಿ ಕೃಷಿಯ ಅಭಿವೃದ್ಧಿಗಾಗಿಯೆ ಸೂಕ್ತ ಸಾಂಸ್ಥಿಕ ರೂಪವನ್ನು ರೂಪಿಸಲು ತಾಂತ್ರಿಕ ಸಮಿತಿಯೊಂದನ್ನು ನೇಮಿಸಿತ್ತು. ಈ ಸಮಿತಿಯು ನೀಲಿನಕ್ಷೆಯೊಂದನ್ನು ತಯಾರಿಸಿದ್ದು ಮಳೆಯಾಶ್ರಿತ ಪ್ರದೇಶಗಳ ಸುಸ್ಥಿರ ಅಭಿವೃದ್ಧಿಗಾಗಿ ಪ್ರಾಧಿಕಾರದ ಸ್ಥಾಪನೆಯ ಅವಶ್ಯಕತೆಯನ್ನು ಒತ್ತಿ ಹೇಳಿತು.

ಗ್ರಾಮೀಣಾಭಿವೃದ್ಧಿ, ಒಣಭೂಮಿ ಕೃಷಿ ಹಾಗೂ ಸಣ್ಣ ಮತ್ತು ಭೂರಹಿತ ಕೃಷಿ ಕಾರ್ಮಿಕರ ಬದುಕಿನ ಸುಧಾರಣೆಗೆಂದು ಈ ಹಿಂದೆ ಜಾರಿಗೆ ತಂದ ಹಲವು ಯೋಜನೆಗಳ ಅಪಯಶಸ್ಸು ಹಾಗೂ ಅರೆಯಶಸ್ಸಿಗೆ ಕಾರಣವನ್ನು ಕಂಡುಹಿಡಿದಿರುವ ಈ ವರದಿಯು, ಈ ಹಿಂದಿನ ಎಲ್ಲ ಯೋಜನೆಗಳೂ ತಳಮಟ್ಟದಲ್ಲಿ ಅನುಷ್ಠಾನಗೊಳ್ಳುವಾಗ ಜಿಲ್ಲಾಧಿಕಾರಿ ಅಥವಾ ಜಿಲ್ಲಾ ಪಂಚಾಯಿತಿಯ ಕಾರ್ಯ ನಿರ್ವಹಣಾಧಿಕಾರಿಯ ಅಧಿಕಾರದ ನಿಯಂತ್ರಣಕ್ಕೆ ಒಳಪಟ್ಟಿರುತ್ತವೆ; ಈ ಅಧಿಕಾರಿಗಳಿಗೆ ಈಗಾಗಲೇ ಅಧಿಕ ಕಾರ್ಯಭಾರವಿದ್ದು ಈ ವಿಷಯದ ಬಗ್ಗೆ ಸಾಕಷ್ಟು ಗಮನಹರಿಸದೆ, ಬಡವರಲ್ಲಿನ ಕಡುಬಡವರೇ ಅನುಭೋಗಿಸುತ್ತಿದ್ದ ಕೃಷಿ ಉತ್ಪನ್ನಗಳಾದ ಕೆಳದರ್ಜೆ ಧಾನ್ಯಗಳು, ರಾಗಿ, ಜೋಳ, ನವಣೆ, ಸಜ್ಜೆ, ಬೇಳೆ ಕಾಳುಗಳು, ಎಣ್ಣೆಬೀಜಗಳ ಉತ್ಪಾದನೆಯಲ್ಲಿ ತೀವ್ರತರ ಹಿಂಜರಿತ ಸಂಘಟಿಸಿದೆ. ಹೀಗಾಗಿ ಬಹುಸಂಖ್ಯಾತ ಒಣಭೂಮಿ ಕೃಷಿಕರ ಬದುಕು ಹೀನಾಯಸ್ಥಿತಿ ತಲುಪಿ ಅಸಮಾನ ಬೆಳವಣಿಗೆಯ ವಿಷಮತೆ ಉಂಟಾಗಿದೆ ಎಂಬುದನ್ನು ಹೊರಗೆಡವಿದೆ.

**ಪ್ರಧಾನಿಗಳ ಅಳಲು :** ಜಾಗತೀಕರಣದ ಬಿರುಗಾಳಿಗೆ ಸಿಕ್ಕಿ, ಬದುಕು ಸ್ಮಶಾನ ಸದೃಶವಾಗಿರುವ ಒಣಭೂಮಿ ಕೃಷಿಕರು, ಗುಡ್ಡಗಾಡು ಹಾಗೂ ಬುಡಕಟ್ಟು ಜನಾಂಗದವರ ಭದ್ರತೆಯ ಬಗೆಗೆ ಪ್ರಧಾನಿ ಮನಮೋಹನ್ ಸಿಂಗ್ ಅವರು ಅಪಾರ ಕಾಳಜಿ ವ್ಯಕ್ತಪಡಿಸಿದ್ದಾರೆ. ಬಹುಸಂಖ್ಯಾತರೆನಿಸಿರುವ ಇವರುಗಳ ಪ್ರಗತಿಯಾದಾಗ ಮಾತ್ರ ದೇಶದ ಸರ್ವಾಂಗೀಣ ಬೆಳವಣಿಗೆ ಎಂಬುದು ಇವರ ಅಚಲ ನಂಬಿಕೆ. ಇದಕ್ಕಾಗಿಯೇ ಜನವರಿಯಲ್ಲಿ ನಡೆದ ಭಾರತೀಯ ವಿಜ್ಞಾನ ಕಾಂಗ್ರೆಸ್‌ನ ೯೩ನೇ ಅಧಿವೇಶನದಲ್ಲಿ ದೇಶದ ವಿಜ್ಞಾನಿಗಳನ್ನು ಉದ್ದೇಶಿಸಿ ಮಾತನಾಡುತ್ತಾ ಬಹುಸಂಖ್ಯಾತರು ಅವಲಂಬಿತವಾಗಿರುವ ಒಣಭೂಮಿ ಕೃಷಿ ಮತ್ತು ಕೃಷಿಕರ ಏಳಿಗೆಯಾಗಬೇಕು, ಅವರುಗಳು ಜಾಗತೀಕರಣದ ಸವಾಲುಗಳನ್ನು ಎದುರಿಸಿ, ಲಭ್ಯವಾದ ಅವಕಾಶಗಳನ್ನು ಬಾಚಿಕೊಳ್ಳುವಂತಾಗಬೇಕು, ದೇಶದ ಎರಡನೇ ಹಂತದ ಹಸಿರುಕ್ರಾಂತಿ ಈ ಮಾರ್ಗದಲ್ಲಿಯೇ ಮುನ್ನಡೆಯಬೇಕು. ಇದಕ್ಕೆ ಪೂರಕವಾಗುವಂತೆ ವಿಜ್ಞಾನಿಗಳು ಒಣಭೂಮಿ ಕೃಷಿಯು ಸದೃಢಗೊಳ್ಳಬಹುದಾದ, ಅಲ್ಲಿನ ಕೃಷಿಕರು ಸಮರ್ಥವಾಗಿ ಬಳಸಲು ಸಾಧ್ಯವಾಗಬಹುದಾದ ಹಾಗೂ ಶ್ರಮಬಾಹುಳ್ಯ ತಂತ್ರಜ್ಞಾನದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಅವರು ಡಾ|| ಎಂ. ಸ್ವಾಮಿನಾಥನ್ ನೇತೃತ್ವದ ಕೃಷಿ ಆಯೋಗ ಸಲಹೆ ಮಾಡಿರುವ ಒಣಭೂಮಿಯ ಮಣ್ಣಿನ ಆರೋಗ್ಯ ರಕ್ಷಣೆ, ಮಳೆ ನೀರಿನ ಕೃಷಿ, ನೀರಿನ ಸಂರಕ್ಷಣೆಯಲ್ಲದೆ ಅದರ ಸಮಾನ ಹಾಗೂ ಸದೃಢ ಬಳಕೆ, ಸಮರ್ಪಕ ಕೃಷಿ ಸಾಲದೊಡನೆ ಬೆಳೆ ಹಾಗೂ ಜೀವವಿಮೆಗಳ ಮೂಲಕ ರೈತರ ಆತ್ಮಹತ್ಯೆಗಳಿಗೆ ತಡೆ, ಒಣಭೂಮಿ ಸಾಗುವಳಿ ತಂತ್ರಜ್ಞಾನ, ಕೃಷಿಯ ಮೂಲ ಸೌಲಭ್ಯಗಳ ಪೂರೈಕೆ ಹಾಗೂ ಕೃಷಿ ಪೇಟೆಯ ಸಮರ್ಪಕತೆಯನ್ನು ಕುರಿತಂತೆ ಒತ್ತು ನೀಡಬೇಕೆಂಬ ಸಂಗತಿಯನ್ನು ಪ್ರತಿಪಾದಿಸಿದ್ದಾರೆ. ಇದೇ ವೇಳೆಯಲ್ಲಿ ಭೂರಹಿತ ಕೃಷಿಕರು, ಅಂಚಿನ ಸಣ್ಣ ಹಿಡುವಳಿದಾರರು, ದಲಿತರು ತಾವೇ ನಿರ್ವಹಿಸಬಹುದಾದ ಪಶು ಸಂಗೋಪನೆಯ ಬೆಳವಣಿಗೆಗೆ ಪೂರಕವೆನಿಸುವ ತಂತ್ರಜ್ಞಾನದ ಅವಶ್ಯಕತೆಯನ್ನು ಪ್ರಸ್ತಾಪಿಸಿದ್ದಾರೆ.

**ಅಸಮಾನ ಬೆಳವಣಿಗೆಯ ಮೊತ್ತ :** ಆರ್ಥಿಕ ಅಭಿವೃದ್ಧಿ ಕೇವಲ ಕೆಲವೇ ಪ್ರಮುಖವೆನಿಸುವ ಕ್ಷೇತ್ರಗಳಲ್ಲಿ ಜರುಗುತ್ತಿದೆ. ಅಭಿವೃದ್ಧಿಯ ಫಲಗಳೆಲ್ಲವೂ ಎಲ್ಲರಿಗೂ ಎಲ್ಲ ಪ್ರದೇಶಗಳಿಗೂ ಸಮನಾಗಿ ಹಂಚಿಕೆಯಾಗದೆ ಅಸಮಾನತೆಯ ಕಂದರ ಏರ್ಪಡುತ್ತಿದೆ. ಕೆಲವೇ ಕೆಲವು ಅದೃಷ್ಟವಂತ ಪ್ರದೇಶಗಳು ಮತ್ತು ಜನಸಮುದಾಯದ ವರ್ಗಗಳು ಅಭಿವೃದ್ಧಿಯ ಫಲಗಳನ್ನು ಪಡೆಯುತ್ತಾ ದೇಶದ ಬಹುಪಾಲು ಪ್ರದೇಶಗಳು ಮತ್ತು ಬಹುಸಂಖ್ಯಾತ ಜನಸಮುದಾಯಗಳು ಅಂಥ ಅವಕಾಶಗಳಿಂದ ವಂಚಿತರಾಗುತ್ತಿದ್ದಾರೆ.

ಒಣಭೂಮಿ ಬೇಸಾಯವೇ ಇರುವ, ಗುಡ್ಡಗಾಡು ಹಾಗೂ ಬುಡಕಟ್ಟು ಜನಾಂಗಗಳೇ ಇರುವ, ಪ್ರದೇಶಗಳಲ್ಲಿ ಬಡತನವು ಅಮಾನವೀಯವೆನಿಸುವಷ್ಟರ ಮಟ್ಟಿಗೆ ಘನೀಭೂತಗೊಂಡಿದೆ ಎಂಬುದನ್ನು ಅಂಕಿ - ಅಂಶಗಳು ಸಾಬೀತುಪಡಿಸುತ್ತವೆ. ದೇಶದಲ್ಲಿ ಬೆಳೆಯುತ್ತಿರುವ ಪ್ರಾದೇಶಿಕ ಅಸಮಾನತೆಯನ್ನು ಸರಿಪಡಿಸುವ ಸಲುವಾಗಿಯೇ ಯೋಜನಾ ಆಯೋಗವು



ಸಂಬಂಧಪಟ್ಟ ಸಚಿವರನ್ನೊಳಗೊಂಡ ಕಾರ್ಯ ತಂಡವೊಂದನ್ನು ರೂಪಿಸಿತ್ತು. ಈ ತಂಡವು ದೇಶದಲ್ಲಿ ಬೆಳೆಯುತ್ತಿರುವ ಪ್ರಾದೇಶಿಕ ಅಸಮಾನತೆಯ ಕುರಿತಂತೆ ನೀಡಿರುವ ವರದಿಯು ಯಾವುದೇ ಪ್ರಜ್ಞಾವಂತನನ್ನೂ ಕಲಕುತ್ತದೆ. ತಂಡದ ವರದಿಯಂತೆ ದೇಶದಲ್ಲಿ ೧೭೦ ಜಿಲ್ಲೆಗಳು ತೀವ್ರ ಬಡತನದ ಆಘಾತಕ್ಕೆ ಗುರಿಯಾಗಿವೆ. ಇವು ಗಳಲ್ಲಿ ಭಯೋತ್ಪಾದನೆಯ ಆತಂಕಕ್ಕೆ ಗುರಿಯಾದ ೫೫ ಜಿಲ್ಲೆಗಳೂ ಸೇರಿವೆ. ಬಡತನವು ಘನೀಭೂತ ಗೊಂಡ ಜಿಲ್ಲೆಗಳಲ್ಲಿಯೇ ಭಯೋತ್ಪಾದಕ ಕೃತ್ಯಗಳು ವ್ಯಾಪಕವಾಗಿರುವುದಲ್ಲದೆ, ಒಣಭೂಮಿ ಬೇಸಾಯವನ್ನೇ ಅವಲಂಬಿಸಿದ ಕೃಷಿಕರೇ ಬಹಳವಾಗಿ ಇರುವ ಜಿಲ್ಲೆಗಳಲ್ಲಿಯೇ ರೈತರ ಆತ್ಮಹತ್ಯೆ, ಹಸಿವು ಮತ್ತು ಅಪೌಷ್ಟಿಕತೆಯಿಂದ ಸಾಯುತ್ತಿರುವ ಶಿಶು ಮರಣಗಳು ಹೆಚ್ಚಿರುವ ಸಂಗತಿಯನ್ನು ವರದಿಯು ಹೊರಗೆಡವಿದೆ.



ಕೃಷಿ ತೀವ್ರತರ ಮುಗ್ಗಟ್ಟಿಗೆ ಸಿಲುಕಿರುವುದಕ್ಕೆ ಇದೇ ಮೂಲ ಕಾರಣವಾಗಿದೆ. ವಿಶೇಷವಾಗಿ ೧೯೯೦ರ ದಶಕದಿಂದೀಚೆಗೆ ಒಣ ಭೂಮಿ ಕೃಷಿ ತೀವ್ರ ಹಿನ್ನಡೆ ಅನುಭವಿಸುತ್ತಿದೆ. ೧೯೬೦ರ ದಶಕದ ಹಸಿರು ಕ್ರಾಂತಿಯ ನಂತರದ ಅವಧಿಯಲ್ಲಿ, ೧೯೯೦ರ ದಶಕದಲ್ಲಷ್ಟೇ ಪ್ರಪ್ರಥಮವಾಗಿ ಕೃಷಿಯ ಉತ್ಪಾದನೆಯು ಜನಸಂಖ್ಯೆಯ ಬೆಳವಣಿಗೆ ಗಿಂತಲೂ ಕಡಿಮೆಯಾಗಿದೆ. ಇದರಲ್ಲಿ ನೀರಾವರಿ ಕೃಷಿಯ ಉತ್ಪಾದನೆ ಅಚಲಸ್ಥಿತಿ ತಲುಪಿದ್ದರೆ ಒಣಭೂಮಿ ಕೃಷಿಯ ಉತ್ಪಾದನೆ ತೀವ್ರ ಹಿನ್ನಡೆಗೆ ಗುರಿಯಾಗಿದೆ.

ಒಟ್ಟಾರೆಯಾಗಿ ಆರ್ಥಿಕ ಪರಿಭಾವನೆಯಲ್ಲಿ ದೇಶದ ಬೆಳವಣಿಗೆಯ ದರ ಸ್ಪರ್ಧಾತ್ಮಕವಾಗಿ ಮುನ್ನಡೆಯುತ್ತಿದೆ. ಕಳೆದ ೪೫ ವರ್ಷಗಳಲ್ಲಿನ ಯೋಜನಾ ಅವಧಿ ಯಲ್ಲಿದ್ದ ವಾರ್ಷಿಕ ಸರಾಸರಿ ಶೇ. ೩-೪ ಎಂಬುದು ಹಿಮ್ಮುಖದ ಬೆಳವಣಿಗೆಯ ದರ ಎನ್ನುವ ರೋಗಗ್ರಸ್ತ ಲಕ್ಷಣ ರೇಖೆಯನ್ನು ದಾಟಿ ಇಂದು ಸರಾಸರಿ ಶೇ. ೮-೯ರ ವಾರ್ಷಿಕ ಬೆಳವಣಿಗೆಯ ದರ ದಾಖಲಿಸುತ್ತಿದೆ. ಅಭಿವೃದ್ಧಿಶೀಲ ಜಗತ್ತಿನಲ್ಲಿ, ಚೈನಾ ದೇಶದಲ್ಲಿ ಮಾತ್ರ ಈ ದರ ಹೆಚ್ಚಿನದಾಗಿದೆ. ಹಣದುಬ್ಬರದ ದರ ಶೇ. ೫ರ ಪರಿಮಿತಿಯಲ್ಲಿದ್ದು ಈ ಬೆಳವಣಿಗೆ ವಿಶೇಷವೆನಿಸುತ್ತದೆ. ದೇಶದ ಉದ್ಯಮ ವ್ಯವಸ್ಥೆಯ ಪ್ರತಿಬಿಂಬವೆನಿಸಿರುವ ಷೇರು ಸಂವೇದನಾ ಸೂಚಿ ದಿನನಿತ್ಯ ಹೆಚ್ಚುತ್ತಲೇ ಸಾಗಿದ್ದು, ಅದು ಈಗ ೧೭,೦೦೦ ಗಡಿಯನ್ನು ದಾಟುತ್ತಾ ದೇಶದ ಉದ್ಯಮ ವ್ಯವಹಾರಗಳ ಸಮೃದ್ಧಿಯನ್ನು ಪ್ರತಿಬಿಂಬಿಸುತ್ತದೆ. ಇದನ್ನು ಗಮನಿಸಿದ ಅಮೇರಿಕಾವು ವಿದೇಶಿ ನೇರ ಬಂಡವಾಳ ಹೂಡಿಕೆಗೆ ಚೈನಾವನ್ನುಳಿದು ಭಾರತ ಪ್ರಶಸ್ತ ಸ್ಥಳವೆಂದು ತಮ್ಮಲ್ಲಿನ ಹೂಡಿಕೆದಾರರಿಗೆ ತಾಕೀತು ಮಾಡುತ್ತಿದೆ. ಹೀಗಾಗಿ ಅಲ್ಲಿನ ಉದ್ಯಮಗಳ ಸಾಲು ಈ ಕಡೆಗೆ ಧಾವಿಸುತ್ತಿದೆ. ಹೂಡಿಕೆಯ ರೂಪದಲ್ಲಿ ಬಿಲಿಯಾಂತರ ಡಾಲರ್‌ಗಳ ವಿದೇಶಿ ಹಣ ಇತ್ತ ಹರಿದುಬರುತ್ತಿದೆ.

ಜಾಗತೀಕರಣ ಹೊತ್ತುತಂದ ಅವಕಾಶಗಳನ್ನು ದೋಚುವುದಕ್ಕೆ ಮತ್ತು ಸೃಷ್ಟಿಸಿರುವ ಸವಾಲುಗಳನ್ನು ಎದುರಿಸುವುದಕ್ಕೆ ಅರ್ಥವ್ಯವಸ್ಥೆಯಲ್ಲಿ ತೀವ್ರತರ ಹೊಂದಾಣಿಕೆ-ಪ್ರಕ್ರಿಯೆಗಳು ಭರದಿಂದ ಸಾಗುತ್ತಿವೆ. ಮಾಹಿತಿ ತಂತ್ರಜ್ಞಾನದ ಕ್ರಾಂತಿ ಯಿಂದಾಗಿ ಸಂಪರ್ಕ ಸಂವಹನಗಳ ವಿಸ್ತರಣೆಯಿಂದ ಗ್ರಾಮೀಣ ಜನಸಮುದಾಯ ಪ್ರಗತಿವಾಹಿನಿಯಲ್ಲಿ ಬಂದು ಸೇರುತ್ತಿದ್ದಾರೆ. ಶೇ. ೨ರಂತೆ ಜನರ ಸಂಖ್ಯೆಯು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಮಾನವಶಕ್ತಿ ಬದಲಾದ ಅವಶ್ಯಕತೆಗೆ ಅನುಗುಣವಾಗಿ ಪ್ರತಿಭೆ, ಕೌಶಲ್ಯ ಬೆಳೆಸಿಕೊಳ್ಳುತ್ತಿದೆ. ಈ ಸಂಗತಿಯನ್ನು ಅಮೇರಿಕಾದ ಅಧ್ಯಕ್ಷ ಸ್ವಯಂ ಬುಷ್ ಅವರೇ ಮಾನ್ಯ ಮಾಡುತ್ತ ಅಮೇರಿಕಾದ ಉದ್ಯಮಗಳಲ್ಲಿ ದುಡಿಯುತ್ತಿರುವ ಸಾಫ್ಟ್‌ವೇರ್ ಇಂಜಿನಿಯರ್‌ಗಳಲ್ಲಿ ಶೇ. ೪೨ ಭಾಗ ಭಾರತೀಯರೇ ಆಗಿದ್ದಾರೆ ಎಂದಿರುವುದನ್ನು ಗಮನಿಸಿದರೆ ''ಭಾರತ ಪ್ರಕಾಶಿಸುತ್ತಿದೆ'' ಎಂದು ಹೇಳುತ್ತಿದ್ದ ಈ ಹಿಂದಿನ ಎನ್.ಡಿ.ಎ. ಸರ್ಕಾರದ ಪ್ರತಿಪಾದನೆಯಲ್ಲಿ ಅತಿಶಯೋಕ್ತಿಯೇನೂ ಇರಲಾರದಲ್ಲವೆ? ಆದರೆ ಅಧಿಕಾರಶಾಹಿ ನಿರ್ವಹಿಸುವ ನಿಯೋಜಿತ ಗ್ರಾಮೀಣಾಭಿವೃದ್ಧಿ ಕಾರ್ಯಗಳು ಮಾತ್ರ ಸಮರ್ಪಕ ಅನುಷ್ಠಾನ, ಫಲಪ್ರದ ದೃಷ್ಟಿಕೋನ, ದೀರ್ಘಾವಧಿ ದೃಷ್ಟಿ ಹೊಂದಲು ಸಾಧ್ಯವಾಗದೆ ನಿರ್ದಿಷ್ಟ ವೇಳೆಯಲ್ಲಿ ಆ ಕಾರ್ಯಕ್ಕಾಗಿ ಗೊತ್ತುಪಡಿಸಿದ ಹಣವನ್ನು ವೆಚ್ಚಮಾಡಿ ಗುರಿ ತಲುಪಿದ್ದೇವೆಂದು ಹೇಳಲಷ್ಟೇ ಸಮರ್ಥರಾಗಿದ್ದಾರೆ. ಸಂಬಂಧಪಟ್ಟ ಅಧಿಕಾರಿ ಗಳು ಆಗಾಗ್ಗೆ ವರ್ಗಾವಣೆ ಹೊಂದುವುದರಿಂದ ಕಾರ್ಯ ಯೋಜನೆಗಳ ನಿರಂತರತೆಗೆ ಧಕ್ಕೆ ಉಂಟಾಗುತ್ತದೆ. ವಿಭಿನ್ನ ಮನೋಭಾವ ಮತ್ತು ದೃಷ್ಟಿಕೋನದ ಅಧಿಕಾರಿಗಳ ನಡುವೆ ಸಮನ್ವಯ ಸಾಧಿಸುವುದು ಇಲ್ಲಿ ಕಷ್ಟಸಾಧ್ಯವಾಗಿದೆ. ಹೀಗಾಗಿ ಯೋಜನೆಗಳ ಅನುಷ್ಠಾನದಲ್ಲಿ ಸಮಸ್ಯೆ ಉದ್ಭವಿಸಿ ಭ್ರಷ್ಟಾಚಾರಕ್ಕೆ ಆಸ್ಪದವಾಗುತ್ತದೆ, ಯೋಜನೆ ಅಪಯಶಸ್ವಿಯಾಗುತ್ತದೆ.

**ಯೋಜನೆಗಳ ಸಂಯೋಜಿತ ಕಾರ್ಯಾನುಷ್ಠಾನ**

ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಸಾಂಸ್ಥಿಕ ರಚನೆಯ ನ್ಯೂನತೆ ಗಳನ್ನು ಗಮನಿಸಿರುವ ಪಾರ್ಥಸಾರಥಿ ಸಮಿತಿಯು ಅದನ್ನು ನಿವಾರಿಸುವ ಪರಿಹಾರಗಳನ್ನು ತನ್ನ ವರದಿಯಲ್ಲಿ ಪ್ರತಿಪಾದಿಸಿದೆ. ಕಾರ್ಯಾನುಷ್ಠಾನದಲ್ಲಿ ಗುರಿ ನಿರ್ದೇಶಿತವಾದ, ಸಂಯೋಜಿತ ಕಾರ್ಯಾಚರಣೆ ಹೊಂದಿದ, ಸಂಬಂಧಿಸಿದ ಎಲ್ಲ ಇಲಾಖಾಧಿಕಾರಿಗಳನ್ನು ಜವಾಬ್ದಾರಿಯುತವಾಗಿ ಒಂದುಗೂಡುವಂತೆ ಮಾಡುವ ರಾಷ್ಟ್ರೀಯ ಪ್ರಾಧಿಕಾರದ ಸ್ಥಾಪನೆಯನ್ನು ಇದು ಸಲಹೆ ಮಾಡಿದ್ದು, ಅದನ್ನು ''ಮಳೆಯಾಶ್ರಿತ ಪ್ರದೇಶಗಳ ಸದೃಢ ಅಭಿವೃದ್ಧಿಗಾಗಿ ರಾಷ್ಟ್ರೀಯ ಪ್ರಾಧಿಕಾರ'' ಎಂದು ಹೆಸರಿಸಿದೆ.

ಪ್ರಾಧಿಕಾರವು ಸಾಕಷ್ಟು ಅಧಿಕಾರ, ಸ್ಥಳೀಯ ಅವಶ್ಯಕತೆಗಳಿಗೆ ಬದಲಾಗುವ ಕಾರ್ಯಾಚರಣೆ ಹಾಗೂ ಸಾಧನೆಯ ಬಗೆಗೆ ದಾಖಲೆಗಳನ್ನು ಹೊಂದಿರುತ್ತದೆ. ತನ್ನ ಕಾರ್ಯಸೂಚಿಯ ನಿರ್ವಹಣೆಗೆ ಬೇಕಾದ ಮಾನವ ಶಕ್ತಿ ಮತ್ತು ಸಾಂಸ್ಥಿಕ ಸಂಯೋಜನೆಯ ಸಾಮರ್ಥ್ಯ ಹೊಂದಿರುತ್ತದೆ. ಇದು ವೃತ್ತಿನಿರತ ಹಾಗೂ ಉತ್ಪಾದನಾ ಪ್ರಣೀತ ಪ್ರಸ್ತಾವನೆಗಳನ್ನು ಹೊಂದಿದ್ದು ವಿದೇಶೀಯ ಯಶಸ್ವೀ ಅನುಭವಗಳ ಹಿನ್ನೆಲೆಯಲ್ಲಿ ನಿರ್ವಹಣೆ ಮಾಡುವುದಲ್ಲದೆ ಅದಕ್ಕಾಗಿ ದೇಶೀಯ ಸಾರ್ವಜನಿಕ ಉದ್ಯಮಗಳ ಅನುಭವೀ ಅಧಿಕಾರಿಗಳನ್ನು ನಿಯೋಜಿಸಲಾಗುತ್ತದೆ. ಪ್ರಾಧಿಕಾರದ ಸಂಸ್ಥಾಪನೆಯ ಸ್ವರೂಪವು ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿಯ ಮಾದರಿಯದಾಗಿದ್ದು ಕಾರ್ಯಾಚರಣೆಯಲ್ಲಿ ಸ್ವಾತಂತ್ರ್ಯ ಮತ್ತು ಸಡಿಲಿಕೆಯ ಅವಕಾಶವಿರಲೆಂದು ಆರಂಭದಲ್ಲಿ ೧೮೬೦ರ ಸಹಕಾರಿ ಸಂಘಗಳ ಶಾಸನದನ್ವಯ ನೋಂದಾಯಿಸಲಾಗುತ್ತದೆ. ಹೀಗೆ ಹಂಗಾಮಿ ಸ್ವತಂತ್ರ ಸಂಸ್ಥೆಯಾಗಿ ರೂಪುಗೊಳ್ಳುವ



ಪ್ರಾಧಿಕಾರವು ಮುಂಬರುವ ದಿನಗಳಲ್ಲಿ ಅವಶ್ಯಬಿದ್ದರೆ ಶಾಸನೀಯ ಮಂಡಳಿಯಾಗಿಯೂ ಪರಿವರ್ತಿತವಾಗುವ ಸ್ವರೂಪ ಪಡೆದಿರುತ್ತದೆ. ಸ್ಥಳೀಯ ಜನಸಂಖ್ಯೆಗೆ ಕುಡಿಯುವ ನೀರು, ಸುಸ್ಥಿರ ಜೀವನಾವಶ್ಯಕತೆಗಳ ಪೂರೈಕೆ, ಕಾಲಮಿತಿಗೊಳಪಟ್ಟಂತೆ ಕಾರ್ಯ ಯೋಜನೆಗಳನ್ನು ಹಮ್ಮಿಕೊಂಡು ೨೦೨೦ರ ವೇಳೆಗೆ ಒಣಭೂಮಿ ವಲಯಗಳು ಕ್ಷಾಮ ದಿಂದ ಮುಕ್ತವಾಗಿ ಸವಾಲುಗಳನ್ನು ಎದುರಿಸುವಂತಾಗಿ ಸಮೃದ್ಧಿಯುತ ಗೊಳಿಸುವ ಮಹತ್ವಾಕಾಂಕ್ಷೆಯನ್ನು ಇದು ಹೊಂದಿದೆ. ಇದು ಹಣಕಾಸಿನ ಮೂಲಗಳನ್ನು ಪತ್ತೆಹಚ್ಚಿ ಯೋಜನೆಗಳನ್ನು ಕಾಲಮಿತಿಗೊಳಪಟ್ಟು ಪರಿಣಾಮಕಾರಿಯಾಗಿ ಪೂರ್ಣಗೊಳ್ಳುವಂತೆ ನಿಗಾವಹಿಸುತ್ತದೆ.

ರಾಷ್ಟ್ರೀಯ ಪ್ರಾಧಿಕಾರವನ್ನು ಕಾರ್ಯಾಚರಣೆ ಮತ್ತು ಆಡಳಿತಾತ್ಮಕ ಕೌಶಲ್ಯತೆಯ ದೃಷ್ಟಿಯಿಂದ ಎರಡು ಹಂತಗಳಲ್ಲಿ ಕಾರ್ಯಾಚರಣೆ ಗೊಳ್ಳುವಂತೆ ರೂಪಿಸಲಾಗಿದೆ. ಮೇಲಿನ ಹಂತದಲ್ಲಿ ಕೇಂದ್ರ ಆಡಳಿತ ಮಂಡಳಿಯಿದ್ದು, ಮಂಡಳಿಯು ವೃತ್ತಿಯಲ್ಲಿ ಸ್ಪರ್ಧಾತ್ಮಕವೆನಿಸಿರುವ ವನನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿ ಆಯ್ಕೆ ಮಾಡಿ ನೇಮಕ ಮಾಡಲಾಗುತ್ತದೆ. ಮಂಡಳಿಯಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮತ್ತು ಕೃಷಿ, ಪರಿಸರ ಹಾಗೂ ಅರಣ್ಯ ಸಚಿವಾಲಯವನ್ನು ಪ್ರತಿನಿಧಿಸಲು ತಲಾ ಒಬ್ಬ ಸದಸ್ಯರನ್ನು ನಾಮಕರಣ ಮಾಡಲಾಗುತ್ತದೆ. ಪ್ರಾಧಿಕಾರದ ಕಾರ್ಯಾಚರಣೆ, ಹಣಕಾಸು ಸಂಸ್ಥಾನಿಕ ಹಾಗೂ ಮಾನವಾಭಿವೃದ್ಧಿ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಲು ಮೂರು ಜನರನ್ನು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಸಮರ್ಥರನ್ನು ಆಯ್ಕೆ ಮಾಡಲಾಗುತ್ತದೆ. ಜಲಾನಯನ ನಿರ್ವಹಣೆಯಲ್ಲಿ ಪ್ರಸಿದ್ಧರೆನಿಸುವ ಇಬ್ಬರು ಮತ್ತು ನಾಗರಿಕ ಸಮಾಜದ ಪ್ರತಿನಿಧಿಗಳಾಗಿ ಇಬ್ಬರು ಗಣ್ಯರನ್ನು ಮಂಡಳಿಯಲ್ಲಿ ಸೇರಿಸಲಾಗುತ್ತದೆ. ಒಣಭೂಮಿ ಕೃಷಿ ಫಲಾನುಭವಿಗಳ ಸಮಿತಿಯು ಪ್ರಾಧಿಕಾರಕ್ಕೆ ಸಲಹೆ ಮಾಡುವುದಲ್ಲದೆ ಕಾರ್ಯಾಚರಣೆಯ ಮೇಲೆ ನಿಗಾವಹಿಸುತ್ತದೆ. ಪ್ರಾಧಿಕಾರದ ಆಡಳಿತ ಮಂಡಳಿಯ ಅಧ್ಯಕ್ಷರಾಗಿ ಪ್ರಧಾನಿಗಳಾಗಿದ್ದರೆ, ಗ್ರಾಮೀಣಾಭಿವೃದ್ಧಿ, ಪರಿಸರ, ಅರಣ್ಯ ಮತ್ತು ಕೃಷಿ ಸಚಿವರುಗಳು ಇದರ ಉಪಾಧ್ಯಕ್ಷರುಗಳಾಗಿರುತ್ತಾರೆ. ಮಂಡಳಿಯಲ್ಲಿ ಜಲಾನಯನ ವ್ಯವಸ್ಥಾಪನೆಯಲ್ಲಿ ರಾಷ್ಟ್ರೀಯ ಮಹತ್ವ ಪಡೆದವರು ರಾಷ್ಟ್ರೀಯ ಮಟ್ಟದ ಕೃಷಿಕರು ಹಾಗೂ ವಿವಿಧ ನಿಯೋಗಗಳ ಸಮರ್ಥರನ್ನು ಪ್ರತಿನಿಧಿಸಲು ಅವಕಾಶ ಕೊಡಲಾಗಿರುತ್ತದೆ. ಕೇಂದ್ರ ಆಡಳಿತ ಮಂಡಳಿಯ ರೀತಿಯಲ್ಲಿಯೇ ರಾಜ್ಯ ಸರ್ಕಾರಗಳೂ ರಾಜ್ಯಮಟ್ಟದ ಆಡಳಿತ ಮಂಡಳಿಯನ್ನು ಹೊಂದಿದ್ದು ಇದರಲ್ಲಿ ಆಯ್ಕೆ ಸಮಿತಿಯಿಂದ ಶಿಫಾರಸುಗೊಂಡ ಆಯ್ಕೆ ನೇಮಕಗೊಂಡ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಮತ್ತು ಸದಸ್ಯರುಗಳೂ ಇರುತ್ತಾರೆ.

ಇದರ ಜೊತೆಗೆ ಜಲಾನಯನ ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳ ಉಸ್ತುವಾರಿಕೆಗಾಗಿ ಜಿಲ್ಲಾಮಟ್ಟದಲ್ಲಿ ಜಿಲ್ಲಾ ಜಲಾನಯನ ಅಭಿವೃದ್ಧಿ ಸಂಸ್ಥೆಯೊಂದಿದ್ದು ಇದನ್ನು ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ನೋಡಿಕೊಳ್ಳುತ್ತಾರೆ. ಇದು ರಾಷ್ಟ್ರೀಯ ಪ್ರಾಧಿಕಾರಕ್ಕೆ ಸ್ಥಳೀಯ ಅವಶ್ಯಕತೆಗಳ ಸೇತುವೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ದೇಶದ ಮಳೆಯಾಶ್ರಿತ ಪ್ರದೇಶಗಳ ಸುಸ್ಥಿರ ಅಭಿವೃದ್ಧಿಗಾಗಿ ರೂಪಿಸಿರುವ ರಾಷ್ಟ್ರೀಯ ಪ್ರಾಧಿಕಾರದ ಉದ್ದೇಶಿತ ಕಾರ್ಯಕ್ರಮಗಳಿಗೆ ೧೦,೦೦೦ ಕೋಟಿ ರೂ.ಗಳು ವರ್ಷಂಪ್ರತಿ ೨೦೧೫ರವರೆಗೆ ಖರ್ಚು ಮಾಡಬೇಕಾಗುತ್ತದೆ ಎಂದು ಸಮಿತಿ ವರದಿಯಲ್ಲಿ ತಿಳಿಸಿದೆ. ಹಾಗೊಂದು ವೇಳೆ ಸಾಧ್ಯವಾಗುವುದಾದರೆ ೨೦೧೫ರ ವೇಳೆಗೆ ಸಮತೆಯಾಧಾರಿತ ಸರ್ವಾಂಗೀಣ ದೇಶದ ಪ್ರಗತಿ ಸಾಧ್ಯ. ಆದ್ದರಿಂದ ಸರ್ಕಾರ ಪಾರ್ಥಸಾರಥಿ ವರದಿಯನ್ನು ಗಂಭೀರವಾಗಿ ಪರಿಗಣಿಸಿ ಅನುಷ್ಠಾನದ ಬಗೆಗೆ ರಚನಾತ್ಮಕ ನಿಲುವು ತಳೆಯಬೇಕಿದೆ.

ಪ್ರೊ|| ಕೆ. ಸಿ. ಬಸಪ್ಪ
ಪ್ರಾಂಶುಪಾಲರು, ನವೋದಯ ಕಾಲೇಜು, ಚಿಕ್ಕನಾಯಕನಹಳ್ಳಿ

# ಹಳದಿ ನೀರು



ಡೊಂಕಾಗಿದೆ ಇವನ ಮನೆಯ ದಾರಿ
ಮಂಥರೆಯ ಗೂನಿನ ಹಾಗೆ
ಕಣ್ಣು ಹರಿದಲ್ಲೆಲ್ಲ ಕೆಸರು ಇಟ್ಟಿಗೆ ರಾಶಿ
ಕೇಸರಿಯ ಕೊಡೆಯೊಳಗೆ ಅನ್ನಛತ್ರ

ಹೆಂಡ ಹೀರಿರುವಂಥ ಕಪಿಸೈನ್ಯ ಸಾಲಾಗಿ
ಬೆಂಕಿ ಬಾಲಕೆ ಹಚ್ಚಿ ಧ್ವಂಸದಾಟ !
ಪುಣ್ಯಕೋಟಿಯ ಮುಡಿಗೆ ಹೂ–ಗಂಧ ಸಿಂಗಾರ
ಅವಮಾನದುರಿಯಲ್ಲಿ ನಾಡದೇವಿ

ದಿಕ್ಕೆಟ್ಟು ಕೇಳುವನು – ಆ ಹಿರಿಯ ಜಾಂಬವನು
ಅಣ್ಣ–ತಮ್ಮರ ನಡುವೆ ಬೇಕೇ ಯುದ್ಧ ?...
ಮುಷ್ಟಿಕಾಳಗದಿಂದ ಕಷ್ಟಗಳಿಸಿದೆವಷ್ಟೇ
ಶೂದ್ರ ಸಂತಾನವೇ ನುಚ್ಚುನೂರು

ಅಗಸನನು ನಂಬಿದವ ಆಕಾಶ ಕೊಡಲಿಲ್ಲ
ತಮಸಾನದಿ ತುಂಬೆಲ್ಲ ಹಳದಿ ನೀರು
ಯಾರದೋ ಅಗ್ಗಳಿಕೆ ಯಾರಿಗೋ ಅನುಕೂಲ
ರಕ್ತಕಣ್ಣೀರಿನಲಿ ಆ ಮೌನಿಯು

ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ, ಅಂಕೋಲಾ,
ಉತ್ತರ ಕನ್ನಡ ಜಿಲ್ಲೆ

# ಜಾಗತಿಕ ತಪನ - ನಿವಾರಣೆ ಸಾಧ್ಯವೇ?

ಪ್ರೊ॥ ಜೆ. ಆರ್. ಲಕ್ಷ್ಮಣ ರಾವ್

ಮನುಷ್ಯ ದುಡಿಮೆ ಮಾಡುವ ಪ್ರಾಣಿ. ದುಡಿಮೆಗೆ ಶಕ್ತಿ ಬೇಕು. ಈ ಶಕ್ತಿಗಾಗಿ ತನ್ನ ತೋಳುಬಲವನ್ನೇ ನಂಬಿಕೊಂಡಿದ್ದ ಆದಿಮಾನವ, ಕಾಲಕ್ರಮದಲ್ಲಿ ಕಾಡುಪ್ರಾಣಿಗಳನ್ನು ಪಳಗಿಸಿ, ಅವುಗಳಿಂದ ದುಡಿಸಿಕೊಳ್ಳತೊಡಗಿದ. ಎತ್ತು, ಕೋಣ, ಕುದುರೆ, ಮರಳುಗಾಡುಗಳಲ್ಲಿನ ಒಂಟೆ, ಶೀತವಲಯದಲ್ಲಿ ಹಿಮಸಾರಂಗ ಮುಂತಾದ ಅನೇಕ ಪ್ರಾಣಿಗಳು ಅವನಿಗಾಗಿ ದುಡಿಯತೊಡಗಿದುವು. ಜೊತೆಜೊತೆಗೇ ಅಚೇತನ ಶಕ್ತಿ ಆಕರಗಳನ್ನೂ ಬಳಸಿಕೊಳ್ಳತೊಡಗಿದ. ಹಡಗುಗಳಲ್ಲಿ ಮತ್ತು ದೋಣಿಗಳಲ್ಲಿ ಪ್ರಯಾಣ ಮಾಡಲು ಬೀಸುಗಾಳಿಯ ನೆರವು ಪಡೆದ. ಕಾಳು ಬೀಸಿ ಹಿಟ್ಟು ಮಾಡಲು ಗಾಳಿಗಿರಣಿಗಳನ್ನು ನಿರ್ಮಿಸಿಕೊಂಡ. ಸೂರ್ಯರಶ್ಮಿಯಲ್ಲಿ ಮತ್ತು ಹರಿಯುವ ನೀರಿನಲ್ಲಿ ಅಡಗಿರುವ ಶಕ್ತಿಯನ್ನು ಉಪಯೋಗಿಸಿಕೊಳ್ಳಲು ಯುಕ್ತ ವಿಧಾನಗಳನ್ನು ರೂಢಿಸಿಕೊಂಡ.

ಕಳೆದ ನಾಲ್ಕೈದು ಶತಮಾನಗಳಲ್ಲಿ ಇನ್ನೆರಡು ಅಚೇತನ ಶಕ್ತಿ ಆಕರಗಳು ಅವನಿಗೆ ದೊರೆತುವು: ಕಲ್ಲಿದ್ದಲು ಮತ್ತು ಕಲ್ಲೆಣ್ಣೆ (ಪೆಟ್ರೋಲಿಯಮ್). ಈ ಎರಡೂ ಗತಕಾಲದ ಸಸ್ಯ ಮತ್ತು ಪ್ರಾಣಿ ಸಂಕುಲಗಳ ಪಳೆಯುಳಿಕೆಗಳಾಗಿರುವುದರಿಂದ ಅವುಗಳಿಗೆ 'ಫಾಸಿಲ್ ಇಂಧನಗಳು' ಎಂಬ ಹೆಸರು ಬಂದಿದೆ. ಕಲ್ಲಿದ್ದಲನ್ನೂ ಕಲ್ಲೆಣ್ಣೆಯಿಂದ ಪಡೆಯಬಹುದಾದ ಪೆಟ್ರೋಲ್, ಡೀಸೆಲ್, ಕೆರೋಸಿನ್ ಮುಂತಾದವನ್ನೂ ಸುಟ್ಟು ಆ ಶಾಖದ ನೆರವಿನಿಂದ ನೀರು ಕುದಿಸಿ ಉಗಿ ಉತ್ಪಾದಿಸಬಹುದು. ಉಗಿಯನ್ನು ನೇರವಾಗಿ ಉಪಯೋಗಿಸಿಕೊಂಡು ಅಥವಾ ಅದರ ಸಹಾಯದಿಂದ ಟರ್ಬೈನ್‌ಗಳನ್ನು ಓಡಿಸಿ ವಿದ್ಯುತ್ತನ್ನು ಪಡೆದುಕೊಂಡು ಬಗೆಬಗೆಯ ಯಂತ್ರಗಳನ್ನು ನಡೆಸಿ ಅಗತ್ಯವಾದ ಕೆಲಸಗಳನ್ನೆಲ್ಲ ಮಾಡಿಸಿಕೊಳ್ಳಬಹುದು. ಯೂರೋಪ್‌ನಲ್ಲಿ ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಆಯಿತೆಂದು ಹೇಳಲಾಗುವ ಔದ್ಯಮಿಕ ಕ್ರಾಂತಿಗೆ ಚಾಲನೆ ನೀಡಿದುದು ಈ ಫಾಸಿಲ್ ಇಂಧನಗಳು ಎಂಬ ಮಾತು ಅತಿಶಯೋಕ್ತಿಯೇನಲ್ಲ.

ಕಲ್ಲಿದ್ದಲು ಮತ್ತು ಕಲ್ಲೆಣ್ಣೆ ಉತ್ಪನ್ನಗಳ ದಹನ ಈಚಿನ ದಿನಗಳಲ್ಲಿ ಹದ್ದುಮೀರಿ ನಡೆಯುತ್ತಿದೆ. ಅದರಿಂದ ಆಗುತ್ತಿರುವ ಒಂದು ದುಷ್ಪರಿಣಾಮದ ಬಗ್ಗೆ ನಮಗೆ ಈಚೀಚೆಗೆ ಅರಿವು ಮೂಡುತ್ತಿದೆ. ಫಾಸಿಲ್ ಇಂಧನಗಳ ದಹನವು ಶಾಖವನ್ನು ನೀಡುವುದರ ಜೊತೆಗೆ ಕಾರ್ಬನ್ ಡೈಆಕ್ಸೈಡ್ ಅನಿಲವನ್ನು ಉತ್ಪತ್ತಿಮಾಡುತ್ತದೆ. ಅದು ವಾಯುಮಂಡಲದಲ್ಲಿ ಸೇರಿಕೊಳ್ಳುತ್ತದೆ. ಈ ಕ್ರಿಯೆ ಸೀಮಿತ ಪ್ರಮಾಣದಲ್ಲಿ ನಡೆದರೆ ಅದರಿಂದ ಯಾವ 'ದುಷ್ಪರಿಣಾಮ'ವೂ ಆಗುವುದಿಲ್ಲ. ವಾಸ್ತವವಾಗಿ ಲಕ್ಷಾಂತರ ವರ್ಷಗಳಿಂದ ಜೀವಿಗಳ ಉಸಿರಾಟದಿಂದ ಮತ್ತು ಸೌದೆ ಹಾಗೂ ಇದ್ದಿಲು ಸುಡುವುದರಿಂದ ಉತ್ಪತ್ತಿಯಾಗುವ ಕಾರ್ಬನ್ ಡೈಆಕ್ಸೈಡ್ ವಾತಾವರಣದಲ್ಲಿ ಸೇರಿಕೊಳ್ಳುತ್ತಲೇ ಇದೆ. ಆದರೆ ಹೆಚ್ಚುಕಡಮೆ ಅದೇ ದರದಲ್ಲಿ ಭೂಮಿಯ ಮೇಲಿನ ಗಿಡಮರಗಳು ಕಾರ್ಬನ್ ಡೈಆಕ್ಸೈಡನ್ನು ಹೀರಿಕೊಂಡು ದ್ಯುತಿಸಂಶ್ಲೇಷಣೆ ನಡೆಸಿ ಪೋಷಣೆ ಪಡೆಯುತ್ತಿವೆ. ಹೀಗಾಗಿ ಒಂದು ಬಗೆಯ ಸಮತೋಲನ ಏರ್ಪಟ್ಟು, ಬಹುಕಾಲದಿಂದಲೂ ನಮ್ಮ ವಾಯುಮಂಡಲದಲ್ಲಿ ಕಾರ್ಬನ್ ಡೈಆಕ್ಸೈಡ್ ಪ್ರಮಾಣ ಸೇಕಡ ೦.೦೨೮, ಅಂದರೆ ಒಂದು ಲಕ್ಷದಲ್ಲಿ ೨೮ರಷ್ಟು ಮಾತ್ರ ಇತ್ತು. ಆದರೆ ಈಚಿನ ದಿನಗಳಲ್ಲಿ ಔದ್ಯಮಿಕ ಕ್ರಾಂತಿಯ ಮುನ್ನಡೆಯ ಕಾರಣ, ಫಾಸಿಲ್ ಇಂಧನಗಳ ದಹನ ಹೆಚ್ಚಾಗುತ್ತಿದೆ. ಜೊತೆಜೊತೆಗೆ ಜನಸಂಖ್ಯೆಯ ಹೆಚ್ಚಳದ ಕಾರಣ ಜನವಸತಿಗಾಗಿಯೂ ವ್ಯವಸಾಯದ ಭೂಮಿಗಾಗಿಯೂ ಅರಣ್ಯನಾಶ ಮುಂದುವರಿಯುತ್ತ, ಗಿಡಮರಗಳು ಕಾರ್ಬನ್ ಡೈಆಕ್ಸೈಡ್ ಹೀರಿಕೊಳ್ಳುತ್ತಿರುವುದು ಕಡಮೆಯಾಗುತ್ತಿದೆ. ಪರಿಣಾಮವಾಗಿ ವಾಯುಮಂಡಲದಲ್ಲಿ ಅದರ ಪ್ರಮಾಣ ಸೇಕಡ ೦.೦೨೮ ಇದ್ದುದು ಈಗ ೦.೦೩೮ಗಿಂತ ಹೆಚ್ಚಾಗಿದೆ. ವಾತಾವರಣದಲ್ಲಿ ಕಾರ್ಬನ್ ಡೈಆಕ್ಸೈಡ್ ಅಂಶ ಅಧಿಕಗೊಳ್ಳುತ್ತಿರುವುದರ ಒಂದು ಅಹಿತಕರ ಪರಿಣಾಮ, ವಾತಾವರಣದ ಸರಾಸರಿ ಉಷ್ಣತೆ ಹೆಚ್ಚಾಗುತ್ತಿರುವುದು. ಇಂದು ಎಲ್ಲೆಡೆಯೂ ಜಾಗತಿಕ ತಪನ (global warming) ಎಂಬ ಮಾತು ಕೇಳಿಬರುತ್ತಿದೆ.

ಭೂಮಿಯ ಮೇಲೆ ಬಂದೆರಗುವ ಸೂರ್ಯರಶ್ಮಿ ಪ್ರತಿಫಲನಗೊಂಡು ಮೇಲೇರುವಾಗ ಅದರ ಬಹುಪಾಲು ಉಷ್ಣಕಿರಣಗಳ ರೂಪದಲ್ಲಿರುತ್ತದೆ. ಅದು ನಮ್ಮ ವಾಯುಮಂಡಲವನ್ನು ಹಾದು ಮೇಲೆ ಹೋಗಿ ಬಾಹ್ಯಾಕಾಶದಲ್ಲಿ ಚದುರಿ ಹೋಗುತ್ತದೆ. ವಾಯುವಿನ ಪ್ರಧಾನ ಘಟಕಗಳಾದ ನೈಟ್ರೋಜನ್ ಮತ್ತು ಆಕ್ಸಿಜನ್‌ಗಳು ಅದಕ್ಕೆ ಯಾವ ರೀತಿಯಲ್ಲಿಯೂ ಅಡ್ಡಿಬರುವುದಿಲ್ಲ. ಆದರೆ ವಾಯುವಿನಲ್ಲಿ ಅತ್ಯಲ್ಪ ಪ್ರಮಾಣದಲ್ಲಿರುವ ಕಾರ್ಬನ್ ಡೈಆಕ್ಸೈಡ್ ಮತ್ತು ನೀರಿನ ಆವಿಗಳಾದರೋ ಆ ಉಷ್ಣಕಿರಣಗಳ ಒಂದು ಭಾಗವನ್ನು ಹೀರಿಕೊಂಡು ವಾಯುಮಂಡಲವನ್ನು ಬೆಚ್ಚಗೆ ಮಾಡುತ್ತವೆ. ಪ್ರಾಯೋಗಿಕ ಉದ್ದೇಶಗಳಿಗಾಗಿ ಗಿಡಗಳ ಸಸಿಗಳನ್ನು ಬೆಳೆಸಲಿಕ್ಕೆಂದು ನಾವು ನಿರ್ಮಿಸುವ ಹಸಿರುಮನೆಗಳ ಗಾಜಿನ ಸೂರು ಸಹಾ ಕಾರ್ಬನ್ ಡೈಆಕ್ಸೈಡ್ ಮತ್ತು ನೀರಾವಿಗಳಂತೆ ಉಷ್ಣಕಿರಣಗಳನ್ನು ತಡೆದು ಹಸಿರು ಮನೆಯೊಳಗಿನ ವಾಯುವನ್ನು



ವಾಯುಮಂಡಲಕ್ಕೆ ಕಾರ್ಬನ್ ಡೈಆಕ್ಸೈಡ್ ಸೇರುತ್ತಿರುವುದನ್ನು ತಡೆಯಲು ನಮಗಿರುವ ಏಕೈಕ ಮಾರ್ಗವೆಂದರೆ, ನಮ್ಮ ಶಕ್ತಿ ಅಗತ್ಯಗಳನ್ನು ಪೂರೈಸಲು ಫಾಸಿಲ್ ಇಂಧನಗಳ ಬದಲು ಪರ್ಯಾಯ ಶಕ್ತಿ ಆಕರಗಳ ಮೊರೆಹೊಗುವುದು. ಇಂದು ಎಲ್ಲೆಡೆಯೂ ಪರ್ಯಾಯ ಶಕ್ತಿ ಆಕರಗಳಾದ ಗಾಳಿ ಶಕ್ತಿ, ಸೌರಶಕ್ತಿ ಮುಂತಾದವುಗಳನ್ನು ಬಳಸಿಕೊಳ್ಳಬಹುದಾದ ವಿಧಾನಗಳನ್ನು ಅಭಿವೃದ್ಧಿಪಡಿಸುವ ಪ್ರಯತ್ನಗಳು ನಡೆಯುತ್ತಿರುವುದರ ಹಿನ್ನೆಲೆ ಇದು. ಆ ಪ್ರಯತ್ನಗಳು ಗಮನಾರ್ಹ ಯಶಸ್ಸು ಗಳಿಸಿವೆ, ನಿಜ. ಆದರೆ ಮಾನವಕುಲ ಎದುರಿಸುತ್ತಿರುವ ಸಮಸ್ಯೆಯ ಪರಿಹಾರಕ್ಕೆ ಅದು ಏನೇನೂ ಸಾಲದು. ಮಾನವ ಪರಿಸರ ತೀವ್ರಗತಿಯಲ್ಲಿ ಹದಗೆಡುತ್ತಿರುವುದರ ಬಗ್ಗೆ ಜನರಲ್ಲಿ ಅರಿವು ಮೂಡತೊಡಗಿರುವುದು ಕಳೆದ ಮೂರು ನಾಲ್ಕು ದಶಕಗಳಲ್ಲಿ. ವಿಶ್ವಸಂಸ್ಥೆಯು ೧೯೭೨ರ ಜೂನ್ ೫ರಂದು ಸ್ಟಾಕ್‌ಹೋಮ್‌ನಲ್ಲಿ ವ್ಯವಸ್ಥೆಗೊಳಿಸಿದ ಜಾಗತಿಕ ಸಮ್ಮೇಳನದಲ್ಲಿ ಮೊತ್ತಮೊದಲ ಬಾರಿ ಈ ವಿಷಯವನ್ನು ಚರ್ಚಿಸಿ, ಕಾರ್ಬನ್ ಡೈಆಕ್ಸೈಡ್ ಉತ್ಸರ್ಜನೆಗೆ ತಡೆಯೊಡ್ಡುವ ಅಗತ್ಯದ ಬಗ್ಗೆ ವಿವಿಧ ರಾಷ್ಟ್ರಗಳ ಗಮನವನ್ನು ಸೆಳೆಯಲಾಯಿತು.

ಬೆಚ್ಚಗೆ ಮಾಡುವುದಾದ್ದರಿಂದ ಈ ಬಗೆಯ ಪ್ರಕ್ರಿಯೆಗೆ 'ಹಸಿರುಮನೆ ಪರಿಣಾಮ' ಎಂಬ ಹೆಸರು ಬಂದಿದೆ.

ಇತ್ತೀಚಿನವರೆಗೂ ಈ ಹಸಿರುಮನೆ ಪರಿಣಾಮ ಭೂಮಿಯ ಮೇಲಣ ಜೀವಿಸಂಕುಲಕ್ಕೆ ಒಂದು ವರವೇ ಆಗಿತ್ತು. ಏಕೆಂದರೆ, ಅದು ಭೂ ವಾತಾವರಣವನ್ನು ಬೆಚ್ಚಗಿಡುವ ಮೂಲಕ ಭೂಮಿಯ ಮೇಲೆ ಜೀವಿಗಳ ಉದ್ಭವಕ್ಕೆ ಮತ್ತು ಅವುಗಳ ಅಭಿವೃದ್ಧಿಗೆ ಪ್ರಶಸ್ತ ಪರಿಸರವನ್ನು ನೀಡಿತ್ತು. ಆದರೆ, ಈಚಿನ ದಿನಗಳಲ್ಲಿ ಜಾಗತಿಕ ತಪನವನ್ನು ಉತ್ತೇಜಿಸುತ್ತಿರುವ ಈ ಹಸಿರುಮನೆ ಪರಿಣಾಮ ಒಂದು 'ಶಾಪ'ವಾಗಿದೆ. ಏಕೆಂದರೆ ವಾಯುಮಂಡಲದಲ್ಲಿ ಕಾರ್ಬನ್ ಡೈಆಕ್ಸೈಡ್ ಪ್ರಮಾಣ ಹೆಚ್ಚಾಗಿರುವುದರ ಫಲವಾಗಿ ವಾಯುಮಂಡಲದ ಸರಾಸರಿ ತಾಪ ೦.೫ ಡಿಗ್ರಿ ಸೆಲ್ಸಿಯಸ್‌ನಷ್ಟು ಏರಿದೆ. ವಾಯುಮಂಡಲಕ್ಕೆ ನಾವು ಸೇರಿಸುತ್ತಿರುವ ಕಾರ್ಬನ್ ಡೈಆಕ್ಸೈಡ್‌ಅನ್ನು ಗಣನೀಯವಾಗಿ ಕಡಮೆಮಾಡಲು ನಾವು ತಕ್ಕ ಕ್ರಮಗಳನ್ನು ತೆಗೆದುಕೊಳ್ಳದೆ ಈಗ ಜರುಗುತ್ತಿರುವ ಪ್ರಕ್ರಿಯೆ ಹೀಗೇ ಮುಂದುವರಿದರೆ ಕ್ರಿ.ಶ. ೨೦೫೦ರ ವೇಳೆಗೆ ವಾಯುಮಂಡಲದ ಸರಾಸರಿ ಉಷ್ಣತೆ ೧.೫ ಡಿಗ್ರಿಗಳಷ್ಟು ಏರುವುದೆಂದು ವಿಜ್ಞಾನಿಗಳು ಅಂದಾಜು ಮಾಡಿದ್ದಾರೆ. ಅದರ ಪರಿಣಾಮವಾಗಿ ಧ್ರುವ ಪ್ರದೇಶಗಳಲ್ಲಿರುವ ಮಂಜುಗಡ್ಡೆ ರಾಶಿಯ ಬಹುಭಾಗ ಕರಗಿ ಆ ನೀರು ಸಾಗರ ಸಮುದ್ರಗಳನ್ನು ಸೇರುವುದರಿಂದ ಸಮುದ್ರಮಟ್ಟ ಎರಡರಿಂದ ಎರಡೂಕಾಲು ಅಡಿಗಳಷ್ಟು (೬೦ರಿಂದ ೭೦ ಸೆಂ.ಮೀ.ಗಳಷ್ಟು) ಏರುವುದೆಂದು ಅಂದಾಜು ಮಾಡಲಾಗಿದೆ. ಹಾಗೇನಾದರೂ ಆದರೆ, ತಗ್ಗು ಪ್ರದೇಶಗಳಲ್ಲಿ ಇರುವ ನೆದರ್‌ಲೆಂಡ್ಸ್, ಬಾಂಗ್ಲಾದೇಶ, ಇಂಡೋನೇಷ್ಯ ಮೊದಲಾದವುಗಳ ಬಹುಭಾಗ ನೀರಿನಲ್ಲಿ ಮುಳುಗಿಹೋಗುವುವು. ಇತರ ದೇಶಗಳಲ್ಲಿಯೂ ಕಡಲತೀರದಲ್ಲಿ ಇರುವ ಜನವಸತಿಗಳಿಗೆ ಕುತ್ತು ತಪ್ಪಿದ್ದಲ್ಲ. ಜಗತ್ತಿನ ಜನಸಂಖ್ಯೆಯ ಸುಮಾರು ಮೂರರಲ್ಲಿ ಒಂದು ಭಾಗ ಕಡಲತೀರದಲ್ಲಿ ವಾಸಿಸುತ್ತಿರುವುದರಿಂದ ಸ್ಥಾನಪಲ್ಲಟಗೊಳ್ಳುವ ಕೋಟ್ಯಂತರ ಜನರಿಗೆ ಪುನರ್ವಸತಿ ಕಲ್ಪಿಸಬೇಕಾಗುತ್ತದೆ. ಉದ್ಭವಿಸಲಿರುವ ಆ ಸಮಸ್ಯೆಯ ಅಗಾಧತೆ ಕಲ್ಪನಾತೀತ. ಹೀಗಿರುವುದರಿಂದ, ನಮ್ಮ ವಾಯುಮಂಡಲಕ್ಕೆ ಸೇರ್ಪಡೆಯಾಗುತ್ತಿರುವ ಕಾರ್ಬನ್ ಡೈಆಕ್ಸೈಡ್‌ಗೆ ತಡೆ ಹಾಕಬೇಕಾಗಿರುವುದು ಇಂದಿನ ಗಂಭೀರ ಸಮಸ್ಯೆ.



ವಾಯುಮಂಡಲಕ್ಕೆ ಕಾರ್ಬನ್ ಡೈಆಕ್ಸೈಡ್ ಸೇರುತ್ತಿರುವುದನ್ನು ತಡೆಯಲು ನಮಗಿರುವ ಏಕೈಕ ಮಾರ್ಗವೆಂದರೆ, ನಮ್ಮ ಶಕ್ತಿ ಅಗತ್ಯಗಳನ್ನು ಪೂರೈಸಲು ಫಾಸಿಲ್ ಇಂಧನಗಳ ಬದಲು ಪರ್ಯಾಯ ಶಕ್ತಿ ಆಕರಗಳ ಮೊರೆಹೊಗುವುದು. ಇಂದು ಎಲ್ಲೆಡೆಯೂ ಪರ್ಯಾಯ ಶಕ್ತಿ ಆಕರಗಳಾದ ಗಾಳಿ ಶಕ್ತಿ, ಸೌರಶಕ್ತಿ ಮುಂತಾದವುಗಳನ್ನು ಬಳಸಿಕೊಳ್ಳಬಹುದಾದ ವಿಧಾನಗಳನ್ನು ಅಭಿವೃದ್ಧಿಪಡಿಸುವ ಪ್ರಯತ್ನಗಳು ನಡೆಯುತ್ತಿರುವುದರ ಹಿನ್ನೆಲೆ ಇದು. ಆ ಪ್ರಯತ್ನಗಳು ಗಮನಾರ್ಹ ಯಶಸ್ಸು ಗಳಿಸಿವೆ, ನಿಜ. ಆದರೆ ಮಾನವಕುಲ ಎದುರಿಸುತ್ತಿರುವ ಸಮಸ್ಯೆಯ ಪರಿಹಾರಕ್ಕೆ ಅದು ಏನೇನೂ ಸಾಲದು. ಮಾನವ ಪರಿಸರ ತೀವ್ರಗತಿಯಲ್ಲಿ ಹದಗೆಡುತ್ತಿರುವುದರ ಬಗ್ಗೆ ಜನರಲ್ಲಿ ಅರಿವು ಮೂಡತೊಡಗಿರುವುದು ಕಳೆದ ಮೂರು ನಾಲ್ಕು ದಶಕಗಳಲ್ಲಿ. ವಿಶ್ವಸಂಸ್ಥೆಯು ೧೯೭೨ರ ಜೂನ್ ೫ರಂದು ಸ್ಟಾಕ್‌ಹೋಮ್‌ನಲ್ಲಿ ವ್ಯವಸ್ಥೆಗೊಳಿಸಿದ ಜಾಗತಿಕ ಸಮ್ಮೇಳನದಲ್ಲಿ ಮೊತ್ತಮೊದಲ ಬಾರಿ ಈ ವಿಷಯವನ್ನು ಚರ್ಚಿಸಿ, ಕಾರ್ಬನ್ ಡೈಆಕ್ಸೈಡ್ ಉತ್ಸರ್ಜನೆಗೆ ತಡೆಯೊಡ್ಡುವ ಅಗತ್ಯದ ಬಗ್ಗೆ ವಿವಿಧ ರಾಷ್ಟ್ರಗಳ ಗಮನವನ್ನು ಸೆಳೆಯಲಾಯಿತು. ಆದರೆ, ಇದುವರೆಗೆ ಜಾಗತಿಕ ಕಾರ್ಬನ್ ಡೈಆಕ್ಸೈಡ್ ಉತ್ಸರ್ಜನೆ ಕಿಂಚಿತ್ತೂ ಕಡಮೆಯಾಗಿಲ್ಲ. ಅಷ್ಟು ಮಾತ್ರವಲ್ಲ, ಸ್ಟಾಕ್‌ಹೋಮ್ ಸಮ್ಮೇಳನದ ತರುವಾಯದ ಅವಧಿಯಲ್ಲಿ ನಡೆದಿರುವ ಯಾವ ಜಾಗತಿಕ ಸಮ್ಮೇಳನದಲ್ಲಿಯೂ ಇತರ ಎಲ್ಲ ರಾಷ್ಟ್ರಗಳಿಗಿಂತ ಹೆಚ್ಚು ಕಾರ್ಬನ್ ಡೈಆಕ್ಸೈಡ್ ಉತ್ಸರ್ಜಿಸುತ್ತಿರುವ ಅಮೆರಿಕವೇ ಆಗಲಿ ಬೇರಾವ ಮುಂದುವರಿದ ರಾಷ್ಟ್ರವೇ ಆಗಲಿ ಕಾರ್ಬನ್ ಡೈಆಕ್ಸೈಡ್ ಉತ್ಸರ್ಜನೆಗೆ ಕಡಿವಾಣ ಹಾಕುವ ಬಗ್ಗೆ ಆಶ್ವಾಸನೆ ನೀಡಿಲ್ಲ.

ಈಚಿನ ವರ್ಷಗಳಲ್ಲಿ ಪ್ರಪಂಚದ ಎಲ್ಲ ಕಡೆಯೂ ಪರ್ಯಾಯ ಶಕ್ತಿ ಆಕರಗಳನ್ನು ಪಳಗಿಸಿ ಉಪಯೋಗಿಸಿಕೊಳ್ಳುವ ಪ್ರಯತ್ನಗಳು ನಡೆಯುತ್ತಿವೆ. ಆ ದಿಶೆಯಲ್ಲಿ ಗಮನಾರ್ಹ ಸಾಧನೆಯೂ ಕಂಡುಬರುತ್ತಿದೆ. ಆದಾಗ್ಯೂ ಅದೇನಿದ್ದರೂ ಜೊತೆಜೊತೆಗೇ ಹೆಚ್ಚುತ್ತಿರುವ ಶಕ್ತಿ ಬೇಡಿಕೆಯನ್ನು ಪೂರೈಸಲು ಸಾಕಾಗುತ್ತಿರಬಹುದೇ ಹೊರತು ಉತ್ಸರ್ಜನೆಯಾಗುತ್ತಿರುವ ಕಾರ್ಬನ್ ಡೈಆಕ್ಸೈಡ್ ಪ್ರಮಾಣವನ್ನು ಅದು ಎಳ್ಳಷ್ಟೂ ಕಡಮೆ ಮಾಡಿಲ್ಲ. ಉತ್ಸರ್ಜನೆ ಇನ್ನೂ ಹೆಚ್ಚಾಗುತ್ತಿರುವ ಸೂಚನೆಗಳು ಕಂಡುಬರುತ್ತಿವೆ. ರೈಲು ಸಂಚಾರ, ರಸ್ತೆ ಸಾರಿಗೆಗಳೂ ವಾಯುಯಾನವೂ ಒಂದೇ ಸಮನೆ ಅಧಿಕಗೊಳ್ಳುತ್ತಿವೆ; ಹೊಸ ಉಷ್ಣ ವಿದ್ಯುತ್ ಸ್ಥಾವರಗಳು ಸ್ಥಾಪನೆಗೊಳ್ಳುತ್ತಿವೆ. ಈಚಿನ ದಿನಗಳಲ್ಲಿ ಮೈಸೂರು ಬಳಿ ಚಾಮಲಾಪುರದಲ್ಲಿ ಅಂಥದೊಂದು ಸ್ಥಾವರವನ್ನು ಪ್ರಾರಂಭಿಸುವ ಮಾತು ಕೇಳಿಬರುತ್ತಿದೆ ಎಂಬುದನ್ನು ಈ ಸಂಬಂಧದಲ್ಲಿ ನೆನೆಯಬಹುದು.

ಬರಲಿರುವ ಎರಡು ಮೂರು ದಶಕಗಳಲ್ಲಿಯೇ ತಂತ್ರಜ್ಞಾನ ಕ್ಷೇತ್ರದಲ್ಲಿ ಅಸಾಮಾನ್ಯ ಪ್ರಗತಿ ಮೈದೋರಿ, ಪರಿಸರಸ್ನೇಹಿಯಾದ ಮತ್ತು ದೊಡ್ಡ ಪ್ರಮಾಣದ ಹೊಸದೊಂದು ಶಕ್ತಿ ಆಕರ ಕರಗತವಾಗಿ, ಅದು ವ್ಯಾಪಕವಾಗಿ ಬಳಕೆಗೆ ಬಂದರೆ ಮಾತ್ರ ಮಾನವಕುಲ ನೆಮ್ಮದಿಯಿಂದ ಬಾಳಬಹುದು. ಇಲ್ಲದೆ ಹೋದರೆ ಜಾಗತಿಕ ತಪನ ತಂದೊಡ್ಡಬಹುದಾದ ಭೀಕರ ಪರಿಣಾಮಗಳನ್ನು ನಮ್ಮ ಅನಂತರದ ತಲೆಮಾರಿನವರು ಎದುರಿಸಲೇಬೇಕು. ಅದರಿಂದಾಗಿ ಭವಿಷ್ಯ ಇಂದು ತುಂಬ ನಿರಾಶಾದಾಯಕವಾಗಿದೆ. ಬೆದರಿಕೆಯೊಡ್ಡುತ್ತಿರುವ ಅನಾಹುತದಿಂದ ಮನುಕುಲವನ್ನು ಪಾರು ಮಾಡಬಲ್ಲ ಅಂಥದೊಂದು ತಂತ್ರಜ್ಞಾನೀಯ ಕ್ರಾಂತಿ ಉಂಟಾಗುವ ಸಾಧ್ಯತೆ ಇದೆ ಎಂಬ ಒಂದು ಆಶಾಜನಕ ವಾರ್ತೆ ಈಚೆಗೆ ಚೀನಾ ದೇಶದಿಂದ ಬಂದಿದೆ.

ಇಂದು ಫಾಸಿಲ್ ಇಂಧನಗಳನ್ನು ಆಶ್ರಯಿಸದೆಯೇ ತಕ್ಕಮಟ್ಟಿಗೆ ಗಮನಾರ್ಹ ಪ್ರಮಾಣದಲ್ಲಿ ಶಕ್ತಿಯನ್ನೊದಗಿಸುತ್ತಿರುವ ಪರ್ಯಾಯ ಶಕ್ತಿ ಆಕರಗಳು ನಾಲ್ಕು ಎನ್ನಬಹುದು : ಸೌರಶಕ್ತಿ, ಗಾಳಿಶಕ್ತಿ, ಜಲವಿದ್ಯುತ್ ಮತ್ತು ಪರಮಾಣುಶಕ್ತಿ. ಇವುಗಳಲ್ಲಿ ಮೊದಲ ಎರಡು ನವೀಕರಿಸಬಹುದಾದವು ಮತ್ತು ಪರಿಸರಸ್ನೇಹಿಯಾದಂಥವು. ಮೂರನೆಯದಾದ ಜಲವಿದ್ಯುತ್ತು ನವೀಕರಣೀಯವೇನೋ ಹೌದು. ಆದರೆ ಅದಕ್ಕೆ ದೊಡ್ಡ ಜಲಾಶಯಗಳನ್ನು ನಿರ್ಮಿಸಬೇಕಾಗುವುದರಿಂದ ಅದನ್ನು ಪರಿಸರಸ್ನೇಹಿ ಎನ್ನುವಂತಿಲ್ಲ. ಏಕೆಂದರೆ ದೊಡ್ಡ ಜಲಾಶಯವೊಂದನ್ನು ನಿರ್ಮಿಸಬೇಕಾದರೆ ಸಾಕಷ್ಟು ಅರಣ್ಯನಾಶ ಅನಿವಾರ್ಯವಾಗುತ್ತದೆ. ನಾಲ್ಕನೆಯದಾದ ಪರಮಾಣುಶಕ್ತಿ ನವೀಕರಣೀಯವೂ ಅಲ್ಲ, ಪರಿಸರಸ್ನೇಹಿಯೂ ಅಲ್ಲ – ಪರಮಾಣು ರಿಯಾಕ್ಟರುಗಳು ಯುರೇನಿಯಮ್‌ನಂಥ ಖನಿಜ ವಸ್ತುಗಳನ್ನು ಕಬಳಿಸುತ್ತವೆ. ಭೂಮಿಯೊಡಲಿನಲ್ಲಿರುವ ಆ ಖನಿಜಗಳ ಪ್ರಮಾಣ ಸೀಮಿತ; ಅವು ಅಕ್ಷಯವೇನಲ್ಲ. ಎರಡನೆಯದಾಗಿ, ರಿಯಾಕ್ಟರ್‌ಗಳು ನೀಡುವ ಉಪೋತ್ಪನ್ನಗಳು ತೀವ್ರ ವಿಕಿರಣಪಟುಗಳು. ಆ ಮಾರಕ ತ್ಯಾಜ್ಯಗಳ ಸುರಕ್ಷಿತ ವಿಲೇವಾರಿ ಇನ್ನೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಆದುದರಿಂದ ಇಂದು ಪರಮಾಣುಶಕ್ತಿಯನ್ನು ಪರಿಸರಸ್ನೇಹಿ ಎಂದು ಪರಿಗಣಿಸುವಂತಿಲ್ಲ.

ಪರಮಾಣು ರಿಯಾಕ್ಟರ್‌ಗಳಲ್ಲಿ ಶಕ್ತಿ ಉತ್ಪತ್ತಿಯಾಗುವುದು ಬೀಜ ವಿದಳನ (nuclear-fission) ಎಂಬ ಒಂದು ಬಗೆಯ ಬೈಜಿಕ ಕ್ರಿಯೆಯಿಂದ. ಯುರೇನಿಯಮ್, ಪ್ಲುಟೋನಿಯಮ್‌ಗಳಂಥ ಅತಿಭಾರವಾದ ಪರಮಾಣುಬೀಜಗಳು ನ್ಯೂಟ್ರಾನ್‌ಗಳನ್ನು ಸಂಧಿಸಿದರೆ, ಪರಮಾಣು ಬೀಜಗಳು ಆ ನ್ಯೂಟ್ರಾನ್‌ಗಳನ್ನು ಹೀರಿಕೊಂಡು ಇಬ್ಭಾಗವಾಗಿ ಒಡೆಯುವುದೇ ಬೀಜವಿದಳನ. ಈ ಕ್ರಿಯೆಯಲ್ಲಿ ಅಪಾರವಾದ ಶಕ್ತಿ ಹೊರಬರುತ್ತದೆ. ಸಾಕಷ್ಟು ಗಾತ್ರ ಉಳ್ಳ ಯುರೇನಿಯಮ್ ಅಥವಾ ಪ್ಲುಟೋನಿಯಮ್ ಉಂಡೆಯಲ್ಲಿನ ಎಲ್ಲ ಪರಮಾಣುಬೀಜಗಳೂ ಹಠಾತ್ತನೆ ವಿದಳನಗೊಳ್ಳುವಂತೆ ಮಾಡುವ ಏರ್ಪಾಟೇ ಪರಮಾಣು ಬಾಂಬು. ಕೋಟ್ಯನುಕೋಟಿ ಪರಮಾಣುಬೀಜಗಳು ಹಾಗೆ ಹೆಚ್ಚು ಕಡಮೆ ಒಂದೇ ಕ್ಷಣದಲ್ಲಿ ವಿದಳನವಾದಾಗ ಅದ್ಭುತವಾದ ಸ್ಫೋಟನೆ ಆಗಿ ಸುತ್ತುಮುತ್ತಲ ಉಷ್ಣತೆ ಕೋಟ್ಯಂತರ ಡಿಗ್ರಿಗೆ ಏರುತ್ತದೆ. ಪರಮಾಣು ರಿಯಾಕ್ಟರ್‌ನಲ್ಲಾದರೋ ಪರಮಾಣುಬೀಜ

ಗಳೆಲ್ಲವೂ ಒಂದೇ ಕ್ಷಣದಲ್ಲಿ ವಿದಳನಗೊಳ್ಳದಂತೆ ನೋಡಿಕೊಳ್ಳುವ ಏರ್ಪಾಟಿರುತ್ತದೆ. ನಿಯಂತ್ರಣಕ್ಕೊಳಪಟ್ಟು ಕ್ರಮೇಣ ಜರುಗುವ ವಿದಳನ ಕ್ರಿಯೆಗಳು ಒದಗಿಸುವ ಶಕ್ತಿಯಿಂದ ನೀರನ್ನು ಕುದಿಸುತ್ತಾರೆ. ಅದರಿಂದ ದೊರೆಯುವ ಉಗಿಯನ್ನು ಟರ್ಬೈನ್‌ಗಳ ಮೇಲೆ ಹಾಯಿಸಿ ವಿದ್ಯುತ್ತನ್ನು ಉತ್ಪಾದಿಸುತ್ತಾರೆ.

ಬೀಜ ಸಮ್ಮಿಳನ (nuclear fusion) ಎಂಬುದು ಇನ್ನೊಂದು ಬಗೆಯ ಬೈಜಿಕ ಕ್ರಿಯೆ. ಧಾತುಗಳಲ್ಲೆಲ್ಲ ಅತ್ಯಂತ ಕಡಮೆ ಪರಮಾಣು ತೂಕವಿರುವ ಧಾತು ಹೈಡ್ರೋಜನ್ ತಾನೆ. ಅದರ ಪರಮಾಣು ತೂಕ ೧ ಎಂದು ಹೇಳುವುದುಂಟು. ವಾಸ್ತವವಾಗಿ, ಅದರ ಎರಡರಷ್ಟು ಪರಮಾಣು ತೂಕ ಉಳ್ಳ ಹೈಡ್ರೋಜನ್ನೂ ಇದೆ. ಅದನ್ನು ಭಾರ ಹೈಡ್ರೋಜನ್ ಎಂದೂ ಡ್ಯೂಟೀರಿಯಮ್ ಎಂದೂ ಕರೆಯುತ್ತಾರೆ. ನೈಸರ್ಗಿಕ ಹೈಡ್ರೋಜನ್ನಿನಲ್ಲಿ ಡ್ಯೂಟೀರಿಯಮ್ ಸೇಕಡ ೦.೦೨ರಷ್ಟಿದೆ. ಹೈಡ್ರೋಜನ್, ಡ್ಯೂಟೀರಿಯಮ್‌ಗಳಂಥ ಪರಮಾಣುಬೀಜಗಳು ಒಂದರೊಡನೊಂದು ಸೇರಿಕೊಂಡು ಪರಮಾಣು ತೂಕ ೪ ಇರುವ ಹೀಲಿಯಮ್‌ನಂಥ ಪರಮಾಣುಬೀಜಗಳನ್ನು ಉತ್ಪತ್ತಿಮಾಡುವ ಬೈಜಿಕಕ್ರಿಯೆಯೇ ಸಮ್ಮಿಳನ ಕ್ರಿಯೆ. ಪರಮಾಣುಬೀಜಗಳಿಗೆ ವಿದ್ಯುದಾವೇಶವಿರುವುದರಿಂದ ಅವು ಒಂದನ್ನೊಂದು ಪ್ರಬಲವಾಗಿ ವಿಕರ್ಷಿಸುತ್ತವೆ. ಆ ವಿಕರ್ಷಣೆಯನ್ನು ಮೀರಿ ಅವು ಒಂದರೊಡನೊಂದು ಸೇರಿಕೊಳ್ಳಲು, ಅವುಗಳ ವೇಗ ಅತ್ಯಧಿಕವಾಗಿರಬೇಕು. ಹತ್ತಾರು ಲಕ್ಷ ಡಿಗ್ರಿ ಸೆಲ್ಸಿಯಸ್ ತಾಪದಲ್ಲಿ ಮಾತ್ರ ಪರಮಾಣುಬೀಜಗಳಿಗೆ ಅಂಥ ಅತ್ಯಧಿಕ ವೇಗವಿರುವುದು ಸಾಧ್ಯ. ಬೀಜ ಸಮ್ಮಿಳನ ಕ್ರಿಯೆ ಅಂಥ ಅತ್ಯಧಿಕ ತಾಪದಲ್ಲಿ ಮಾತ್ರ ಸಾಧ್ಯವಾದ್ದರಿಂದ ಈ ಬಗೆಯ ಬೈಜಿಕ ಕ್ರಿಯೆಗಳನ್ನು ಉಷ್ಣಬೈಜಿಕ ಕ್ರಿಯೆಗಳು (thermonuclear reactions) ಎಂದೂ ಕರೆಯುತ್ತಾರೆ. ಸೂರ್ಯನಲ್ಲಿ ಮತ್ತು ಇತರ ನಕ್ಷತ್ರಗಳಲ್ಲಿ ಉಷ್ಣ ಬೈಜಿಕ ಕ್ರಿಯೆಗಳು ನಡೆಯುತ್ತಿರುವುದರಿಂದಲೇ ಆ ಕಾಯಗಳು ಸತತವಾಗಿ ಅಷ್ಟು ಶಕ್ತಿಯನ್ನು ಹೊರಸೂಸುತ್ತಿರುವುದು. ಭೂಮಿಯ ಮೇಲೆ ಕೃತಕವಾಗಿ ಉಷ್ಣಬೈಜಿಕ ಕ್ರಿಯೆಗಳನ್ನು ಆಗುಮಾಡಿರುವುದು ಹೈಡ್ರೋಜನ್ ಬಾಂಬ್‌ನಲ್ಲಿ ಮಾತ್ರ. ಅಧಿಕ ಒತ್ತಡದಲ್ಲಿರುವ ಹೈಡ್ರೋಜನ್‌ನಲ್ಲಿ ವಿದಳನ ಬಾಂಬೊಂದನ್ನು ಸ್ಫೋಟಿಸುವ ಏರ್ಪಾಟೇ ಹೈಡ್ರೋಜನ್ ಬಾಂಬ್. ವಿದಳನ ಬಾಂಬ್ ಸ್ಫೋಟಿಸಿ ಉಂಟುಮಾಡುವ ಹಲವು ದಶಲಕ್ಷ ಡಿಗ್ರಿಗಳ ಉಷ್ಣತೆಯಲ್ಲಿ ಹೈಡ್ರೋಜನ್ ಸಮ್ಮಿಳನ ಕ್ರಿಯೆಯಲ್ಲಿ ಪಾಲ್ಗೊಂಡು ಇನ್ನೂ ನೂರಾರುಪಟ್ಟು ಶಕ್ತಿಯನ್ನು ಬಿಡುಗಡೆ ಮಾಡುತ್ತದೆ.

ಪರಮಾಣು ರಿಯಾಕ್ಟರಿನಲ್ಲಿ ವಿದಳನ ಕ್ರಿಯೆಯನ್ನು ನಿಯಂತ್ರಿಸಿ ಶಕ್ತಿಯನ್ನು ಉಪಯುಕ್ತ ರೂಪದಲ್ಲಿ ಪಡೆಯುತ್ತಿರುವಂತೆ ಉಷ್ಣ ಬೈಜಿಕ ಕ್ರಿಯೆಯನ್ನೂ ಪಳಗಿಸಬಹುದೆ? ಅದಕ್ಕೆ ಹಲವು ದಶಲಕ್ಷ ಡಿಗ್ರಿಗಳ ಉಷ್ಣತೆಯನ್ನು ಒಂದೆಡೆ ನಿರ್ಮಿಸಿ ಅದರ ಮೂಲಕ ಹೈಡ್ರೋಜನ್‌ಅನ್ನು ಹಾಯಿಸಬೇಕಾಗುತ್ತದೆ. ಅಷ್ಟು ಅಧಿಕ ಉಷ್ಣತೆಯಲ್ಲಿ ಎಲ್ಲ ವಸ್ತುಗಳೂ ಕರಗಿ, ಆವಿಯಾಗಿ, ಅಣುಗಳೆಲ್ಲ ಒಡೆದು ಪರಮಾಣುಗಳಾಗಿ, ಆ ಪರಮಾಣುಗಳು ತಮ್ಮ ಇಲೆಕ್ಟ್ರಾನುಗಳನ್ನು ಕಳೆದುಕೊಂಡು ಅಯಾನುಗಳಾಗಿರುತ್ತವೆ. ಅಯಾನುಗಳು ಮತ್ತು ಬಿಡಿ ಇಲೆಕ್ಟ್ರಾನುಗಳ ಮಿಶ್ರಣವನ್ನು ಪ್ಲಾಸ್ಮ ಎಂದು ಕರೆಯುತ್ತಾರೆ. ಅಷ್ಟು ಅಧಿಕ ಉಷ್ಣತೆಯಲ್ಲಿರುವ ಪ್ಲಾಸ್ಮವನ್ನು ಯಾವ ಪಾತ್ರೆಯಲ್ಲಿ ತಾನೇ ಇರಿಸಲು ಸಾಧ್ಯ? ಅದನ್ನು ಒಂದೆಡೆ ಹಿಡಿದಿಡಲು ಪ್ರಬಲ ಕಾಂತಕ್ಷೇತ್ರವನ್ನೇ 'ಪಾತ್ರೆ'ಯಾಗಿ ಬಳಸಲು ವಿಜ್ಞಾನಿಗಳು ನಿರ್ಧರಿಸಿದರು.

ಸುಮಾರು ೩೦ ವರ್ಷಗಳ ಹಿಂದೆ ರಷ್ಯನರು ಈ ವಿಧಾನವನ್ನು ಅನುಸರಿಸಿ ಪ್ಲಾಸ್ಮವನ್ನು ನಿರ್ಮಿಸಿ ೦.೦೩ ಸೆಕೆಂಡುಗಳ ಕಾಲ ಅದನ್ನು ಒಂದೆಡೆ ಹಿಡಿದಿಡಬಲ್ಲ ತೊಕಮಾಕ್ ಎಂಬ ವ್ಯವಸ್ಥೆಯನ್ನು ನಿರ್ಮಿಸಿದರು. ಅದನ್ನು ಸುಧಾರಿಸಿ ಇನ್ನೂ ಹೆಚ್ಚುಕಾಲ ಪ್ಲಾಸ್ಮವನ್ನು ಒಂದೆಡೆ ಹಿಡಿದಿಡಬಲ್ಲ ತೊಕಮಾಕ್ ನಿರ್ಮಿಸಲು ಭಾರತವೂ ಸೇರಿದಂತೆ ಹಲವಾರು ದೇಶಗಳು ಪ್ರಯತ್ನಿಸುತ್ತಿವೆ. ಚೀನಾದೇಶದ ಆನ್‌ಹ್ವೆ ಪ್ರಾಂತದ ಮುಖ್ಯಸ್ಥಳ ಹೊಫೈನಲ್ಲಿರುವ ಇನ್‌ಸ್ಟಿಟ್ಯೂಟ್ ಆಫ್ ಪ್ಲಾಸ್ಮ ಫಿಸಿಕ್ಸ್ ಸಂಸ್ಥೆಯ ವಿಜ್ಞಾನಿಗಳು ಕಳೆದ ಜನವರಿಯಲ್ಲಿ ನಿರ್ಮಿಸಿದ ತೊಕಮಾಕ್‌ನಲ್ಲಿ ಪ್ಲಾಸ್ಮವನ್ನು ೧೦೦೦ ಸೆಕೆಂಡುಗಳ ಕಾಲ ಹಿಡಿದಿಡಲು ಸಾಧ್ಯವಾಗಿದೆ. ಸಂಸ್ಥೆಯ ಉಪನಿರ್ದೇಶಕರಾದ ಡಾ|| ವು ಅವರು ಮೇ ತಿಂಗಳ ಮಧ್ಯದಲ್ಲಿ ಈ ವಿಷಯವನ್ನು ಸಮೂಹ ಮಾಧ್ಯಮಗಳಿಗೆ ತಿಳಿಸಿದರೆಂಬುದೇ ಚೀನಾದಿಂದ ಬಂದಿರುವ ಆಶಾಜನಕ ವಾರ್ತೆ. ತೊಕಮಾಕ್ ಸಾಮರ್ಥ್ಯವನ್ನು ಮತ್ತೆ ನಾಲ್ಕುಪಟ್ಟು ಹೆಚ್ಚಿಸಿದರೆ ವಾಣಿಜ್ಯ ಮಟ್ಟದಲ್ಲಿ ಶಕ್ತಿ ಉತ್ಪಾದನೆ ಸಾಧ್ಯ ಎಂಬುದು ಡಾ|| ವು ಅವರ ಅಭಿಪ್ರಾಯ. ಹಾಗಾದಾಗ ಸಾಗರ ಸಮುದ್ರಗಳ ನೀರೇ ಶಕ್ತಿ ಆಕರವಾಗುವುದು. ಡಾ|| ವು ಅವರ ಪ್ರಕಾರ ಒಂದು ಲೀಟರ್ ನೀರಿನಿಂದ ೩೦ ಮಿಲಿಗ್ರಾಮ್ ಡ್ಯೂಟೀರಿಯಮ್ ಸಿಕ್ಕುತ್ತದೆ. ಅದು ೩೦೦ ಲೀಟರ್ ತೈಲಕ್ಕೆ ಸಮಾನ. ಮುಂದಿನ ಎರಡು ಮೂರು ದಶಕಗಳಲ್ಲಿ ಈ ಕನಸು ನನಸಾದರೆ ಮಾನವಕುಲ ಈ ಭೂಗ್ರಹದ ಮೇಲೆ ನೆಮ್ಮದಿಯಿಂದ ಬಾಳಬಹುದು. ಇಲ್ಲದೆ ಹೋದರೆ ಮನುಷ್ಯ ಜೀವಿಯೂ ಡಿನೊಸಾರ್‌ಗಳಂತೆ ನಿರ್ವಂಶವಾಗುವ ಸಾಧ್ಯತೆ ಇದೆ.

ಪ್ರೊ|| ಜಿ. ಆರ್. ಲಕ್ಷ್ಮಣ ರಾವ್
'ಮೈತ್ರಿ', ೧೨ನೇ ಮೇನ್, ಸರಸ್ವತೀಪುರ, ಮೈಸೂರು - ೯

## ಸಂರಕ್ಷಕ



ಯಾರು ಏನೆಂದು
ಹೇಳಲು ಸಾಧ್ಯವಿಲ್ಲ
ಎಲ್ಲ ಹಂತಕರೂ
ಮುಖಕ್ಕೆ ಮುಖವಾಡ
ಧರಿಸಿದ್ದಾರೆ
ಅದರ ಮೇಲೆ ದೇವರುಗಳ
ಭವ್ಯ ಬಣ್ಣದ ಚಿತ್ರಗಳು

ಧರ್ಮವನ್ನು ನಂಬದವರು
ದೇಶದ ಆರ್ಥಿಕ ವ್ಯವಸ್ಥೆಯ ಬಗ್ಗೆ
ಚಿಂತನೆ ನಡೆಸಿದ್ದಾರೆ
ರೂಪಾಯಿ ಅಪಮೌಲ್ಯ
ಶೇರುಪೇಟೆ ಅನಿಶ್ಚಿತತೆ
ಟ್ಯಾಕ್ಸಿ ಡ್ರೈವರುಗಳ ಮುಷ್ಕರ
ಮತ್ತೆ,
ನಮ್ಮ ಉದ್ಧಾರಕ
ಕಂಪ್ಯೂಟರ್ ಚಿಪ್ಪಿನಲ್ಲಿ
ಅವತರಿಸಬಹುದೇ !

ಈರುಳ್ಳಿ ದರ ಏರಿದೆ ಗಗನಕ್ಕೆ
ಟೇಬಲ್ಲಿನ ಸುತ್ತ ಕುಳಿತ ಜನ
ಯುದ್ಧಕ್ಕೆ ಇದು ಸರಿಯಾದ ಸಮಯ
ಎಂದು ತೀರ್ಮಾನಿಸುತ್ತಾರೆ.

ಇಮ್ತಿಯಾಜ್ ಧಾರ್ಕೆರ್ (ಪಾಕಿಸ್ತಾನಿ ಕವಿ)
ಉರ್ದುವಿನಿಂದ ಕನ್ನಡಕ್ಕೆ : ಎನ್. ವೆಂಕಟಕೃಷ್ಣ
ನಂ. ೧೮೭೭, ಕಠಾರಿಪಾಳ್ಯ, ಕೋಲಾರ - ೫೬೩ ೧೦೧

## ಪುಟ್ಟನ ಹೆಜ್ಜೆ ಕಾಣೋದಿಲ್ಲಾ!

*ಯಶವಂತ ಚಿತ್ತಾಲ*

**ಪುಟ : ೧೩೦** **ಬೆಲೆ : ರೂ. ೭೦**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪

ಚಿತ್ತಾಲರ ಒಂಬತ್ತನೆಯ ಕಥಾಸಂಕಲನ. ಚಿತ್ತಾಲರ ಕಥೆಗಳು ಎಂದರೆ ಸಾಕೆನಿಸುತ್ತೆ! ಚಿತ್ತಾಲರ ತವರೂರಾದ ಉತ್ತರ ಕನ್ನಡದ ಹನೇಹಳ್ಳಿಯ ಸೊಗಡನ್ನು ತುಂಬಿಕೊಂಡ ಏಳು ಕಥೆಗಳು ಇಲ್ಲಿವೆ. 'ಯಾರ ಕಥೆ ಯಾರು ಹೇಳಿದ್ದು' ಮೇಲ್ನೋಟಕ್ಕೆ ಸರಳವಾಗಿ ಕಂಡರೂ ಓದಿಕೊಂಡು ಹೋದಂತೆ ಸಂಕೀರ್ಣವಾಗುತ್ತೆ. 'ಕಾಮಾಕ್ಷಿ ಮಾಡಲೆಳಸಿದ ಅತಿ ದಿಟ್ಟ ಕೆಲಸ' ಮತ್ತು 'ತುಸು ತಡೆದು ಪ್ರಯತ್ನಿಸಿ' ಕತೆಗಳು ಪ್ರತಿಯೊಬ್ಬ ಯುವಕ ಯುವತಿಯೂ, ತಂದೆ ತಾಯಂದಿರೂ ಓದಿ ಮೈಗೂಡಿಸಿಕೊಳ್ಳಬೇಕಾದಂಥವು. ಕಾಮಾಕ್ಷಿಯ ಹಾಗೂ ಸುನೀಲನ ದಿಟ್ಟ ನಿರ್ಧಾರಗಳು ಹೆಮ್ಮೆಯಿಂದ ಎದೆ ಉಬ್ಬುವಂತೆ ಮಾಡಿದವು. ನಮ್ಮ ದೇಶದ ಎಲ್ಲ ಹೆಣ್ಣುಮಕ್ಕಳ ಎದೆಯಲ್ಲೂ ಕಾಮಾಕ್ಷಿಯ ಧೈರ್ಯ, ದೃಢ ನಿರ್ಧಾರ ಮೂಡಲಿ, ಎಲ್ಲ ಯುವಕರ ಪ್ರೀತಿಯೂ ಸುನೀಲನ ಪ್ರೀತಿಯಂತೆ ದೃಢವಾದದ್ದೂ, ಪರಿಶುದ್ಧವಾದದ್ದೂ ಆಗಿರಲಿ ಮತ್ತು ಮಕ್ಕಳ ಧೈರ್ಯದ ನಿರ್ಧಾರವನ್ನು ಬೆಂಬಲಿಸುವ ಶಕ್ತಿ ಎಲ್ಲ ತಂದೆ ತಾಯಂದಿರದಾಗಲಿ ಎಂಬ ಚಿತ್ತಾಲರ ಆಶಯ, ಆಶೀರ್ವಾದ ಈ ಎರಡೂ ಕಥೆಗಳಲ್ಲಿ ಅಡಕವಾಗಿವೆ.

## ಅಂಬೇಡ್ಕರ್ : ಒಂದು ಮರುವ್ಯಾಖ್ಯಾನ

*ಸಂ. : ಡಾ|| ಕೆ. ವೆಂಕಟೇಶ್*

**ಪುಟ : xvi + ೧೨೪** **ಬೆಲೆ : ರೂ. ೧೦೦**

**ಸಂಸ್ಕೃತಿ ಪ್ರಕಾಶನ**, ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ, ನಂ. ಎನ್-೨, ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್, ಡಿಡಿಪಿಐ ಆಫೀಸ್ ಎದುರು, ಬಳ್ಳಾರಿ - ೫೮೩ ೧೦೨

ಡಾ|| ಅಂಬೇಡ್ಕರ್ ಅವರ ವಿಚಾರಧಾರೆಯನ್ನು ವಿಶ್ಲೇಷಿಸಿ, ವಿವರಿಸುವ ಹದಿಮೂರು ಮೌಲಿಕ ಲೇಖನಗಳ ಸಂಗ್ರಹ. ಇಲ್ಲಿ ಅಂಬೇಡ್ಕರ್‌ರ ಚಿಂತನೆಗಳನ್ನು ವರ್ತಮಾನದ ದೃಷ್ಟಿಯಿಂದ ವಿಶ್ಲೇಷಿಸುವ ಪ್ರಯತ್ನವನ್ನು ವಿವಿಧ ಲೇಖಕರು ಮಾಡಿದ್ದಾರೆ.
ಕರ್ನಾಟಕದ ಪ್ರಸ್ತುತ ಸಂದರ್ಭದಲ್ಲಿ ಅಂಬೇಡ್ಕರ್ ಚಿಂತನೆಯನ್ನು ಮತ್ತೆ ಹೊಸದಾಗಿ ಕಂಡುಕೊಳ್ಳುವ ಅಗತ್ಯವಿದೆ. ಈ ಕೃತಿ ಹೊಸದೊಂದು ಆಲೋಚನೆಗೆ, ಆ ಮೂಲಕ ಚರ್ಚೆಗೆ, ಸಂವಾದಕ್ಕೆ ದಾರಿ ಮಾಡಿಕೊಡಲಿ ಎಂಬುದು ಸಂಪಾದಕರ ಆಶಯ.

## ವೈಜ್ಞಾನಿಕ ಮನೋಧರ್ಮ

*ಸಂ : ಡಾ|| ಜಿ. ರಾಮಕೃಷ್ಣ*

*ಪ್ರ. ಸಂಪಾದಕ : ಚಿ. ಶ್ರೀನಿವಾಸರಾಜು*

**ಪುಟ : xii + ೩೪ + ೧೩೪** **ಬೆಲೆ : ರೂ. ೭೫**

**ಪ್ರಸಾರಾಂಗ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಪಂಡಿತ ತಾರಾನಾಥ, ಶಂ. ಬಾ. ಜೋಶಿ, ಡಾ|| ಎಚ್. ನರಸಿಂಹಯ್ಯ, ಎಂ. ಎ. ಸೇತುರಾವ್, ಜೆ. ಆರ್. ಲಕ್ಷ್ಮಣ ರಾವ್, ಕೊಡವಟಿಗಂಟಿ ಕುಟುಂಬರಾವ್, ಡಾ|| ಮಿತ್ರ, ಲೋಕಹಿತವಾದಿ, ಗೋಪಾಳ ಗಣೇಶ ಆಗರಕರ, ನರೇಂದ್ರ ದಾಭೋಲಕರ, ಬಂಕಿಮ ಚಂದ್ರ ಚಟ್ಟೋಪಾಧ್ಯಾಯ, ಹರಪ್ರಸಾದ ಶಾಸ್ತ್ರಿ, ಪ್ರಫುಲ್ಲ ಚಂದ್ರ ರಾಯ್, ಮೇಘನಾದ ಸಾಹಾ ಹಾಗೂ ಎಸ್. ಎನ್. ಬೋಸ್ – ಹೀಗೆ ಭಾರತದ ಮಹತ್ವದ ಚಿಂತಕರ ಒಟ್ಟು ೧೭ ವೈಚಾರಿಕ ಲೇಖನಗಳು ಇಲ್ಲಿವೆ. ವಿಚಾರವಾದ ಮತ್ತು ವೈಜ್ಞಾನಿಕತೆಗಳು ಒಂದಕ್ಕೊಂದು ಬೇರ್ಪಡಿಸಲಾಗದ ಪರಿಕಲ್ಪನೆಗಳು ಎಂಬುದನ್ನು, ವಿಜ್ಞಾನವನ್ನು ಕೇವಲ ಓದು ಮತ್ತು ಸಂಗತಿಗಳ ಮೊತ್ತವೆಂದಾಗಲಿ, ಪ್ರಯೋಗಶಾಲೆಯ ಫಲಿತಗಳ ರಾಶಿಯೆಂದಾಗಲಿ ನೋಡದೆ ಅದನ್ನು ನಮ್ಮ ಬುದ್ಧಿಯ ಮತ್ತು ಕ್ರಿಯೆಯ ಸಮನ್ವಯಗಳೆಂದು ಪರಿಭಾವಿಸಬೇಕಾದ ಅಗತ್ಯವನ್ನು ಈ ಲೇಖನಗಳು ಮನವರಿಕೆ ಮಾಡಿಕೊಡುತ್ತವೆ. ಪುಸ್ತಕದ ಮೊದಲಲ್ಲಿ ಜಿ.ಆರ್. ಅವರ 'ವೈಜ್ಞಾನಿಕ ಹಾದಿಯಲ್ಲಿ ಹುಡುಕಾಟ' ಎಂಬ ಆರಂಭಿಕ ಲೇಖನವಿದೆ. ಕಡೆಯಲ್ಲಿ ಅನುಬಂಧದ ರೂಪದಲ್ಲಿ 'ತಮಿಳು ಸಾಹಿತ್ಯದಲ್ಲಿ ವೈಜ್ಞಾನಿಕ ಮನೋಭಾವ' ಎಂಬ ಪ್ರೊ|| ಪಿ. ಕೃಷ್ಣಸ್ವಾಮಿಯವರ ಟಿಪ್ಪಣಿ ಇದೆ.

## ಬಸಿರು

*ಡಾ|| ಎಚ್. ಗಿರಿಜಮ್ಮ*

**ಪುಟ : ೧೪೪** **ಬೆಲೆ : ರೂ. ೭೫**

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ೫೧೫೯, ಬೆಂಗಳೂರು - ೫೬೦ ೦೦೧

ಗರ್ಭ ಧರಿಸಿದಂದಿನಿಂದ ಒಂಬತ್ತು ತಿಂಗಳು ತುಂಬಿ ಹೆರಿಗೆಯಾಗಿ ಮುಂದೆ ಶಿಶು ಆರೈಕೆಯವರೆಗೆ ಸಂಪೂರ್ಣ ಮಾಹಿತಿ ನೀಡುವ ಕೃತಿ. ಗರ್ಭಿಣಿಯರಿಗೆ, ಪ್ರಸೂತಿ ಶಾಸ್ತ್ರದ ಬಗ್ಗೆ ತಿಳಿವಳಿಕೆ ಪಡೆಯಲು ಇಚ್ಛಿಸುವ ಶಿಕ್ಷಣಾರ್ಥಿಗಳಿಗೆ, ಉದ್ಯೋಗಸ್ಥ ಹಾಗೂ ಗ್ರಾಮಾಂತರ ಪ್ರದೇಶದ ಮಹಿಳೆಯರಿಗೆ ಉಪಯುಕ್ತ ಕೃತಿ. ಗರ್ಭಿಣಿಗೆ ತಂದೆ ತಾಯಿ, ಅತ್ತೆ ಮಾವ ಹಾಗೂ ಗಂಡನ ಸಹಕಾರದ ಅಗತ್ಯದಿಂದ ಆರಂಭಿಸಿ, ಯಾವಾಗ ವೈದ್ಯರನ್ನು ಕಾಣಬೇಕು, ಚಿಕಿತ್ಸಾ ಕ್ರಮ, ತುರ್ತು ಪರಿಸ್ಥಿತಿಗಳಲ್ಲಿ ಏನು ಮಾಡಬೇಕು, ಆರೈಕೆ, ತಯಾರಿ, ನೈರ್ಮಲ್ಯ ಹೀಗೆ ಪ್ರತಿಯೊಂದು ಸೂಕ್ಷ್ಮಾತಿಸೂಕ್ಷ್ಮ ವಿಷಯವನ್ನೂ ವಿಸ್ತಾರವಾಗಿ ಸರಳ ಭಾಷೆಯಲ್ಲಿ ತಿಳಿಸಲಾಗಿದೆ. ಕೇವಲ ಚಿತ್ರಗಳ ವೀಕ್ಷಣೆಯಿಂದಲೇ ವಿಷಯದ ಬಗ್ಗೆ ಅರಿವು ಪಡೆದುಕೊಳ್ಳುವಂತೆ ಅರ್ಥಪೂರ್ಣವಾದ ಚಿತ್ರಗಳು ಇವೆ. ಖ್ಯಾತ ಪ್ರಸೂತಿ ವೈದ್ಯರು ಹಾಗೂ ವೈದ್ಯಕೀಯ ಲೇಖಕರಾದ ಡಾ|| ಗಿರಿಜಮ್ಮನವರ ಈ ಕೃತಿ ಪ್ರಸೂತಿ ಶಾಸ್ತ್ರಕ್ಕೆ ನೀಡಿದ ಒಂದು ಅಪೂರ್ವ ಕೊಡುಗೆ.

## ಹರಿಯುತ್ತಿರಲಿ ನದಿ

*ಎಸ್. ಅರುಂಧತಿ*

**ಪುಟ : ೫೪+೪** **ಬೆಲೆ : ರೂ. ೩೫**

**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪

ಹರಿಯುತ್ತಿರಲಿ ನದಿ ಕವಿತೆಯ ಸಾಲುಗಳು :

'ನಾನು ನಿಶ್ಚಲ ಧವಳಗಿರಿ
ಕಣ್ಣುಮುಚ್ಚಿಕೊಂಡಿದ್ದೇನೆ
ಹರಿಯುತ್ತ ಹೋಗಲಿ ನದಿ
ನಾ ಮತ್ತೆ ಅವನನ್ನು ನೋಡಲಾರೆ!'

ಮಡದಿ ಮತ್ತು ಮಗುವನ್ನು ತೊರೆದು ಹೋದ ಸಿದ್ಧಾರ್ಥ 'ಬುದ್ಧ'ನಾಗಿ ತಿರುಗಿ ಬಂದಾಗ ಯಶೋಧರೆಯ ಪ್ರತಿಕ್ರಿಯೆ ಇದು. ಇಷ್ಟು ವಿಸ್ತಾರವೂ ಆಳವೂ ಆದ ಅರ್ಥವನ್ನು ಉಳ್ಳ ಸಾಲುಗಳು ಇಲ್ಲಿಯ ಇನ್ನೂ ಅನೇಕ ಪದ್ಯಗಳಲ್ಲಿವೆ.

## ಒಂದನೆ ತರಗತಿಯಿಂದಲೆ ಉರುಳು

*ಡಾ|| ಬಿ. ಎಂ. ಪುಟ್ಟಯ್ಯ*

**ಪುಟ : x + ೭೦** **ಬೆಲೆ : ರೂ. ೩೦**

**ದುಡಿಮೆ ಪ್ರಕಾಶನ**, ನಂ. ೨೧, ೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಶ್ರೀರಾಮಪುರಂ, ಬೆಂಗಳೂರು - ೨೧

ಮಕ್ಕಳಿಗೆ ಒಂದನೆ ತರಗತಿಯಿಂದಲೆ ಇಂಗ್ಲಿಷ್ ಕಲಿಸಬೇಕೆಂಬ ಸರ್ಕಾರದ ನಿರ್ಧಾರವನ್ನು ವೈಚಾರಿಕವಾಗಿ, ಎಲ್ಲ ಮಗ್ಗುಲುಗಳಿಂದಲೂ ಕೂಲಂಕಷವಾಗಿ ಈ ಪುಸ್ತಕ ಚರ್ಚಿಸುತ್ತದೆ. ಪುಟ್ಟಯ್ಯನವರು ತಾವು ಓದುವಾಗ ಅನುಭವಿಸಿದ ವಾಸ್ತವ ಸಂಗತಿಗಳಿಂದ ಮೊದಲ್ಗೊಂಡು ಈಗಿನ ಭಿನ್ನ ಸ್ತರಗಳ ಮಕ್ಕಳು, ಅವರ ಪೋಷಕರು, ಭಿನ್ನ ಪರಿಸ್ಥಿತಿಯ ಶಿಕ್ಷಕರು, ಇಂಗ್ಲಿಷ್ ಪಠ್ಯಕ್ರಮದ ವಸ್ತು ವಿಷಯ, ಬೋಧನಾ ವಿಧಾನ, ಮೌಲ್ಯಮಾಪನ, ಶಾಲೆಯ ಸ್ಥಿತಿಗತಿಗಳು ಮತ್ತು ಫಲಿತಾಂಶ – ಇವೆಲ್ಲವನ್ನೂ ವಿಸ್ತಾರವಾಗಿ ಪರಿಶೀಲಿಸಿದ್ದಾರೆ. ವಿಷಯದ ಶೈಕ್ಷಣಿಕ ಮುಖವನ್ನಲ್ಲದೆ ಸಾಮಾಜಿಕ ಮಗ್ಗುಲನ್ನೂ ತೆರೆದಿರಿಸಿದ್ದಾರೆ. ಕರ್ನಾಟಕದಲ್ಲಿ ಈಗಿರುವ ವಿದೇಶೀ ನೇರಹೂಡಿಕೆ, ಬಹುರಾಷ್ಟ್ರೀಯ ಕಂಪನಿಗಳ ಹಾಗೂ ಇತರೆ ಬಂಡವಾಳ ಹೂಡಿಕೆದಾರರ ಕೈವಾಡ, ತಂತ್ರ, ಅವರೊಂದಿಗೆ ಕೈಜೋಡಿಸಿರುವ ಸರ್ಕಾರದ ಮಸಲತ್ತುಗಳು ಜನರಿಗೆ ಸರಳವಾಗಿ ತಿಳಿಯುವಂತೆ ನಿರೂಪಿಸಲಾಗಿದೆ. ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಸಿದರೆ ಮಾತೃಭಾಷಾ ಕಲಿಕೆಗೆ ಅಡ್ಡಿಯಾಗುತ್ತದೆಯೆ ಎಂಬ ಸಮಸ್ಯೆಯ, ಕಾರಣಗಳ, ಸಾಧಕ ಬಾಧಕಗಳ ಚರ್ಚೆಯಲ್ಲದೆ ಪರಿಹಾರವನ್ನೂ ನೀಡಿರುವುದು ಗಮನಾರ್ಹ.

– ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್,
'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ಒಗಟಿನಂತಿರುವ ಇರಾನ್—

ಪ್ರವಾಸಿಯಾಗಿ ನಾನು ಇತ್ತೀಚೆಗೆ ಇರಾನಿಗೆ ಹೋಗಿದ್ದೆ. ಇರಾನ್‌ಗೆ ಪ್ರವಾಸಿ ವೀಸಾ ದೊರೆಯುವುದು ಸುಲಭವೆ...? ಅಷ್ಟೊಂದು ಸುಲಭವೇನೂ ಅಲ್ಲವೆನ್ನಿ. ಅದನ್ನು ಪಡೆಯಬೇಕೆಂದು ಹೊರಟರೆ ಒಂದಾದ ಮೇಲೆ ಇನ್ನೊಂದು, ಹೀಗೆ ಹೊಸ ಹೊಸ ಷರತ್ತುಗಳು ಮುಂದಾಗುತ್ತವೆ. ನೀವು ಮಹಿಳೆಯಾದರೆ, ಮೊದಲಿಗೆ ನಿಮ್ಮೊಡನೆ ಒಬ್ಬ ಗಂಡಸಿರಬೇಕು. ಇಲ್ಲವಾದರೆ, ನೀವೊಂದು ಗುಂಪಿನಲ್ಲಿ ಇರಬೇಕು. ಹಾಗಿದ್ದರೆ, ನಿಮ್ಮ ತಂದೆಯೋ ಗಂಡನೋ ನಿರ್ದಿಷ್ಟವಾಗಿ ನಿಮಗೆ ಅನುಮತಿ ನೀಡುವಂತಹ ಪತ್ರವನ್ನು ಕೊಂಡೊಯ್ಯಬೇಕು. ಇರಾನ್ ಸುತ್ತಮುತ್ತ ಒಬ್ಬ ಮಹಿಳೆಯು ಏಕಾಕಿಯಾಗಿ ಸುತ್ತಾಡುವುದನ್ನು ಅವರು ಕಲ್ಪಿಸಿಕೊಳ್ಳಲಾರರೇನೋ!

ನನಗೆ ನಿರ್ಬಂಧಗಳನ್ನು ಸಡಿಲಿಸಲು ಸುಲಭವಿತ್ತು. ಏಕೆಂದರೆ, ನಾನೊಂದು ಗುಂಪಿನಲ್ಲಿದ್ದೆ ಮತ್ತು ನನ್ನ ಪತಿರಾಯ ಬರೆದುಕೊಟ್ಟಿದ್ದ ''ಆಕ್ಷೇಪವೇನೂ ಇಲ್ಲ'' ಎಂಬಂತಹ ಪತ್ರ ನನ್ನಲ್ಲಿತ್ತು. ಜೊತೆಗೆ ಶರೀರ, ತಲೆ, ಕೂದಲು, ಕತ್ತು, ಕಾಲು ಎಲ್ಲಾ ಚೆನ್ನಾಗಿ ಮುಚ್ಚುವಂತಹ ಪೋಷಾಕು ಧರಿಸಿದ್ದೆ. ಅವರ ಪರಿಭಾಷೆಯಲ್ಲಿ ಅದು 'ಹಿಜಬ್!' ಅದಿಲ್ಲದೆ ಇರಾನ್‌ನಲ್ಲಿ ಸಾರ್ವಜನಿಕವಾಗಿ ಯಾರೂ ಕಾಣಿಸಿಕೊಳ್ಳುವುದಿಲ್ಲ. 'ಕಾಣಿಸಿಕೊಳ್ಳುವಂತಿಲ್ಲ' ಎನ್ನುವುದು ಹೆಚ್ಚು ಸಮಂಜಸ. ಹೀಗೆ 'ಹಿಜಬ್'ನಲ್ಲಿ ಅಡಗಿಕೊಳ್ಳುವುದು ನನಗೆ ನೂತನ, ಅನನ್ಯ, ಅನುಭವ. ಮೊಟ್ಟಮೊದಲ ಬಾರಿಗೆ ನನಗೆ ಪೂರ್ಣರೂಪದಲ್ಲಿ ತಿಳಿಯಿತು, ಎಷ್ಟೊಂದು ಸಾವಿರ ಜನ ಹೀಗೆ ಅಡಿಯಿಂದ ಮುಡಿಯವರೆಗೆ 'ಮುಚ್ಚಿಕೊಂಡು' ಜೀವನ ನಡೆಸುವಾಗ ಕಷ್ಟ ಅನುಭವಿಸುತ್ತಾರೆ, ಎಂದು. ಆದರಿಂದ ಒಂದು ಅನುಕೂಲ ಇರಬಹುದೇನೊ: ಕಾಮಾತುರ ಕಣ್ಣುಗಳು ಚಲಿಸುತ್ತಾ ನಿಮ್ಮನ್ನೇ ನುಂಗಿಬಿಡುವಂತೆ ನೋಡುವುದರಿಂದ ನಿಮಗೆ ಮುಕ್ತಿಯುಂಟು. ಪಿತೃಪ್ರಧಾನ ಮತ್ತು ಪುರುಷರು ಅನ್ಯಾಕ್ರಮಣ ಎಸಗುವಂತಹ ಸಮಾಜಗಳಲ್ಲಿ ಈ ಹಿಜಬ್ ಎಂಬುದು ಮಹಿಳೆಯರಿಗೆ ಎಂತಹ ಸ್ವಾತಂತ್ರ್ಯ ಕಟ್ಟಿಕೊಡುತ್ತದೆಂಬುದನ್ನು ಈವರೆಗೆ ನಾನೆಂದೂ ಗಂಭೀರವಾಗಿ ಪರಿಗಣಿಸಿರಲಿಲ್ಲ. ಒಳಗಡೆ ಥರಾವರಿ ಉಡುಪು ಧರಿಸಿ ಅದನ್ನೆಲ್ಲಾ ಹಿಜಬ್‌ನಡಿ ಮುಚ್ಚಿಟ್ಟುಬಿಡುವುದು ಎಂದರೆ ಏನು ಸೊಗಸು? ಅಲ್ಪ ವಸ್ತ್ರಗಳನ್ನು ತೊಟ್ಟವರಿಗೆ ಅದು ಅನುಕೂಲವಿರಬಹುದು. ಹೇಗೂ ಸರಿ, ಗಂಡಸರಂತೂ ನಿಮ್ಮತ್ತ ಆಸಕ್ತಿಯಿಂದ ನೋಡುವ ಪ್ರಮೇಯವಿಲ್ಲ. ಯಾರೋ ನನ್ನನ್ನು ಗಮನವಿಟ್ಟು ಪರೀಕ್ಷಿಸುತ್ತಿದ್ದಾರೆ ಎಂಬ ಭಾವನೆಯಂತೂ ಬರುವುದಿಲ್ಲ, ಬಿಡಿ. ಭಾರತ ಮತ್ತು ಫ್ರಾನ್ಸ್‌ಗಳಂತಹ ಉದಾರ ಅಥವಾ ಮುಕ್ತ ಸಮಾಜಗಳಲ್ಲಿ ಸಹ ಇಸ್ಲಾಮಿ ಪದ್ಧತಿಯಲ್ಲಿ ಬೆಳೆದ ಮಹಿಳೆಯರನೇಕರು ಹೀಗೇಕೆ ತಮ್ಮನ್ನು ತಾವು ಇಡಿಯಾಗಿ ಮುಚ್ಚಿಕೊಂಡಿರುತ್ತಾರೆಂಬುದನ್ನು ಸ್ವಲ್ಪ ಸ್ವಲ್ಪವಾಗಿ ಗ್ರಹಿಸಿದೆ ಎಂದುಕೊಳ್ಳುತ್ತೇನೆ. ನಮ್ಮಲ್ಲಿ ಗಂಡಸರದು ಹದ್ದಿನ ಕಣ್ಣುಗಳೆ? ಅಥವಾ ಬಹಳ ಸೂಕ್ಷ್ಮವಾದ ಕಣ್ಣುಗಳೋ?

ಮನಸ್ಸಿಗೆ ಹೊಡೆತ ನೀಡುವ ವಿಷಯವೆಂದರೆ, ಇರಾನ್‌ನಂತಹ ದೇಶದಲ್ಲಿ ಮಹಿಳೆಗೆ ಆಯ್ಕೆಯ ಸ್ವಾತಂತ್ರ್ಯವಿಲ್ಲ, ಎಂಬುದು. ಅವರಿಗೆ ಅದು ಕಡ್ಡಾಯ. ಅವಳು ಅಡಿಯಿಂದ ಮುಡಿಯವರೆಗೆ ತನ್ನನ್ನು ಮುಚ್ಚಿಕೊಳ್ಳಲೇಬೇಕು. ಆ ನಿರ್ಬಂಧಕ್ಕೆ ಕಟ್ಟುಬೀಳದಿರುವ ಇರಾನಿ ಮಹಿಳೆಯರನ್ನು ನಾನು ಇಂಗ್ಲೆಂಡ್, ಫ್ರಾನ್ಸ್, ಅಮೆರಿಕಾ ದೇಶಗಳಲ್ಲಿ ಬೇಕಾದಷ್ಟು ನೋಡಿದ್ದೇನೆ; ಆದರೆ ಸದ್ಯದ ಇರಾನ್‌ನಲ್ಲಿ ಅದನ್ನು ನೋಡಲಸಾಧ್ಯ.

**ಅಮೆರಿಕಾದ ಯಾವ ಸರಕೂ ಅಲ್ಲಿ ಲಭ್ಯವಿಲ್ಲ. ಅಮೆರಿಕಾದ ಬ್ಯಾಂಕುಗಳಿಲ್ಲ, ಅಮೆರಿಕಾದ ಆಲೂಗಡ್ಡೆ ಉಪ್ಪೇರಿ ಇಲ್ಲ, ಅಮೆರಿಕಾದ ವಿದ್ಯುದುಪಕರಣಗಳಿಲ್ಲ. ಅಮೆರಿಕಾದ ಉತ್ಪನ್ನಗಳಿಲ್ಲದೆ ಜೀವನ ಸಾಧ್ಯವಿಲ್ಲವೆಂದು ತವಕಿಸುವವರು ಇರಾನ್ ನೋಡಬೇಕು: ಯೂನಿಲಿವರ್, ಪ್ರಾಕ್ಟರ್ ಮತ್ತು ಗ್ಯಾಂಬಲ್‌ಗಳಂತಹ ಬಹುರಾಷ್ಟ್ರೀಯ ಕಂಪನಿಗಳ ಸರಕು–ಸಾಮಗ್ರಿಗಳು ಇಲ್ಲದೆಯೂ ಜೀವನ ಸಾಧ್ಯವೆಂದು ಮನವರಿಕೆಯಾದೀತು. ಪ್ರಪಂಚದ ಎಲ್ಲ ಕಡೆಗಳಲ್ಲೂ ಅವರದೇ ಸೋಪುಗಳು, ಶ್ಯಾಂಪೂಗಳು, ಲೋಶನ್‌ಗಳು; ಆದರೆ ಇರಾನ್‌ನಲ್ಲಿ ಅವಿಲ್ಲ. ಅಲ್ಲಿರುವುದು ಸಾಮಾನ್ಯವಾಗಿ ಆ ದೇಶದಲ್ಲೇ ಉತ್ಪನ್ನವಾಗಿರುವ ಸರಕುಗಳು; ಅಲ್ಲವೆಂದರೆ, ಯಾವುದೋ ಪಶ್ಚಿಮ ಏಷ್ಯಾ ರಾಷ್ಟ್ರದ್ದು. ಆಗಾಗ್ಗೆ ಫ್ರಾನ್ಸ್ ಮತ್ತು ಜರ್ಮನಿ ದೇಶಗಳ ಉತ್ಪನ್ನಗಳೂ ಉಂಟು. ಇದನ್ನು ನೋಡಿದರೆ ಮನಸ್ಸು ಒಂದು ರೀತಿ ಉಲ್ಲಾಸಗೊಳ್ಳುತ್ತದೆ: ಅಮೆರಿಕಾದ ರಸ್ಸೆ ಇಲ್ಲದಂತಹ ಎಷ್ಟೊಂದು ಮಾದರಿಗಳ ಸರಕುಗಳನ್ನು ಸ್ವತಃ ಅವರ ದೇಶದಲ್ಲೇ ಉತ್ಪಾದನೆ ಮಾಡುತ್ತಿದ್ದಾರೆ, ಎಂದು. ಅಮೆರಿಕಾದ ಹಣವಿಲ್ಲದೆಯೇ ಉತ್ಪನ್ನವಾದಂಥವು ಅವು. ಈ ದೃಷ್ಟಿಯಿಂದ ಇರಾನ್ ಒಂದು ಪ್ರಭಾವಶಾಲಿ ದೇಶವಾಗಿ ಕಾಣುತ್ತದೆ.**



ತನು ಮೆಹ್ತಾ ತಿವಾರಿ

ಇರಾನ್‌ನಲ್ಲಿ ಹಿಜಬ್ ಎಂಬುದೊಂದು ನೊಗವಿದ್ದಂತೆ; ಮಹಿಳೆ ಅದನ್ನು ಸದಾ ಹೊತ್ತಿರುಗಬೇಕು. ಇಸ್ಫಹಾನ್‌ನಂತಹ ನಗರದ ಸುಂದರ ಸಂಜೆಗಳಲ್ಲಿ ಅದೆಂತಹ ಹೊರೆಯಾಗುತ್ತದೆ ! ಅದೂ ಬೇಸಿಗೆಯ ಒಣ ಬಿಸಿ ಹವೆಯಿದ್ದಾಗ !! ನಿಮ್ಮ ದೇಹವನ್ನು ತಂಗಾಳಿಯು ಸ್ಪರ್ಶಿಸುವಂತೆಯೇ ಇಲ್ಲವೆಂದರೆ ಅದೆಷ್ಟು ಅಸಹನೀಯ ಮತ್ತು ಶಿರಾಜ್‌ನಂತಹ ಊರಿನ ಆಹ್ಲಾದಕರ ಗಾಳಿಯು ನಿಮ್ಮ ತಲೆಗೂದಲನ್ನು ಕೆದರುವಂತಿಲ್ಲವೆಂದರೆ ಏನು ಸ್ವಾರಸ್ಯ ! ಅಂತಹ ಸಂದರ್ಭದಲ್ಲೇ ನಿಮಗೆ ಚೆನ್ನಾಗಿ ತಿಳಿಯುವುದು, ಈ ಹಿಜಬ್ ಎಂಬುದು ಎಂತಹ ಅನಿಷ್ಟ ಶಾಪ ಎಂದು. ಜೀವನದ ಕೆಲವು ಅದ್ಭುತ ಐಂದ್ರಿಯ ಸುಖಗಳಿಂದ ನಿಮ್ಮನ್ನು ಸದಾ ವಂಚಿಸುತ್ತದೆ ಈ ಹಿಜಬ್. ಸ್ವಾತಂತ್ರ್ಯಹರಣದ ಸಾಧನವಾಗಿ ಹಿಜಬ್ ಕೆಲಸ ಮಾಡುತ್ತದೆ. ಅದು ನಿಮ್ಮನ್ನು ಪಂಜರವೊಂದರಲ್ಲಿ ಕೂಡಿಹಾಕಿ ಇಟ್ಟಾಡಿಸಿಬಿಡುತ್ತದೆ. ಸಾವಿರಾರು ಮಂದಿಯ ಅಶ್ರುತ ಆಕ್ರಂದನದಲ್ಲಿ ನಿಮ್ಮದೂ ಒಂದು ಸೇರಿಬಿಡುತ್ತದೆ; ಅದಕ್ಕೆ ಪ್ರತ್ಯೇಕತೆ, ಅಸ್ಮಿತೆ ಎಂಬುದಿಲ್ಲ, ಎಲ್ಲರಂತೆ ನೀವೂ ಆ ಕಪ್ಪುಬಟ್ಟೆಯ ಸಂತೆಯಲ್ಲಿ ಕಳೆದುಹೋಗುತ್ತೀರಿ; ಬಣ್ಣವಿಲ್ಲ, ಲಕ್ಷಣವಿಲ್ಲ.

ನನ್ನ ಪ್ರವಾಸದ ಕರುಣಾಜನಕ ಭಾಗವೆಂದರೆ ಇದೊಂದೆ : ಯಾವಾಗಲೂ ಆ ಚುಚ್ಚಿ ಕಂಗಾಲಾಗಿಸುವ ಬಟ್ಟೆ ಧರಿಸುವುದು, ಅದರ ವೇದನೆ ಅನುಭವಿಸುವುದು. ದಿನದಲ್ಲಿ, ರಾತ್ರಿಯಲ್ಲಿ, ಯಾವಾಗಲೂ ಅದರಲ್ಲಿ ಅಡಗಿರುವುದು ಅನೂಹ್ಯ ಸಂಕಟ ತರುತ್ತದೆ. ನಮ್ಮ ಹೋಟೆಲಿನ ಕೊಠಡಿಯ ಕ್ಷೇಮಕರ ಏಕಾಂತ ಪರಿಸರವನ್ನು ಹೊಗುವವರೆಗೆ ಅದನ್ನು ಸಹಿಸಬೇಕು, ಅನ್ಯಮಾರ್ಗವಿಲ್ಲ. ಅದೊಂದನ್ನು ಬಿಟ್ಟರೆ ಇರಾನ್‌ನಲ್ಲಿ ಉಳಿದುದೆಲ್ಲಾ ಅತೀವ ಸಂತೋಷದ ಸಂಗತಿಗಳೇ; ಅದೂ ದಪ್ಪಕ್ಷರಗಳಲ್ಲಿ ಬರೆಯಬಹುದಾದ ಸಂತೋಷ !



ಇರಾನ್ ಒಂದು ಅಭಿವೃದ್ಧಿ ಹೊಂದಿದ ರಾಷ್ಟ್ರ. ಅದೂ ಉಚ್ಚಮಟ್ಟದ ಅಭಿವೃದ್ಧಿ. ಭಾರತದೊಡನೆ ಹೋಲಿಸಿದರೆ ಅದೆಲ್ಲೋ ಬಹಳ ಮೇಲೆ ಹೋಗಿ ನಿಂತುಬಿಡುತ್ತದೆ. ದೇಶದಲ್ಲಿ ವಿದ್ಯುಚ್ಛಕ್ತಿ ಸೌಕರ್ಯವು ಶೇಕಡ ೯೦ರಷ್ಟು. ಅಂದರೆ, ನೀವೆಲ್ಲಿಯೇ ಹೋಗಿ, ವಿದ್ಯುಚ್ಛಕ್ತಿಯ ಅಭಾವವಿರುವೆಡೆಗಂತೂ ಹೋಗುವುದಿಲ್ಲ. ಶಿಕ್ಷಣವು ಕಡ್ಡಾಯ ಮತ್ತು ಉಚಿತ. ಅದು ಕೇವಲ ಮಾತಿನಲ್ಲಲ್ಲ, ವ್ಯವಸ್ಥೆ ಅಷ್ಟು ಅಚ್ಚುಕಟ್ಟಾಗಿದೆ, ಯಶಸ್ವಿಯಾಗಿದೆ. ಪ್ರೌಢಶಾಲೆ ಮುಗಿಯುವವರೆಗೆ ಎಲ್ಲರಿಗೂ ಉಚಿತ ಶಿಕ್ಷಣ ಎಂಬುದು ಅಕ್ಷರಶಃ ಕಾರ್ಯಗತಗೊಳಿಸಲಾಗಿದೆ. ಅದರ ಒಂದು ಪರಿಣಾಮವೆಂದರೆ, ನೀವೆಲ್ಲಿಗೆ ಹೋದರೂ ಸಂಧಿಸುವುದು ವಿದ್ಯಾವಂತ ನಾಗರಿಕರನ್ನು. ಅಂತಹ ಸಮಾಜ ನಿಜಕ್ಕೂ ಅಭಿನಂದನೀಯ. ರಸ್ತೆಗಳಂತೂ ಅತ್ಯದ್ಭುತ ಎನ್ನಿ. ಪ್ರತಿಯೊಂದು ನಗರದಲ್ಲೂ ನೀರು ಮತ್ತು ಒಳಚರಂಡಿ ವ್ಯವಸ್ಥೆ ಅನುಕರಣೀಯ ಎನ್ನುವಷ್ಟು ಚೆಂದ. ಯಾವ ಮೂಲೆಯಲ್ಲಿ ನೋಡಿದರೂ ಕುಡಿಯುವ ನೀರಿನ ಬುಗ್ಗೆ ಇರುವುದು ಸಾಮಾನ್ಯ. ನಗರ ಹಾಗೂ ಪಟ್ಟಣಗಳಲ್ಲಿ ಸ್ವಚ್ಛತೆ ಎದ್ದುಕಾಣುತ್ತದೆ. ಹಸಿರನ್ನು ಕಣ್ಣಿಗೆ ತುಂಬಿಸಿಕೊಳ್ಳಲು ಎಲ್ಲೆಡೆ ಅವಕಾಶವಿದೆ. ಪೆಟ್ರೋಲಿನ ಬೆಲೆ ಬಹಳ ಅಗ್ಗವೆಂದು ಹೇಳಬೇಕಾಗಿಲ್ಲ, ಒಂದು ಕೋಕಾ ಕೋಲ ಬಾಟಲಿಗಿಂತಲೂ ಒಂದು ಲೀಟರ್ ಪೆಟ್ರೋಲ್ ಅಗ್ಗ, ಸುಮಾರು ೧೫ ರೂಪಾಯಿ. ಅಂದರೆ, ಎಲ್ಲೆಲ್ಲೂ ಕೋಕಾಕೋಲ ಮತ್ತು ಪೆಪ್ಸಿ ದೊರೆಯುತ್ತದೆ ಎಂದಲ್ಲ; ಇಲ್ಲ, ಅದೆಲ್ಲೂ ಸಿಗುವುದಿಲ್ಲ. ಹಾಗೆ ನೋಡಿದರೆ, ಅಮೆರಿಕಾದ ಯಾವ ಸರಕೂ ಅಲ್ಲಿ ಲಭ್ಯವಿಲ್ಲ. ಅಮೆರಿಕಾದ ಬ್ಯಾಂಕುಗಳಿಲ್ಲ, ಅಮೆರಿಕಾದ ಆಲೂಗಡ್ಡೆ ಉಪ್ಪೇರಿ ಇಲ್ಲ, ಅಮೆರಿಕಾದ ವಿದ್ಯುದುಪಕರಣಗಳಿಲ್ಲ. ಅಮೆರಿಕಾದ ಉತ್ಪನ್ನಗಳಿಲ್ಲದೆ ಜೀವನ ಸಾಧ್ಯವಿಲ್ಲವೆಂದು ತವಕಿಸುವವರು ಇರಾನ್ ನೋಡಬೇಕು: ಯೂನಿಲಿವರ್, ಪ್ರಾಕ್ಟರ್ ಮತ್ತು ಗ್ಯಾಂಬಲ್‌ಗಳಂತಹ ಬಹುರಾಷ್ಟ್ರೀಯ ಕಂಪನಿಗಳ ಸರಕು-ಸಾಮಗ್ರಿಗಳು ಇಲ್ಲದೆಯೂ ಜೀವನ ಸಾಧ್ಯವೆಂದು ಮನವರಿಕೆಯಾದೀತು. ಪ್ರಪಂಚದ ಎಲ್ಲ ಕಡೆಗಳಲ್ಲೂ ಅವರದೇ ಸೋಪುಗಳು, ಶ್ಯಾಂಪೂಗಳು, ಲೋಶನ್‌ಗಳು; ಆದರೆ ಇರಾನ್‌ನಲ್ಲಿ ಅವಿಲ್ಲ. ಅಲ್ಲಿರುವುದು ಸಾಮಾನ್ಯವಾಗಿ ಆ ದೇಶದಲ್ಲೇ ಉತ್ಪನ್ನವಾಗಿರುವ ಸರಕುಗಳು; ಅಲ್ಲವೆಂದರೆ, ಯಾವುದೋ ಪಶ್ಚಿಮ ಏಷ್ಯಾ ರಾಷ್ಟ್ರದ್ದು. ಆಗಾಗ್ಗೆ ಫ್ರಾನ್ಸ್ ಮತ್ತು ಜರ್ಮನಿ ದೇಶಗಳ ಉತ್ಪನ್ನಗಳೂ ಉಂಟು. ಇದನ್ನು ನೋಡಿದರೆ ಮನಸ್ಸು ಒಂದು ರೀತಿ ಉಲ್ಲಾಸಗೊಳ್ಳುತ್ತದೆ: ಅಮೆರಿಕಾದ ಠಸ್ಸೆ ಇಲ್ಲದಂತಹ ಎಷ್ಟೊಂದು ಮಾದರಿಗಳ ಸರಕುಗಳನ್ನು ಸ್ವತಃ ಅವರ ದೇಶದಲ್ಲೇ ಉತ್ಪಾದನೆ ಮಾಡುತ್ತಿದ್ದಾರೆ, ಎಂದು. ಅಮೆರಿಕಾದ ಹಣವಿಲ್ಲದೆಯೇ ಉತ್ಪನ್ನವಾದಂಥವು ಅವು. ಈ ದೃಷ್ಟಿಯಿಂದ ಇರಾನ್ ಒಂದು ಪ್ರಭಾವಶಾಲಿ ದೇಶವಾಗಿ ಕಾಣುತ್ತದೆ.

ನಾವು ಅನೇಕ ಸ್ಥಳಗಳಿಗೆ ಹೋದೆವು : ಟೆಹರಾನ್, ಯಾಜ್ದ್, ಪರ್ಸಿಪೊಲೀಸ್, ಶಿರಾಜ್, ಇಸ್ಫಹಾನ್, ಹಮಾದನ್, ಚಾಲುಸ್ ಇತ್ಯಾದಿ; ಪ್ರತಿಯೊಂದು ನಗರದಲ್ಲೂ ಅದರದೇ ಎನ್ನಬಹುದಾದಂತಹ ಒಂದು ಆಕರ್ಷಣೆ. ಟೆಹರಾನ್ ಇರಾನಿನ ರಾಜಧಾನಿ; ಜನರಿಂದ ತುಂಬಿ ಸಂಚಾರ ದಟ್ಟಣೆ ಇರುವ ಜೀವಂತ ನಗರ. ಅನೇಕ ದೇಶಗಳ ಜನರನ್ನಿಲ್ಲಿ ಕಾಣಬಹುದು. ಆದರೆ ಯಾಜ್ದ್‌ಗೆ ಹೋದರೆ ಬೇರೆಯೇ ಮುಖ; ಅದು ಮರಳುಗಾಡಿನ ಅನನ್ಯ ನಗರ; ಪ್ರಾಚೀನ ಭವ್ಯಕಟ್ಟಡಗಳ ಆಗರ. ಅವನ್ನು ಸಾವರಿಸಿರುವ ರೀತಿಯು ಮನಮೆಚ್ಚುವಂಥದು. ಶಿರಾಜ್‌ಗೆ ಹೋದರೆ ಇನ್ನೊಂದು ಮುಖ : ಇದು ಸಾಹಿತಿ ದಿಗ್ಗಜಗಳ ಆವಾಸಸ್ಥಾನ. ಕವಿಗಳು, ಸೂಫಿಗಳು, ಅಮೋಘವಾದ ಮಸೀದಿಗಳು, ಗೋರಿಗಳು, ಕಿತ್ತಳೆ ತೋಟಗಳು, ಎಲ್ಲಾ ಅತಿ ರಂಜನೀಯವಾದವು. ಇನ್ನು ಇಸ್ಫಹಾನ್ : ಅದನ್ನು ಇರಾನಿನ ಅಮೂಲ್ಯ ರತ್ನವೆಂದರೆ ತಪ್ಪಾಗಲಾರದು. ಅಲ್ಲಿಯ ವಾಸ್ತುಕೌಶಲ್ಯ, ಸೌಂದರ್ಯ, ಉತ್ಕರ್ಷ, ಎಲ್ಲವೂ ದಂಗುಬಡಿಸುವಂಥವೇ. ವಿಶ್ವದಲ್ಲಿ ಬೇರೆಲ್ಲಿಯಾದರೂ ಇಂತಹ ವಾತಾವರಣ ಉಂಟೆ ಎಂದು ಮೂಗಿನ ಮೇಲೆ ಬೆರಳಿಡಬೇಕು, ಹಾಗಿದೆ ಅದರ ಮಹತ್ತ್ವ. ಹಮಾದನ್ ಮತ್ತು ಚಾಲುಸ್ ಕ್ಯಾಸ್ಪಿಯನ್ ಸಮುದ್ರದ ತೀರದಲ್ಲಿವೆ. ಮೆಡಿಟರೇನಿಯನ್ ಪ್ರದೇಶದ ಸೊಬಗು ಅಡಿಗಡಿಗೂ ಬೆರಗುಗೊಳಿಸುವಂತಹದ್ದು. ಅದನ್ನಿಲ್ಲಿ ಸವಿಯಬಹುದು. ಅದೆಷ್ಟು ಆಲಿವ್ ತೋಟಗಳು, ಮುದ ನೀಡುವ ವಾಯುಗುಣ ಮತ್ತು ಬೆಟ್ಟಗಳು ಹಾಗೂ ಸಮುದ್ರದ ಎಂತಹ ಮೋಹಕ ಮಿಶ್ರಣ ! ಅದೆಲ್ಲಾ ಒತ್ತಟ್ಟಿಗಿರಲಿ, ಇರಾನಿನ ನಿಜವಾದ ಹೆಮ್ಮೆ ಇರುವುದು ಅದರ ಶಿಲ್ಪ ಕೌಶಲ್ಯ ಮತ್ತು ಸೌಂದರ್ಯದಲ್ಲಿ ಅಲ್ಲ, ಆ ದೇಶದ ಜನರ ನಾಗರಿಕತೆ, ಅದರ ಪುರಾತನತೆ ಮತ್ತು ಆಧುನಿಕತೆಯ ಮಿಲನ, ಅದರಲ್ಲಿದೆ ವಿಶೇಷ ಹೆಮ್ಮೆ. ಇರಾನಿನ ಜನರನ್ನು ಸಾಮಾನ್ಯೀಕರಿಸಿ ವಿವರಿಸಬೇಕೆಂದರೆ ನನಗೆ ತೋರುವುದು ಅವರ ಅತಿ ಸರಳ ಸ್ನೇಹ ಮತ್ತು ವಿಪುಲವಾಗಿ ಕಂಗೊಳಿಸುವ ಅವರ ಔದಾರ್ಯ. ಅವರ ಸಮಯವನ್ನು ನಮಗಾಗಿ ಮೀಸಲಿಡಲು ಅಥವಾ ಅದನ್ನು ನಮ್ಮೊಂದಿಗೆ ಹಂಚಿಕೊಳ್ಳಲು ಹಿಂದುಮುಂದು ನೋಡದ ಅವರು ಅಷ್ಟೇ ಸುಲಭವಾಗಿ ತಮ್ಮ ಔದಾರ್ಯವನ್ನು ಹಂಚಿಕೊಳ್ಳುತ್ತಾರೆ. ಒಂದಿಷ್ಟೂ ಪರಿಚಿತರಲ್ಲದ ಎಷ್ಟೋ ಮಂದಿ ನಮ್ಮ ಟೀ ಅಥವಾ ಹಣ್ಣಿಗಾಗಿ ಹಣ ಕೊಟ್ಟುಬಿಡುವುದು ಅಪರೂಪವಲ್ಲ. ಒಂದೆರಡು ಮಾತುಗಳನ್ನು ಅವರೊಡನೆ ಆಡಿದ್ದರೆ ಸಾಕು, ಅವರು ಆತ್ಮೀಯವಾಗಿ ಆತಿಥ್ಯ ನೀಡಲು ಮುಂದಾಗುತ್ತಾರೆ. ಇರಾನ್‌ನ ಸಾಮಾನ್ಯ ಪ್ರಜೆ ವಿನಯಶೀಲ ಮತ್ತು ಆದರ ತೋರಿಸುವ ಸ್ವಭಾವದವನು. ಅವನ ಅಥವಾ ಅವಳ ಮುಖದಲ್ಲಿ ನಗುವಿನ ಛಾಯೆ ಸುಳಿದಾಡುತ್ತಿರುತ್ತದೆ.

ಆಶ್ಚರ್ಯಕರವೆನ್ನಬಹುದಾದ ಇನ್ನೊಂದು ಲಕ್ಷಣವನ್ನು ಇರಾನಿನ ಪ್ರಜೆಗಳಲ್ಲಿ ಗಮನಿಸಬಹುದು. ಅದು ಅವರ 'ಪರ್ಷಿಯನ್ ಸಂಸ್ಕೃತಿ'ಯ ಬಗೆಗಿನ ಹೆಮ್ಮೆಗೆ ಸಂಬಂಧಿಸಿದ್ದು. 'ಪರ್ಷಿಯನ್' ಎಂದರೆ ಇಸ್ಲಾಂ ಧರ್ಮವು ನೆಲೆಗೊಳ್ಳುವುದಕ್ಕೆ ಮುಂಚಿನ ಕಾಲಘಟ್ಟ. ನಾವೊಂದು ವಸ್ತುಸಂಗ್ರಹಾಲಯಕ್ಕೆ ಹೋಗಿದ್ದಾಗ ಅಲ್ಲಿನ ನಿರ್ದೇಶಕರು ಯಾವ ಅಳುಕೂ ಇಲ್ಲದೆ ಹೇಳಿದರು : ''ಮುಸಲ್ಮಾನನಾಗಿರುವುದೆಂದರೆ ನನ್ನ ಪರ್ಷಿಯನ್ ಪರಂಪರೆಯನ್ನು ಕೈಬಿಡುವುದೆಂದಲ್ಲ.'' ಇದು ಆತನೊಬ್ಬನ ಅಭಿಪ್ರಾಯವಲ್ಲವೆಂಬುದು ಎಲ್ಲೆಡೆ ಗೊತ್ತಾಗುತ್ತಿರುತ್ತದೆ. ಅವರೆಲ್ಲಾ 'ನೋರುಜ್' ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ನಮ್ಮಲ್ಲಿ

ಪಾರ್ಸಿಗಳು ಅದನ್ನು 'ನವರೋಜ್' ಎಂದು ಕರೆಯುತ್ತಾರೆ. ಪರ್ಷಿಯನ್ ಪಂಚಾಂಗದಲ್ಲಿ ಅದು ಹೊಸ ವರ್ಷದ ಮೊದಲ ದಿನ. ಸಾಮಾನ್ಯವಾಗಿ ಆಗಸ್ಟ್-ಸೆಪ್ಟೆಂಬರ್ ತಿಂಗಳುಗಳ ಆಸುಪಾಸಿನಲ್ಲೇ ಅದು ಬರುತ್ತದೆ. ಇರಾನಿನ ಇತಿಹಾಸ ತಜ್ಞರು ಪರ್ಷಿಯನ್ ಮತ್ತು ಸಂಸ್ಕೃತ ಭಾಷೆಗಳು ಸೋದರ ಸಂಬಂಧವಿರುವಂಥವೆಂಬುದನ್ನು ಮುಕ್ತವಾಗಿ ಪ್ರಚಾರ ಮಾಡುತ್ತಾರೆ. ಪ್ರಾಚೀನ ಪರ್ಷಿಯನ್ ಭಾಷೆಯಲ್ಲಿರುವ ಶಾಸನಗಳನ್ನು (ಅಶೋಕನ ಕೆಲವು ಶಾಸನಗಳಂತೆ) ಬಂಡೆಗಳ ಮೇಲೆ ಹಾಗೂ ಶಿಲಾಕೃತಿಗಳಲ್ಲಿ ಕಾಣಬಹುದು. ಅವು ಸಂಸ್ಕೃತವನ್ನು ಗಮನಾರ್ಹವಾಗಿ ಹೋಲುತ್ತವೆ. ಏಕೆಂದರೆ, ಎರಡು ಭಾಷೆಗಳ ಉಗಮವೂ ಒಂದೇ ಮಾತೃಸ್ಥಾನದಿಂದ ಆಗಿದೆ. ಅದನ್ನು ಭಾಷಾಶಾಸ್ತ್ರಜ್ಞರು ಇಂಡೋ-ಇರಾನಿಯನ್ ಎಂದು ಕರೆಯುತ್ತಾರೆ. ಪ್ರಾಚೀನ ಪರ್ಷಿಯಾದ 'ಅವೆಸ್ತಾ' ಗ್ರಂಥವು ನಮ್ಮ ಪ್ರಾಚೀನ ಸಾಹಿತ್ಯ ಭಾಗವಾದ ಋಗ್ವೇದದೊಡನೆ ಅನೇಕ ಹೋಲಿಕೆಗಳನ್ನು ಹೊಂದಿದೆ. ನಮ್ಮ 'ಅಸುರ ವರುಣ' ಅವರ 'ಅಹುರ ಮಾಜ್ದ' ಆಗಿದ್ದಾನೆ. ನಮ್ಮ 'ಋತ' ಅವರ 'ಅಶ' ಆಗಿದೆ. ಅವರ ಪ್ರಾಚೀನ ದೊರೆ ಝರ್ಸಿಸ್‌ಗೆ ಪರ್ಷಿಯನ್ ಭಾಷೆಯಲ್ಲಿ 'ಕ್ಷಯ' ಎನ್ನುವುದು ಇನ್ನೊಂದು ಹೆಸರು. ಅದು ನಮ್ಮ 'ಅಕ್ಷಯ' ಎಂಬ ಹೆಸರಿಗೆ ಸಂವಾದಿಯಾದ್ದು.

ತಾವು ಪರ್ಷಿಯನ್ ಮೂಲದವರೆಂದು ಇರಾನಿನಲ್ಲಿ ಹಲವು ಮಂದಿ ಪದೇ ಪದೇ ಹೇಳುತ್ತಿರುತ್ತಾರೆ; ತಾವು ಅರಬ್ ಮೂಲದವರಲ್ಲವೆಂದು ಒತ್ತು ಕೊಡಲು ಈ ಮಾತು. ಮಾತಿಗಿಳಿದು ಚರ್ಚಿಸಹೊರಟರೆ ಅವರಿಗೆ ಅರಬ್ಬರೆಂದರೆ ಒಂದು ಬಗೆಯ ನಿಂದನೆಯ ಭಾವ ವಿರುವುದು ಯಾರಿಗಾದರೂ ತಿಳಿಯುತ್ತದೆ. ಅದಕ್ಕೆ ಎರಡು ಕಾರಣ ಗಳಿವೆ ಎಂದು ತೋರುತ್ತದೆ: ಒಂದು, ಪ್ರಾಚೀನ ಕಾಲದಲ್ಲಿ ಅರಬ್ ದೊರೆಗಳು ಪರ್ಷಿಯಾವನ್ನು ವಸಾಹತನ್ನಾಗಿ ಮಾಡಿಕೊಂಡಿದ್ದುದು; ಎರಡನೆಯದು, ಆಧುನಿಕ ಅರಬ್ ಜನತೆಯು ಸಮಕಾಲೀನ ವಿದ್ಯಮಾನ ಗಳಿಗೆ ಸರಿಯಾಗಿ ಸ್ಪಂದಿಸುತ್ತಿಲ್ಲವೆಂಬ ಭಾವನೆ. ನಾವು ಭೇಟಿಯಾದ ಒಬ್ಬ ವ್ಯಕ್ತಿ ಹೇಳಿದ: ''ನೋಡಿ, ತಾವು ಮಾಡಬೇಕಾದ್ದನ್ನು ನಿಖರವಾಗಿ ಮಾಡದೆ ಅವರು ಇಡೀ ಪಶ್ಚಿಮ ಏಷ್ಯಾಕ್ಕೆ ಕೆಟ್ಟ ಹೆಸರು ತಂದಿದ್ದಾರೆ.''



ಪ್ರಾಚೀನ ಸ್ಮಾರಕಗಳನ್ನು ಇರಾನಿನಲ್ಲಿ ಜತನದಿಂದ ಸಂರಕ್ಷಿಸಲಾಗಿದೆ. ಅವುಗಳ ಸುತ್ತಣ ತೋಟಗಳಲ್ಲಿ ಹೂವುಗಳು ರಾಶಿರಾಶಿಯಾಗಿವೆ; ಅಂತೆಯೇ ಉದ್ಯಾನವನಗಳಲ್ಲಿ ಹಾಗೂ ಹಾದಿಬದಿಯ ಬೇಲಿಗಳಲ್ಲಿ ಸಹ. ಆ ದೇಶದಲ್ಲಿ ಮಳೆಯ ಪ್ರಮಾಣ ಅತಿ ಕಡಿಮೆ ಇದ್ದಾಗ್ಯೂ, ವನರಾಶಿಗೇನೂ ಕೊರತೆಯಿಲ್ಲ. ಸನಿಹದ ಪರ್ವತಗಳಿಂದ ಹಿಮವು ಕರಗಿ ಬರುವ ನೀರೇ ಅವರಿಗೆ ಮೂಲಾಧಾರ. ಕಲೆ ಮತ್ತು ಸೌಂದರ್ಯೋಪಾಸನೆಯ ಬಗ್ಗೆ ಇರಾನಿನ ಜನರಿಗೆ ವಿಶಾಲವಾದ ನಿರ್ದಿಷ್ಟ ದೃಷ್ಟಿಕೋಣವಿದೆಯೆಂಬುದು ರಸ್ತೆಗಳ ಪಕ್ಕದ ಅಂಗಡಿಗಳನ್ನು, ಅವರ ಉತ್ಪನ್ನಗಳನ್ನು ಮತ್ತು ಮನೆಗಳನ್ನು ನೋಡಿದರೆ ತಿಳಿಯುತ್ತದೆ. ಅವುಗಳ ಸ್ವಚ್ಛತೆ ಮತ್ತು ಅಚ್ಚುಕಟ್ಟು ಕಂಡು ವಿಸ್ಮಿತರಾಗುತ್ತೇವೆ. ನಗರಗಳೂ ಅಷ್ಟೇ, ಬಹಳ ಸ್ವಚ್ಛ. ಹಳೆಯ ಭಾಗಗಳಲ್ಲಿ 'ಬೋಜ಼ಾರ್' ಎಂದು ಕರೆಯಲಾಗುವ ಮಳಿಗೆಗಳಲ್ಲೂ ಸ್ವಚ್ಛತೆ ಇರುತ್ತದೆ. ಅವರ ಆಹಾರದಲ್ಲಿ ತರಕಾರಿಗಳು ಹೇರಳವಾಗಿರುತ್ತವೆ. ಮಾಂಸವನ್ನು ಸೌತೇಕಾಯಿ, ಕುಂಬಳಕಾಯಿ ಮತ್ತು ಸೊಪ್ಪಿನೊಡನೆ ಬೇಯಿಸುವುದನ್ನು ಎಲ್ಲಾದರೂ ಕಂಡಿದ್ದೀರಾ? ಇರಾನ್‌ನಲ್ಲಿ ಅದು ಸರ್ವೇಸಾಮಾನ್ಯ. 'ಚೀಸ್' ಎಂಬುದು ಅಸಂಖ್ಯ ಬಗೆಗಳಲ್ಲಿ ಲಭ್ಯ; ಅಂತೆಯೇ ಕಾಯಿಪಲ್ಯಗಳು ಮತ್ತು ಮೊಸರು. ತಿಂಡಿ, ಊಟ ಏನೇ ಆದರೂ ಇವು ಜೊತೆಗಿರಬೇಕು. ಇನ್ನು ಅವರ 'ಕೆಬಾಬ್' ಅಂದರೆ ಅವರಿಗೆ ಎಲ್ಲಿಲ್ಲದ ವ್ಯಾಮೋಹ. ನನಗೆ ಆ ದೇಶದಲ್ಲಿ ಸುತ್ತಾಡುತ್ತಿದ್ದಾಗ ಅತಿಹೆಚ್ಚಿನ ಸಂತೃಪ್ತಿ ನೀಡಿದ್ದೇನು ಗೊತ್ತೆ? – ಮೂಲೆಮೂಲೆಗಳಲ್ಲಿ, ಸಂದಿಗೊಂದಿಗಳಲ್ಲಿ ಇರುವ ತಂದೂರಿ ಒಲೆಗಳು. ಅಲ್ಲಿ ಬ್ರೆಡ್ ಮತ್ತು ನಾನ್ ಯಾವಾಗಲೂ ಸಿಗುತ್ತವೆ. ಗಂಡಸರು-ಹೆಂಗಸರು ಅಲ್ಲೆಲ್ಲಾ ಅದೆಷ್ಟೆಷ್ಟು ನಾನ್ ಮತ್ತು ಬ್ರೆಡ್ ಕೊಳ್ಳುತ್ತಾರೋ ಎನಿಸುತ್ತದೆ. ಮನೆಗಳಲ್ಲಿ ಇವನ್ನೆಂದೂ ಅವರು ತಯಾರಿಸುವುದಿಲ್ಲವೋ ಏನೋ! ಉತ್ತರ ಭಾರತದ ಮಹಿಳೆಯೊಬ್ಬಳ ದಿನಚರಿಯಲ್ಲಿ ಅಡಿಗೆಮನೆ ಕೆಲಸವು ಕೊನೆಯಿಲ್ಲದ್ದು; ಅದರಿಂದ ಎಂತಹ ಮುಕ್ತಿ ಈ ಇರಾನಿನ ಮಹಿಳೆಯರಿಗೆ ಎಂದು ಅಸೂಯೆ ಉಂಟಾದರೆ ಆಶ್ಚರ್ಯವಿಲ್ಲ.

ರಾಜಕೀಯವಾಗಿ, ಇರಾನಿನ ಜನ ದೇಶದಲ್ಲಿ ಗೊಡ್ಡು ಸಂಪ್ರದಾಯವಾದಿಗಳೊಡನೆ ಸೆಣಸಬೇಕಾದ ಸಂದಿಗ್ಧ ಪರಿಸ್ಥಿತಿಯಲ್ಲಿದ್ದಾರೆ. ಇರಾನ್‌ನಲ್ಲಿ ಇರುವಾಗ ನಮಗೆ ಅರ್ಥವಾಗುತ್ತದೆ, ಅದೆಷ್ಟು ಸಂಗತಿಗಳನ್ನು ಅತ್ಯಂತ ಸಹಜವೆಂದು ಭಾವಿಸಿಕೊಂಡು ನಾವು ಅನುಭವಿಸುತ್ತೇವೆ, ಎಂದು. ಈ ಸ್ವಾತಂತ್ರ್ಯಕ್ಕಾಗಿ ನಾವು ಹೋರಾಡಬೇಕಾಗಿಲ್ಲವಲ್ಲ ಎಂಬ ಭಾವನೆ ಬರುತ್ತದೆ. ಆದರೆ ಅದಕ್ಕಿಂತ ಮುಖ್ಯವಾಗಿ ನಮ್ಮಲ್ಲಿ ಮೂಡುವುದು ಒಂದು ರೀತಿಯ ಆತಂಕ: ಜಡ್ಡು ಮತೀಯ ಭಾವನೆಗಳನ್ನು ಪೋಷಿಸುವಂತಹ ರಾಜಕೀಯ ವ್ಯವಸ್ಥೆ ನಮ್ಮಲ್ಲಿ ಬೇರೂರಿದರೆ, ನಿಕೃಷ್ಟ ಸಂಪ್ರದಾಯವಾದಿ ಜನವಿರೋಧಿಗಳು ಅಧಿಕಾರಕ್ಕೆ ಬಂದರೆ, ನಮ್ಮ ದೇಶಕ್ಕೆ ಅದೆಂತಹ ಗಂಡಾಂತರವಾದೀತು, ಎಂದು. ಜನರ, ವಿಶೇಷವಾಗಿ ಮಹಿಳೆಯರ, ಸ್ವಾತಂತ್ರ್ಯಕ್ಕೆ ಭಾರಿ ಕೊಡಲಿಪೆಟ್ಟು ಅದಾಗುತ್ತದೆ. ಮತಾಂಧತೆಯ ಪೈಶಾಚಿಕ ನರ್ತನದ ಪರಿಣಾಮ ಅತ್ಯಂತ ಭೀಕರವಾಗಿರುತ್ತದೆ. ಇರಾನ್‌ನಲ್ಲಿ ಬಲ ಮತ್ತು ಎಡ ಪಂಥಗಳು ಜನರನ್ನು ಸ್ಪಷ್ಟವಾಗಿ ವಿಭಜಿಸಿಬಿಟ್ಟಿವೆ; ಆದರೆ ಎಡಪಂಥೀಯರದು ಮೇಲುಗೈ ಆಗಿಲ್ಲ. ಬಹುಶಃ ಸಂಪ್ರದಾಯವಾದಿಗಳ ಶಕ್ತಿ-ಪ್ರಾಬಲ್ಯಗಳನ್ನು ಅವರು ಸರಿಯಾಗಿ ತಿಳಿದುಕೊಳ್ಳಲಿಲ್ಲ. ಅವರಿಂದ ಎಷ್ಟು ಅಸಹ್ಯಕರ ದಮನ ಉಂಟಾಗಬಹುದೆಂದು ಈ ಎಡಪಂಥೀಯರು ಲೆಕ್ಕಾಚಾರ ಮಾಡಿರಲಿಲ್ಲ. ಅವರ ನಿರೀಕ್ಷೆ ಎಡವಟ್ಟಾಯಿತು. ರಾಷ್ಟ್ರೀಯತೆಯ ಸೋಗಿನಲ್ಲಿ ಕಟ್ಟಾ ಸಂಪ್ರದಾಯವಾದಿಗಳು ಮುನ್ನಡೆ ಸಾಧಿಸಿ ಅಧಿಕಾರಕ್ಕೆ ಬರಲು ಬಿಟ್ಟುಕೊಟ್ಟದ್ದು ಇರಾನಿನ ಜನರಿಗೆ ದೊಡ್ಡ ಕುತ್ತಾಗಿ ಪರಿಣಮಿಸಿದೆ, ಅವರ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಿದೆ. ಇಷ್ಟು ಬೆಲೆ ತೆರಬೇಕಾಗಿ ಬರುತ್ತದೆಂದು ಜನರಾಗಲಿ, ಎಡಪಕ್ಷ ಗಳಾಗಲಿ ನಿರೀಕ್ಷಿಸಿದ್ದಂತೆ ಕಾಣುವುದಿಲ್ಲ. ಅಂದು ಶಾ ಮತ್ತು ಅಮೆರಿಕಾ ಜೊತೆಯಾಗಿದ್ದರು; ಇಂದು ಪ್ರಭುತ್ವ ಮತ್ತು ಅಮೆರಿಕಾ ಬೇರೆಯಾಗಿವೆ. ಆದರೆ ಜನರು ಕಂಟಕವನ್ನು ಎದುರಿಸುತ್ತಲೇ ಬಂದಿದ್ದಾರೆ. ಈಗಲೂ ವಿರೋಧ ಮತ್ತು ಸಂಘರ್ಷದ ಅಲೆ ಎಲ್ಲೆಲ್ಲೂ ಕಾಣುತ್ತದೆ. ಅನತಿಕಾಲದಲ್ಲೇ ಗೊಡ್ಡು ಸಂಪ್ರದಾಯವಾದಿಗಳ ಹಿಡಿತ ಕೊನೆಗೊಳ್ಳುತ್ತದೆಂಬ ಆಶಾಭಾವನೆಯು ಸಕಾರಣವಾಗಿ ಜನಮನದಲ್ಲಿ ನೆಲೆ ಗೊಂಡಿರುವಂತೆ ಭಾಸವಾಗುತ್ತದೆ. ಅಮೆರಿಕಾ ಮತ್ತು ಅದರ ಮಿತ್ರರಾಷ್ಟ್ರಗಳು ದುಷ್ಟಕೂಟವೊಂದನ್ನು ರಚಿಸಿಕೊಂಡು ಈ ಆಶಯವನ್ನು ಭಗ್ನಗೊಳಿಸಿಬಿಡಬಹುದೆಂಬ ಭಯವೂ ಇದೆ. ಅವರೇನಾದರೂ ಇರಾನಿನಲ್ಲಿ ಪ್ರಭುತ್ವವನ್ನು ಬದಲಾಯಿಸಲು ಹಾತೊರೆದು ಯಾವುದಾದರೂ ಕೈಗೊಂಬೆ ಸರ್ಕಾರಕ್ಕೆ ಪುಷ್ಟಿ ನೀಡಿದರೆ ಜನ ಮತ್ತು ಧರ್ಮಾಂಧ ನಾಯಕ ವರ್ಗ ಅನಿವಾರ್ಯವಾಗಿ ಒಂದಾಗಿ ಹೋರಾಟಕ್ಕಿಳಿಯುವ ಸಾಧ್ಯತೆ ಇದೆ. ಇರಾನಿನ ಜನಸಾಮಾನ್ಯರಲ್ಲಿ ತಮ್ಮ ದೇಶದ ರಾಜತಾಂತ್ರಿಕ ನೈಪುಣ್ಯದ ಬಗ್ಗೆ ಬಲವಾದ ನಂಬಿಕೆ ಇದೆ. ಇದನ್ನು ಎಲ್ಲೆಲ್ಲೂ ಗುರುತಿಸಲು ಸಿಗುತ್ತದೆ. ಅಮೆರಿಕಾ ತಮಗೇನೂ ಮಾಡಲಾರದೆಂಬ ದೃಢ ನಂಬಿಕೆ ಆ ಜನರದು. ಇದು ಇರಾನಿನಲ್ಲಿ ನಾನು ಪಡೆದುಕೊಂಡ ಗಾಢ ಅನುಭವ. ನನ್ನ ಇಂಗಿತದಲ್ಲಿ ಹುರುಳಿದೆಯೋ ಇಲ್ಲವೋ ಎಂಬುದನ್ನು ಕಾಲವೇ ನಿರ್ಧರಿಸಬೇಕು. ಅದು ಯಥಾವತ್ತಾದ್ದಾಗಿರಲಿ ಎಂದಷ್ಟೇ ನಾನು ಆಶಿಸುತ್ತೇನೆ. ವಿಶ್ವದಲ್ಲಿ ಇರಾನಿಗೆ ತಕ್ಕುದಾದ ಸ್ಥಾನ ದೊರೆಯಬೇಕಾದ್ದು ನ್ಯಾಯಯುತವಾಗಿದೆ. ಆ ದೇಶದ ಸಾಮೂಹಿಕ ನಾಗರಿಕತೆಯಿಂದ ಮೂಡುವ ಜಾಣತನವು ಭವಿಷ್ಯದ ಆಗುಹೋಗುಗಳನ್ನು ನಿರ್ದೇಶಿಸಲು ಸಮರ್ಥವಾಗಲೆಂದು ಹಾರೈಸುತ್ತೇನೆ. ಆಂತರಿಕವಾಗಿ ಗೊಡ್ಡು ಸಂಪ್ರದಾಯಸ್ಥರ ಅಧಿಕಾರವು ದೇಶಕ್ಕೆ ಪಾರ್ಶ್ವವಾಯುವನ್ನು ತಗುಲಿಸಿದೆ; ಹೊರಗಡೆ ಯಿಂದ ಅಮೆರಿಕಾದ ಕುಟಿಲ ನೀತಿಯು ದೇಶದ ಮೇಲೆ ಯುದ್ಧವನ್ನು ಹೇರಿಸುವ ಅಂಚಿನಲ್ಲಿದೆ. ಪ್ರಾಚೀನ ಪರ್ಷಿಯಾದ ಚಿಂತನೆ ಮತ್ತು ಸಂಸ್ಕೃತಿಯು ಆಧುನಿಕ ಇರಾನಿನ ವಿವೇಕ ಬಣದೊಂದಿಗೆ ಕೈಜೋಡಿಸಿ ಶಾಂತಿ, ಸುಭದ್ರತೆ ಮತ್ತು ಅಭಿವೃದ್ಧಿಗಳ ಹಿನ್ನೆಲೆಯಲ್ಲಿ ಎಲ್ಲರ ಸ್ವಾತಂತ್ರ್ಯದ ದಿಗಂತವನ್ನು ವಿಸ್ತರಿಸುವಂತಾಗಲೆಂದು ಆಶಿಸುತ್ತೇನೆ. ಅದನ್ನು ಸಿದ್ಧಿಸಿಕೊಳ್ಳಲು ಇರಾನಿನ ಜನಸಾಮಾನ್ಯರಿಗೆ ಪ್ರೌಢಿಮೆ ಇದೆ, ಸಾಮರ್ಥ್ಯವೂ ಇದೆ.

ತನು ಮೆಹ್ತಾ ತಿವಾರಿ
ವಕೀಲರು, ಮುಂಬಯಿ ಉಚ್ಚ ನ್ಯಾಯಾಲಯ, ಮುಂಬಯಿ - ೪೦೦ ೦೦೧




ಬಿ. ಎಸ್. ನಾಗರತ್ನಕುಮಾರಿ

'ಕ್ಯಾಂಪಸ್ ಮೆ ಉಪಸ್ಥಿತ್ ಸಭಿ ಪ್ರತಿಭಾಗಿಯೋಮೆ ಮೇರಾ ನಮ್ರ ನಿವೇದನ್ ಹೈ, ದೋಪಹರ್‌ಕೆ ಭೋಜನ್ ಕೇಲಿಯೆ ಭೋಜನ್ ಕಕ್ಷ್ ಪರ್ ಆ ರಹಾ ಕಷ್ಟಲೇ...'

ಫೀಲ್ಡ್ ಡೈರೆಕ್ಟರ್ ವಿಜಯ ಮೆಹ್ತಾ ಅವರ ಕರೆ ಧ್ವನಿವರ್ಧಕದಲ್ಲಿ ಮೊಳಗಿತ್ತು. ಈ ಕರೆ ಪ್ರತಿದಿನ ನಾಲ್ಕು ಸಲ, ಬೆಳಗಿನ ತಿಂಡಿ, ಸಂಜೆಯ ಚಹಾ ಮತ್ತು ಊಟದ ಎರಡು ವೇಳೆಯೂ ಕೇಳಿಬರುವುದು ತಪ್ಪುತ್ತಿರಲಿಲ್ಲ. ಶಿಬಿರಾರ್ಥಿಗಳೆಲ್ಲರಿಗೂ ಈ ಧ್ವನಿ ಅತ್ಯಂತ ಆಪ್ಯಾಯಮಾನವಾಗಿತ್ತು. ಅಕಸ್ಮಾತ್ ಒಂದು ಹೊತ್ತು ಈ ಕರೆ ಕೇಳಿ ಬರದಿದ್ದರೂ ಎಲ್ಲರಿಗೂ ಪಿಚ್ಚೆನಿಸುತ್ತಿತ್ತು. ಅಷ್ಟರಮಟ್ಟಿಗೆ ಮೆಹತಾ ತಮ್ಮ ಧ್ವನಿಯಿಂದ ಎಲ್ಲರನ್ನೂ ಸೆಳೆದಿದ್ದರು. ಬರೀ ಧ್ವನಿಯಷ್ಟೇ ಅಲ್ಲ, ಚಾರಣಕ್ಕೆಂದು ಪ್ರಕೃತಿ ಅಧ್ಯಯನ ಶಿಬಿರಕ್ಕೆ ಬರುವ ಮಕ್ಕಳ ಪ್ರತಿಯೊಂದು ಗುಂಪಿಗೂ 'ಓರಿಯಂಟೇಶನ್' ಕ್ಲಾಸ್ ತೆಗೆದುಕೊಳ್ಳುವ ಕಲೆಯಲ್ಲೂ ಅವರ ನಿಪುಣತೆ ಕಂಡುಬರುತ್ತಿತ್ತು. ತಮ್ಮದೇ ಆದ ಧಾಟಿಯಲ್ಲಿ ಮಕ್ಕಳನ್ನು ಪರಿಚಯಿಸಿಕೊಂಡು, ಚಾರಣ ಹೋಗುವಾಗ ಹೇಗಿರಬೇಕು ? ಬೆಟ್ಟ-ಗುಡ್ಡ-ಪರ್ವತ-ನದಿಗಳ ದಾರಿಯಲ್ಲಿ ಸಾಗಬೇಕಾದಾಗ ನಿಧಾನವಾಗಿ ಅಲ್ಲಲ್ಲಿ ನಿಂತು ಕೂತು ಪ್ರಕೃತಿ ಸೌಂದರ್ಯವನ್ನು ಸವಿಯಬೇಕಾದ ಬಗೆ, ಅಲ್ಲಲ್ಲಿ ಸಿಗುವ ಹಳ್ಳಿಗಳು-ಹಳ್ಳಿಗರ ಬಗ್ಗೆ ಇರಬೇಕಾದ ಪ್ರೀತಿ, ಹಿಮದಲ್ಲಿ ನಡೆಯಬೇಕಾದಾಗ ವಹಿಸಬೇಕಾದ ಎಚ್ಚರ ಇವೆಲ್ಲ ಸಂಗತಿಗಳನ್ನೂ ನಿಧಾನವಾಗಿ ಉದಾಹರಣೆಗಳ ಸಮೇತ ಮೆಹತಾಜಿ ಹೇಳುವ ರೀತಿ ಮಕ್ಕಳಿಗೆ ಅತ್ಯಂತ ಖುಷಿಯಾಗುತ್ತಿತ್ತು. ಒಂದು ಗಂಟೆಯ ಓರಿಯಂಟೇಶನ್ ಕ್ಲಾಸ್ ಹೇಗೆ ಮುಗಿಯಿತು ಎಂಬುದೇ ಗೊತ್ತಾಗುತ್ತಿರಲಿಲ್ಲ.

ಮಕ್ಕಳೆಲ್ಲರಿಗೂ ಪ್ರೀತಿಯ 'ಮೆಹತಾ ಸಾಬ್' ಆಗಿದ್ದರು ವಿಜಯ್ ಮೆಹ್ತಾ. ತಮ್ಮ ಸಣ್ಣ ಪುಟ್ಟ ಬೇಕು-ಬೇಡಗಳಿಗೂ ಮಕ್ಕಳು ಅವರ ಬಳಿ ಓಡೋಡಿ ಬರುತ್ತಿದ್ದರು. ಉಳಿದ ಕ್ಯಾಂಪ್ ಲೀಡರುಗಳು ಇದರಿಂದ ಇರಸುಮುರಸಾಗುತ್ತಿದ್ದರು. ವಿಜಯ ಮೆಹ್ತಾ ಇಡೀ ಪ್ರಕೃತಿ ಅಧ್ಯಯನ ಶಿಬಿರಕ್ಕೇ ಕ್ಷೇತ್ರ ನಿರ್ದೇಶಕರು. ಬೇಸ್ ಕ್ಯಾಂಪೇ ಅಲ್ಲದೆ, ಹೈಯರ್ ಕ್ಯಾಂಪಿನ ಎಲ್ಲ ಶಿಬಿರಗಳನ್ನೂ ನೋಡಿಕೊಳ್ಳುವ, ನಿರ್ದೇಶಿಸುವ ಜವಾಬ್ದಾರಿ ಅವರದು. ಶಿಬಿರಾರ್ಥಿಗಳ ಯೋಗಕ್ಷೇಮವನ್ನು ಕ್ಯಾಂಪ್ ಲೀಡರುಗಳು ನೋಡಿಕೊಳ್ಳುತ್ತಿದ್ದರು. ಪ್ರಕೃತಿ ಅಧ್ಯಯನ ಶಿಬಿರಕ್ಕೆ ಬರುವ ಮಕ್ಕಳು ಕ್ಯಾಂಪ್ ಲೀಡರುಗಳನ್ನು ಅಲಕ್ಷಿಸಿ ಫೀಲ್ಡ್ ಡೈರೆಕ್ಟರ್ ಬಳಿಗೆ ಓಡೋಡಿ ಬರುವುದು ಅವರ ಅಸಮಾಧಾನಕ್ಕೆ ಕಾರಣವಾಗಿತ್ತು. ಇಂಥ ಒಂದು ಸಂದರ್ಭದಲ್ಲೇ ಬಂಗಾಳದ ಅರುಣ್ ಘೋಷ್ ನನ್ನ ಬಳಿ ಬಂದು, ''ಮೇಡಂ, ನಮ್ಮ ಫೀಲ್ಡ್ ಡೈರೆಕ್ಟರ್ ಅವರಿಗೆ ಅವಾರ್ಡ್ ಮೇಲೆ ಕಣ್ಣು ಬಿದ್ದಿದೆ ಅನ್ನಿಸುತ್ತೆ. ತುಂಬ ಅತಿಯಾಗಿ ಆಡ್ತಾರೆ'' ಅಂದ. ಅವನ ಮಾತನ್ನು ಕೇಳಿಯೂ ಕೇಳದವಳಂತೆ ಸುಮ್ಮನಿದ್ದೆ. ''ಏನಾದರೂ ಹೇಳಿ ಮೇಡಂ'' ಎಂದ ಮತ್ತೆ. ''ಏನ್ ಹೇಳ್ಬೇಕು ? ನಮ್ಮ ಎಫ್.ಡಿ. ತುಂಬ ಪ್ರಚಾರ ಬಯಸ್ತಿದಾರೆ. ಮಕ್ಕಳನ್ನೆಲ್ಲ ತಮ್ಮ ಕಡೆ ತಿರುಗಿಸ್ಕೊಂಡು ಬೆಸ್ಟ್ ಎಫ್.ಡಿ. ಅಂತ ಸರ್ಟಿಫಿಕೇಟ್ ತೊಗೋಬೇಕೂಂತಿದ್ದಾರೆ ನಿಮ್ಗೆ ಇದು ತಿಳೀತಿಲ್ವಾ ?'' ಎಂದು ಮತ್ತೆ ಅದನ್ನೇ ಹೇಳಿದ. ''ಇಲ್ಲಪ್ಪ, ನಂಗೆ ಖಂಡಿತ ಹಾಗನಿಸ್ತಿಲ್ಲ. ಮಕ್ಕಳು ಅವ್ರನ್ನ ತುಂಬ ಇಷ್ಟಪಡ್ತಾರೆ. ಇಷ್ಟಕ್ಕೂ ಅವರಿಗೆ ಬೆಸ್ಟ್ ಅವಾರ್ಡ್ ಸಿಕ್ಕರೂ ಅದು ನ್ಯಾಯವೇ. ಅದ್ರಲ್ಲೇನೂ ಮೋಸವಿಲ್ಲ ಬಿಡಿ'' ಎಂದೆ ನಾನು. ಅವನ ಮಾತಿಗೆ ಸೊಪ್ಪು ಹಾಕಲಿಲ್ಲ ಎಂದೋ ಏನೋ ಘೋಷ್ ಮತ್ತೇನೂ ಹೇಳದೆ ಅಲ್ಲಿಂದ ಜಾಗ ಖಾಲಿ ಮಾಡಿದ. ಮೆಹ್ತಾಜೀ ಕೂಡ ಮಕ್ಕಳನ್ನು ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದರು. ಅವರಿಗೆ ಪ್ರಶಸ್ತಿ ಬಂದರೆ ಇವರಿಗೇನು ? ತಮ್ಮ ಕೆಲಸ ತಾವು ನೋಡಿಕೊಂಡು ಹೋಗಬಾರದೇ, ಇಲ್ಲದ ಉಸಾಬರಿ ಯಾಕೆ ಇವರಿಗೆ ? ಎಂದೆಲ್ಲಾ ಯೋಚಿಸತೊಡಗಿದೆ. ಅಷ್ಟರಲ್ಲಿ ಮೆಹ್ತಾಜೀಯಿಂದ ಬುಲಾವ್ ಬಂತು.

ಮಕ್ಕಳು ಬರೆದಿದ್ದ ಪ್ರಬಂಧಗಳನ್ನು ಓದಿ ಮೌಲ್ಯಮಾಪನ ಮಾಡುತ್ತಿದ್ದ ನಾನು, ಅದನ್ನು ಅಲ್ಲಿಗೇ ನಿಲ್ಲಿಸಿ ಮೆಹ್ತಾಜೀ ಇದ್ದಲ್ಲಿಗೆ ಬಂದೆ. ''ಮೇಡಂ, ನೋಡಿ, ಈ ಮಗುವಿಗೆ ತುಂಬ ಜ್ವರ. ಅಕ್ಲಮಟೈಸೇಷನ್‌ನಿಂದ ವಾಪಸ್ ಬಂದಿದ್ದಾಳೆ. ಇವಳನ್ನು ಅವಳ ಜೊತೆಗಾರರ ಟೆಂಟಿನಲ್ಲಿ ಉಳಿಸೋದು ಬೇಡ. ನಿಮ್ಮೊಂದಿಗೆ ಇಟ್ಟುಕೊಳ್ಳುವಿರಾ ?'' ಎಂದು ಕೇಳಿದರು. ಹನ್ನೊಂದು ವರ್ಷದ ಆ ಮಗು ವಿಪರೀತ ಸುಸ್ತಾದಂತೆ ಕಂಡಳು. ಜ್ವರದಿಂದ ನಡಗುತ್ತಿದ್ದ ಅವಳ ಮುಖವನ್ನೊಮ್ಮೆ ದಿಟ್ಟಿಸಿದೆ. ಹಾಲು ಬಿಳುಪಿನ ಆಕರ್ಷಕ ಮುಖ ಅಲ್ಲಲ್ಲಿ ಕೆಂಪು ಕೆಂಪಾಗಿತ್ತು. ಮನಸ್ಸಿನಲ್ಲಿ ಏನೋ ಸಂದೇಹ ವಾದರೂ ತೋರಗೊಡದೆ, ''ಖಂಡಿತ. ನನ್ನ ಟೆಂಟಿನಲ್ಲೇ ಉಳಿಯಲಿ'' ಅಂದವಳೇ ಅವಳ ಕೈ ಹಿಡಿದು ಕರೆದುಕೊಂಡು ಹೋಗಿ ಬೆಚ್ಚನೆ ಹೊದಿಸಿ ಮಲಗಿಸಿದೆ. ಹುಡುಗಿ ವಿಪರೀತ ನಡುಗುತ್ತಿದ್ದಳು. ಸ್ವೆಟರ್, ಮಂಕಿಕ್ಯಾಪ್ ಹಾಕಿ ಬ್ಲಾಂಕೆಟ್ ಹೊದಿಸಿದರೂ ನಡುಕ ಕಡಿಮೆಯಾಗಲಿಲ್ಲ. ಮಧ್ಯೆ ಮಧ್ಯೆ, ''ಮಮ್ಮೀ... ಮಮ್ಮೀ'' ಎಂಬ ನೆನವರಿಕೆ. ''ನಿನ್ನ ಹೆಸರೇನು ಮಗು ?'' ಮೆಲ್ಲನೆ ಕೇಳಿದೆ. ''ಅಸಾವರಿ''. ''ಊಟ ಮಾಡಿದೆಯಾ ?'' ''ಹ್ಞೂಂ, ಸ್ವಲ್ಪ ಗಂಜಿ ಕುಡಿದೆ' ಎಂದಳು. ''ಮಾತ್ರೆ ಏನಾದರೂ ಕೊಡಲೇ ?'' ಇಂಥ ಸಂದರ್ಭಗಳಿಗೆಂದೇ ತಂದ ಔಷಧಿಗಳನ್ನು ತೆಗೆಯಲು ಹೋದೆ. ''ಬೇಡ ಆಂಟಿ, ಮಾತ್ರೆ ತೊಗೊಂಡೆ, ಮೆಹ್ತಾ ಸಾಬ್ ಕೊಟ್ಟರು'' ಎಂದಳು. ''ಸರಿ ಹಾಗಾದ್ರೆ ಮಲಗು, ನಾನೂ ಇಲ್ಲಿಗೇ ಬರ್ತೀನಿ ಒಂದೇ ನಿಮಿಷದಲ್ಲಿ'' ಎನ್ನುತ್ತಾ ರಿಸೆಪ್ಷನ್ ಕೌಂಟರಿನಲ್ಲಿ ಇಟ್ಟುಹೋಗಿದ್ದ ಪ್ರಬಂಧಗಳನ್ನೂ ಪೆನ್ನನ್ನೂ ತಂದು ಟೆಂಟಿನಲ್ಲಿಯೇ ಓದಲು ತೊಡಗಿದೆ.

ಆ ದಿನ ಪ್ರಬಂಧ ಸ್ಪರ್ಧೆಯಲ್ಲಿ ಭಾಗವಹಿಸಿದವರು ಮೂವತ್ತು ಮಂದಿಯಿದ್ದರು. ಉಳಿದ ದಿನಗಳಿಗೆ ಹೋಲಿಸಿದರೆ ಅದು ಜಾಸ್ತಿ ಸಂಖ್ಯೆ. ಇವುಗಳ ಮೌಲ್ಯಮಾಪನವಾದ ಮೇಲೆ ಡ್ರಾಯಿಂಗ್‌ನಲ್ಲಿ ಭಾಗವಹಿಸಿದ್ದವರ ಚಿತ್ರಗಳನ್ನು ನೋಡಬೇಕಿತ್ತು. ಅದೂ ಹೆಚ್ಚು ಕಡಿಮೆ ಇಷ್ಟೇ ಇತ್ತು. ಇವೆರಡನ್ನೂ ಸಂಜೆ ಏಳು ಗಂಟೆಯೊಳಗೆ ಮೌಲ್ಯಮಾಪನ ಮಾಡಲೇಬೇಕಿತ್ತು. ಯಾಕೆಂದರೆ ಬಹುಮಾನ ವಿಜೇತರ ಪಟ್ಟಿಯನ್ನು ಅಂದಂದಿನ 'ಶಿಬಿರ ಜ್ಯೋತಿ' ಕಾರ್ಯಕ್ರಮದಲ್ಲಿ ಪ್ರಕಟಿಸಿ, ಬಹುಮಾನ ನೀಡಬೇಕಾಗಿತ್ತು. ಹೈಯರ ಕ್ಯಾಂಪಿನಿಂದ ವಾಪಸಾದ ಮಕ್ಕಳು ಮಾತ್ರ ಇಷ್ಟವಿದ್ದವರು ಪ್ರಬಂಧ- ರಸಪ್ರಶ್ನೆ -ಡ್ರಾಯಿಂಗ್ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದರು. ಎಲ್ಲವೂ ಕೂಡ ನಿಸರ್ಗಕ್ಕೆ ಸಂಬಂಧಪಟ್ಟಂತೆ, ಚಾರಣದಲ್ಲಿ ಅವರು ಕಂಡ, ಅನುಭವಿಸಿದ, ಕಲಿತ ಸಂಗತಿಗಳ ಬಗ್ಗೆಯೇ ಬರೆಯಬೇಕಿತ್ತು. ಪ್ರತಿದಿನದ ಈ ಸ್ಪರ್ಧೆಗಳು, ಇವುಗಳ ಮೌಲ್ಯಮಾಪನ, ಬಹುಮಾನ ಹಂಚಿಕೆ – ಇವೆಲ್ಲದರ ಸಂಪೂರ್ಣ ಜವಾಬ್ದಾರಿ ನನ್ನದಾಗಿತ್ತು. ಈ ಕೆಲಸ ನನಗೆ ಅತ್ಯಂತ ಸಂತೋಷದಾಯಕವಾಗಿದ್ದರಿಂದ ಪುರುಸೊತ್ತಿಲ್ಲದೆ ನಿರ್ವಹಿಸುತ್ತಿದ್ದೆ. ಮಕ್ಕಳು ಇದರಲ್ಲಿ ಭಾಗವಹಿಸುವಾಗ ಕುತೂಹಲದಿಂದ ಗಮನಿಸುತ್ತಿದ್ದೆ. ಕೆಲವು ಮಕ್ಕಳು ನಿಜಕ್ಕೂ ಅತ್ಯಂತ ಪ್ರತಿಭಾವಂತರಿರುತ್ತಿದ್ದರು. ಅನೇಕ ಸಲ ಬಹುಮಾನಗಳನ್ನು ಎಷ್ಟು ಜನಕ್ಕೆ ಕೊಡಬೇಕೆಂಬ ಗೊಂದಲ ಮೂಡಿ ನಾಲ್ಕೈದು ಬಹುಮಾನಗಳನ್ನು ಹೆಚ್ಚಿಸುತ್ತಿದ್ದುದುಂಟು. ಬಹುಮಾನಕ್ಕೆಂದು ಉತ್ತಮ ಪುಸ್ತಕಗಳು ಇದ್ದವು. ಅವು ಕೂಡ ಪ್ರಕೃತಿ-ಪ್ರಾಣಿ-ಪಕ್ಷಿಗಳಿಗೆ ಸಂಬಂಧಿಸಿದ ಪುಸ್ತಕಗಳು.

ಪ್ರಬಂಧವನ್ನು ಓದುತ್ತಿದ್ದಂತೆಯೇ ಮತ್ತೆ ಮೆಹ್ತಾಜಿಯ ಕರೆ ಧ್ವನಿವರ್ಧಕದಲ್ಲಿ, ''ಕ್ಯಾಂಪಸ್ ಮೆ ಉಪಸ್ಥಿತ್ ಸಭಿ ಪ್ರತಿಭಾಗಿಯೋಮೆ ಮೇರಾ ನಮ್ರ ನಿವೇದನ್ ಹೈ, ಸಾಯಂ ಚಾಯ್ ಕೇಲಿಯೇ ಭೋಜನ್ ಕಕ್ಷ್ ಪರ್ ಆಯಿಯೇ!'' ಅರೆ! ಆಗಲೇ ನಾಲ್ಕೂವರೆ ಗಂಟೆ. ಅಸಾವರಿಯತ್ತ ಕಣ್ಣು ಹಾಯಿಸಿದೆ. ಮೈ ಮುದುರಿ ಮಲಗಿತ್ತು ಮಗು. ಬಳಿ ಸರಿದು ಹಣೆ ಮುಟ್ಟಿದೆ. ವಿಪರೀತ ಸುಡುತ್ತಿದೆ. ಮಧ್ಯಾಹ್ನ ನಾನು ಸಂದೇಹಿಸಿದ್ದು ನಿಜ ಆಗಿತ್ತು! ಹಾಗೆ ಅವಳಿಗೆ ಹೊದ್ದಿಸಿ ಹೊರಗೆ ಬಂದೆ. ಅಲ್ಲೇ ಮಾಮೂಲಿನಂತೆ ಹುಡುಗರ ಜೊತೆ ಚಹಾ ಕುಡಿಯುತ್ತಾ ಮಾತನಾಡುತ್ತಾ ನಿಂತಿದ್ದ ಮೆಹತಾ ಕಾಣಿಸಿದರು. ಅವರ ಬಳಿ ಬಂದು ''ಮೆಹತಾಜಿ ಅಸಾವರಿಗೆ ಚಿಕನ್‌ಪಾಕ್ಸ್ ಆಗಿರುವಂತಿದೆ. ಮೈ ಮುಖವೆಲ್ಲ ಕಾಣಿಸಿಕೊಂಡಿದೆ, ಅವಳನ್ನು ನಾಳೆ ಹೈಯರ್ ಕ್ಯಾಂಪಿಗೆ ಕಳಿಸುವುದು ಬೇಡ. ಇಲ್ಲೇ ಇರಲಿ'' ಎಂದು ಹೇಳಿದೆ. ''ಹೌದು ಮೇಡಂ, ನಾನೂ ಅದನ್ನೇ ಯೋಚಿಸುತ್ತಿದ್ದೆ. ಅವಳ ಎಸ್ಕಾರ್ಟ್ ಜೊತೆ ಮಾತನಾಡುತ್ತೇನೆ. ಅವಳನ್ನು ನೀವು ನೋಡಿಕೊಳ್ಳಿ'' ಎಂದರು.

ಟೆಂಟಿಗೆ ಹಿಂದಿರುಗಿ ಮತ್ತೆ ನನ್ನ ಕೆಲಸ ಆರಂಭಿಸಿದೆ. ''ಮಮ್ಮೀ...'' ಮುಲುಗುಟ್ಟುತ್ತಿದ್ದಳು ಅಸಾವರಿ. ಪಾಪ ! ಸಂತೋಷದಿಂದ ಕಾಲ ಕಳೆಯಬಂದು ಹೀಗಾಯಿತಲ್ಲಾ ಎಂದು ಹಲುಬಿದೆ. ಹೊರಗೆ ಅವಳ ಗುಂಪಿನ ಮಕ್ಕಳು ಷಟಲ್ ಆಡುವುದರಲ್ಲಿ, ರಾತ್ರಿ ಶಿಬಿರ ಜ್ಯೋತಿಯಲ್ಲಿ ಏನೇನು ಕಾರ್ಯಕ್ರಮ ನೀಡಬೇಕೆಂಬುದರಲ್ಲಿ ಪರಸ್ಪರ ಚರ್ಚೆಯಲ್ಲಿ ತೊಡಗಿದ್ದರು. ಅವಳ ಒಂದಿಬ್ಬರು ಗೆಳತಿಯರು ಬಂದು ಅವಳನ್ನು ನೋಡಿಕೊಂಡು ಹೋದರು. ಅಹಮದಾಬಾದ್‌ನಿಂದ ಅವಳ ಗುಂಪನ್ನು ಕರೆತಂದಿದ್ದ ಎಸ್ಕಾರ್ಟ್ಸ್ ಇಬ್ಬರು ಬಂದು ''ಮೇಡಂ, ನಾವು ಟ್ರೇನಿನಲ್ಲಿ ಇಲ್ಲಿಗೆ ಬರುವಾಗ ಇವಳ ಪಕ್ಕದಲ್ಲಿ ಕುಳಿತಿದ್ದ ಚಿಕ್ಕ ಮಗುವಿಗೆ ಚಿಕನ್‌ಪಾಕ್ಸ್ ಆಗಿತ್ತು. ಇವಳಿಗೂ ಸೋಂಕು ತಗುಲಿದೆ. ಹೈಯರ್ ಕ್ಯಾಂಪಿಗೆ ಬೇಡ. ಇವಳು ಇಲ್ಲೇ ರೆಸ್ಟ್ ತೆಗೆದುಕೊಳ್ಳಲಿ. ಮನೆಗೆ ಫೋನ್ ಮಾಡ್ತೇವೆ'' ಎಂದು ಅವಳಿಗೆ ಕೊಡಬೇಕಾದ ಔಷಧಿಗಳನ್ನು ನನ್ನ ಕೈಲಿ ಕೊಟ್ಟು ಹೋದರು. ಆಗಾಗ ಅವಳ ಬಾಯಿಂದ ಹೊರಡುತ್ತಿದ್ದ 'ಮಮ್ಮೀ' ಎಂಬ ಕರೆ ನನ್ನ ಮನಸ್ಸನ್ನು ಕಲಕುತ್ತಿತ್ತು. ಮುಟ್ಟಿ ನೋಡಿದರೆ ಮಗು ಜ್ವರದಿಂದ ಬೇಯುತ್ತಿದ್ದಳು. ತಡೆಯಲಾರದೆ ಕರ್ಚೀಫನ್ನು ಒದ್ದೆ ಮಾಡಿ ತಂದು

ಹಣೆಯ ಮೇಲಿಟ್ಟೆ. ತಣ್ಣಗಾಗಿದ್ದಕ್ಕೋ ಏನೋ ಒಮ್ಮೆ ಬೆಚ್ಚಿದಳು. ಅಷ್ಟು ಹೊತ್ತಿಗೆ ಮತ್ತೊಮ್ಮೆ ಧ್ವನಿವರ್ಧಕದಲ್ಲಿ ಊಟಕ್ಕೆ ಕರೆ. ನನ್ನ ಕೆಲಸವೂ ಮುಗಿಯುತ್ತಾ ಬಂದು, ಬಹುಮಾನ ವಿಜೇತರ ಪಟ್ಟಿ ಮಾಡುವುದಷ್ಟೇ ಉಳಿದಿತ್ತು. ಸರಸರನೆ ಅದನ್ನೂ ಮುಗಿಸಿ ಅಡುಗೆ ಮನೆಯ ಕಡೆಗೆ ಓಡಿದೆ. ಅಸಾವರಿಗೆ ಕುಡಿಯಲು ಬಿಸಿ ನೀರು, ಊಟಕ್ಕೆ ಗಂಜಿ ಬೇಕಿತ್ತು. ಮಕ್ಕಳೆಲ್ಲ ಊಟ ಮುಗಿಸಿ ರಾತ್ರಿಯ ಕ್ಯಾಂಪ್ ಫೈರ್‌ಗೆ ಅಣಿಯಾಗುತ್ತಿದ್ದರು. ''ಮೇಡಂ, ಫಿಲಂ ಸಾಂಗ್‌ಗೆ ಡ್ಯಾನ್ಸ್ ಮಾಡಬಹುದಾ ?'' ಒಬ್ಬ ಹುಡುಗ ಕೇಳಿದ. ''ಖಂಡಿತ ಇಲ್ಲಾ, ಓರಿಯಂಟೇಶನ್‌ನಲ್ಲಿ ನೀವು ಕೇಳಲಿಲ್ಲವಾ ? ಕೇವಲ ದೇಶಭಕ್ತಿ ಗೀತೆ-ಜನಪದ ಗೀತೆ, ಭಾವಗೀತೆಗಳನ್ನಷ್ಟೇ ಹಾಡಬಹುದು'' ಎಂದೆ. ಆತ ಸಪ್ಪಗೆ ಮುಖಮಾಡಿಕೊಂಡು ಹೋದ. ಪಕ್ಕದಲ್ಲೇ ಇದ್ದ ಪ್ರದೀಪ್ ವರ್ಮ, ''ಮೇಡಂ, ಅವ್ರಿಗೆ ಯಾವ್ದು ಖುಷಿ ಅನಿಸಿತ್ತೋ ಅದನ್ನು ಮಾಡ್ಲಿ ಬಿಡಿ. ನೀವ್ಯಾಕೆ ಬೇಡ ಅಂತೀರಿ'' ಅಂದ. ''ನೋ ನೋ ಫಿಲಂ ಸಾಂಗ್ಸ್ ಬೇಡ. ಇಲ್ಲಿ ಅಲೋ ಮಾಡೋಲ್ಲ ಅಂತ ನಿಮಗೂ ಗೊತ್ತು'' ಹಿಂದಿನಿಂದ ಮೆಹತಾ ಧ್ವನಿಗೂಡಿಸಿದರು. ಅವರ ಮಾತಿಗೆ ಸಿಲುಕದೆ ನಾನು ಗಂಜಿ-ಬಿಸಿ ನೀರು ತೆಗೆದುಕೊಂಡು ಟೆಂಟಿಗೆ ಬಂದೆ. ''ಊಟ ಮಾಡಿ ಹೋಗಿ ಮೇಡಂ'' ಎಂದ ಗೋಪಾಲ್‌ಗೆ 'ಹಸಿವಿಲ್ಲ' ಎಂದೆ. ನಿಜಕ್ಕೂ ಆ ದಿನ ನನಗೆ ಊಟ ಮಾಡುವ ಮನಸ್ಸಿರಲಿಲ್ಲ.

ಅಸಾವರಿಯನ್ನು ಮೆಲ್ಲಗೆ ಏಳಿಸಿ, ಸ್ವಲ್ಪ ಸ್ವಲ್ಪವೇ ಗಂಜಿ ಕುಡಿಸಿ, ಮಾತ್ರೆ ಕೊಟ್ಟು ಮಲಗಿಸಿದೆ. ''ಟಾಯ್ಲೆಟ್‌ಗೆ ಹೋಗಬೇಕಾದರೆ ಹೇಳು'' ಎಂದೆ.

ಆ ದಿನ ಕ್ಯಾಂಪ್ ಫೈರ್‌ನಲ್ಲಿ ಭಾಗವಹಿಸಲು ಮನಸ್ಸಾಗಲಿಲ್ಲ. ಜೊತೆಗೆ ಆ ಮಗುವನ್ನು ಒಂಟಿಯಾಗಿ ಬಿಟ್ಟು ಹೋಗಲಾರದೆ ಟೆಂಟಿನಲ್ಲಿಯೇ ಉಳಿದೆ. ಕ್ಯಾಂಪ್ ಫೈರ್‌ನ ಎಲ್ಲ ಕಾರ್ಯಕ್ರಮಗಳೂ ಜೋರಾಗಿ ಕೇಳಿಸುತ್ತಿದ್ದುವು. ಆ ದಿನ ಸ್ಥಳೀಯ ವ್ಯಕ್ತಿಯೊಬ್ಬರನ್ನು ಮುಖ್ಯ ಅತಿಥಿಗಳಾಗಿ ಆಹ್ವಾನಿಸಲಾಗಿತ್ತು. ಸ್ವಾಗತ, ಬಹುಮಾನ ವಿತರಣೆ ಮುಗಿದು ಸಾಂಸ್ಕೃತಿಕ ಕಾರ್ಯಕ್ರಮಗಳು ಆರಂಭವಾದವು. ಕಾರ್ಯಕ್ರಮಗಳನ್ನು ನಿರೂಪಿಸುತ್ತಿದ್ದವರು ಆ ದಿನದ ಮಾಸ್ಟರ್ ಆಫ್ ಸೆರಮನಿ ಆಗಿದ್ದ ನಿಪುಣ್ ಕಾಕಡೆ.

ಮಕ್ಕಳ ಹಾಡು, ನಗೆ ಚಟಾಕಿಗಳು, ಧ್ವನಿವರ್ಧಕದಿಂದ ಜೋರಾಗಿ ಕೇಳಿಬರುತ್ತಿದ್ದವು. ಅಸಾವರಿ ತಡೆಯಲಾಗದೆ ''ಮೇಡಂ ಅಲ್ಲೇ ಹೋಗಿ ಕುಳಿತುಕೊಳ್ಳೋಣ ನಾನೂ ನೋಡ್ತೀನಿ'' ಎಂದಳು. ''ಬೇಡವೇ ಬೇಡ, ಗಾಳಿಯಲ್ಲಿ ನಿನಗೆ ಮತ್ತೂ ಜಾಸ್ತಿ ಥಂಡಿಯಾಗುತ್ತೆ ಸುಮ್ಮನೆ ಮಲಗು'' ಎಂದೆ. ನಾನೇನೋ ಹಾಗೆಂದೆ. ಆದರೆ ಅವಳಿಗೆ ಏನನಿಸಿರಬಹುದು ? ತನ್ನ ಓರಗೆಯವರು ಹೀಗೆ ಹಾಡುತ್ತಾ ಕುಣಿಯುತ್ತಿದ್ದಾಗ...? ಯಾರೋ ಹಾರಿಸಿದ ನಗೆ ಚಟಾಕಿಗೆ ಎಲ್ಲರೂ ಬಿದ್ದು ಬಿದ್ದು ನಗುವ ಸದ್ದು ಕೇಳಿ ಬಂತು. ''ಯಾರೋ ಜೋಕ್ಸ್ ಹೇಳ್ತಿದ್ದಾರೆ ಅಲ್ವಾ'' ಆ ಸ್ಥಿತಿಯಲ್ಲೂ ಅಸಾವರಿ ನಕ್ಕಳು, ''ಅಪ್ನಾ ಅಪ್ನಾ ಬೋರ್ನ್‌ವಿಟಾ ಮಗ್ ಲೇ ಲೇ'' ಎಂದಾಗಲೇ ಕಾರ್ಯಕ್ರಮಗಳು ಮುಕ್ತಾಯವಾದವು ಎಂದುಕೊಂಡೆ.

ಮಕ್ಕಳೆಲ್ಲರು ತಂತಮ್ಮ ಟೆಂಟಿನೊಳಗಡೆ ಹೊಕ್ಕು ಸ್ವಲ್ಪ ಹೊತ್ತಿಗೇ ಲೈಟ್ಸ್ ಆಫ್ ಆಯಿತು. ಗಂಟೆ ಹತ್ತಾಯಿತು ಎನ್ನುವ ಸೂಚನೆ ಅದು. ದೀಪ ಆರಿದರೂ ಟೆಂಟಿನೊಳಗೆ ಮಕ್ಕಳ ಹರಟೆ-ನಗು ಇನ್ನೂ ಆರಿರಲಿಲ್ಲ. ನಮ್ಮ ಟೆಂಟಿನಲ್ಲಿ ಮಾತ್ರ ಮೌನ. ಸ್ವಲ್ಪ ಹೊತ್ತಾದ ಮೇಲೆ ''ಆಂಟಿ'' ಎಂದು ಯಾರೋ ಕರೆದಂತಾಯಿತು. ''ಯಾರು ?'' ಎಂದೆ. ''ನಾನು ಆಂಟಿ, ನಿಮಗೆ ನಿದ್ದೆ ಬಂತಾ ?'' ಅದು ಅಸಾವರಿ ಧ್ವನಿ. ''ಇಲ್ಲ, ನಿನಗೆ ?'' ''ಇಲ್ಲ'' ''ನೀರೇನಾದ್ರೂ ಕುಡಿಯಲು ಬೇಕಾ ?'' ಕೇಳಿದೆ. ''ಬೇಡಾ'' ಅಂದಳು. ಅವಳು ಏನನ್ನೋ ಕೇಳಲು ಯತ್ನಿಸುತ್ತಿದ್ದಾಳಾ ಅನ್ನಿಸಿತು. ''ಏನು ಬೇಕು ಮಗೂ ?'' ''ನಾಳೆ ನಾನು ಹೈಯರ್ ಕ್ಯಾಂಪಿಗೆ ಹೋಗಬಾರದೆ'' ನಿಧಾನವಾಗಿ ಕೇಳಲೋ ಬೇಡವೋ ಎಂಬಂತೆ ಕೇಳಿದಳು. ''ಬೇಡ ಮರಿ, ನಿನ್ಗೆ ಚಿಕನ್‌ಪಾಕ್ಸ್ ಆಗಿದೆ. ಅಲ್ಲೆಲ್ಲ ಓಡಾಡಿದರೆ ಸುಧಾರಿಸುವುದು ಕಷ್ಟ. ಜೊತೆಗೆ ಎಲ್ಲರಿಗೂ ತೊಂದರೆ. ನಿನಗೆ ಹೋಗಲೇಬೇಕಿದ್ದರೆ ಮುಂದಿನ ವರ್ಷ ಬರುವಿಯಂತೆ'' ಎಂದು ಸಮಾಧಾನಮಾಡಿದೆ. ಅವಳಿಂದ ನಿಟ್ಟುಸಿರು ಹೊರಬಿದ್ದದ್ದು ಕತ್ತಲೆಯಲ್ಲೂ ನನ್ನ ಅರಿವಿಗೆ ಬಂತು. ''ಆಂಟೀ, ನಿಮ್ಮನೇಲಿ ಎಷ್ಟು ಜನ ಇದ್ದೀರಿ ?'' ಇದ್ದಕ್ಕಿದ್ದಂತೆ ಅವಳಿಂದ ಬಂದ ಪ್ರಶ್ನೆ ನನಗೆ ಆಶ್ಚರ್ಯ ಹುಟ್ಟಿಸಿತು. ''ಯಾಕೆ ಮಗೂ ?'' ''ನಿಮ್ಗೆ ಮಕ್ಕಳಿದ್ದಾರಾ ಅಂತ ತಿಳ್ಕೊಳೋಕೆ''. ''ಇದ್ದಾರೆ. ಇಬ್ಬರು'', ''ಮಗಾನಾ, ಮಗಳಾ ?'', ''ಇಬ್ಬರೂ ಒಬ್ಬೊಬ್ಬರು'' ಅವಳು ನನ್ನ ವೈಯಕ್ತಿಕ ಬದುಕಿನ ಬಗ್ಗೆ ಪ್ರಶ್ನೆ ಮಾಡತೊಡಗಿ ಸುಮ್ಮನಾದಳು. ರಾತ್ರಿ ಬಹಳ ಹೊತ್ತು ನನಗೆ ನಿದ್ದೆಯೇ ಬರಲಿಲ್ಲ.

ಬೆಳಗ್ಗೆ ಟೆಂಟಿನ ಮುಂದೆ ನಿಂತು ಗೋಪಾಲ್ ''ಮೇಡಂ ಬೆಡ್ ಟೀ'' ಎಂದಾಗಲೇ ಎಚ್ಚರ. ಮಾರ್ನಿಂಗ್ ಎಕ್ಸರ್‌ಸೈಜ್‌ಗೆ ಹೋಗಲು ಅಣಿಯಾಗಿ ಮಕ್ಕಳು ಶಿಸ್ತಿನಿಂದ ಓಡುತ್ತಿದ್ದರು. ಬಿಯಾಸ್ ನದಿಯ ದಂಡೆಯ ಒಂದು ಪ್ರಾಥಮಿಕ ಶಾಲಾ ಆವರಣ ನಮ್ಮ ವ್ಯಾಯಾಮ ಸ್ಥಳ. [illegible] ಹೋಗುವ ಮಕ್ಕಳೂ ದೈಹಿಕ ಸಾಮರ್ಥ್ಯ ಹೆಚ್ಚಿಸಿಕೊಳ್ಳಲು ಇದು ಅಗತ್ಯವೂ ಹೌದು. ಕೈ-ಕಾಲು-ಕತ್ತು-ಸೊಂಟ ಮಂಡಿ-ಬೆರಳು ಹೀಗೆ ದೇಹದ ಎಲ್ಲ ಅಂಗಗಳಿಗೂ ಇನ್‌ಸ್ಪೆಕ್ಟರ್ ಸುಭಾಷ್ ವ್ಯಾಯಾಮ ಹೇಳಿಕೊಡುತ್ತಿದ್ದ. ಸುಭಾಷ್ ಇದರಲ್ಲಿ ಪಳಗಿದ್ದ. ವ್ಯಾಯಾಮ ಮುಗಿಸಿ ಹಿಂತಿರುಗುವಾಗ ದಾರಿಯಲ್ಲಿದ್ದ ಪ್ರತಿಯೊಂದು ಮರ-ಗಿಡವನ್ನೂ ಪರಿಚಯ ಮಾಡುತ್ತಿದ್ದ. ಇದು ಮಕ್ಕಳಿಗೆ ಪ್ರಕೃತಿ ಅಧ್ಯಯನದ ಮೊದಲ ಪಾಠವಾಗಿತ್ತು. ಅವನು ಹೇಳುವುದನ್ನು ಮಕ್ಕಳು ತನ್ಮಯತೆಯಿಂದ ಕೇಳುತ್ತಿದ್ದರು. ವ್ಯಾಯಾಮದ ನಂತರ ಶಿಬಿರಾರ್ಥಿಗಳಿಂದ ಕ್ಯಾಂಪಸ್ ಕ್ಲೀನಿಂಗ್ ಕಾರ್ಯಕ್ರಮ. ಟೆಂಟಿನ ಸುತ್ತಮುತ್ತಲ ಆವರಣದಲ್ಲಿದ್ದ ಪೇಪರ್, ಪ್ಲಾಸ್ಟಿಕ್ ಕವರು ಇತ್ಯಾದಿಗಳನ್ನು ಹೆಕ್ಕಿ ತೆಗೆದು ಕಸದ ತೊಟ್ಟಿಯಲ್ಲಿ ಹಾಕಬೇಕಾಗಿತ್ತು. ಇದೆಲ್ಲ ಆದ ನಂತರ ಏಳೂವರೆಗೆ ಬೆಳಗಿನ ತಿಂಡಿ, ಸಾಲಾಗಿ ಪ್ಲೇಟು ಹಿಡಿದು ನಿಂತ ಮಕ್ಕಳಿಗೆ ಬಡಿಸುವುದು ಇನ್ನಿಲ್ಲದ ಆನಂದ ಉಂಟುಮಾಡುತ್ತಿತ್ತು. ಆ ದಿನ ಹೈಯರ್ ಕ್ಯಾಂಪಿಗೆ ಹೋಗುವ ಮಕ್ಕಳಿಗೆ ಸಿಹಿ ಹಂಚಿ, ಧ್ವಜ ಹಾರಿಸಿ 'ಸೀ ಆಫ್' ಮಾಡಿ ವಾಪಸ್ ಟೆಂಟಿಗೆ ಬಂದಾಗ ಅಸಾವರಿ ಇನ್ನೂ ಎದ್ದಿರಲೇ ಇಲ್ಲ. ಬ್ಲಾಂಕೆಟ್ ಪೂರ್ತಿ ಕವುಚಿಕೊಂಡಿದ್ದಳು. ಮುಟ್ಟಿದೆ. ಹೊರಳಾಡಿದಳೇ ಹೊರತು ಏಳುವ ಸೂಚನೆ ಕಾಣಲಿಲ್ಲ. ''ಅಸಾವರಿ'' ಮೆಲ್ಲನೆ ಕರೆದೆ. ''ಏಳು ಮರಿ ಹೊತ್ತಾಗಿದೆ. ಮುಖ ತೊಳೆದು ಏನನ್ನಾದರೂ ಹೊಟ್ಟೆಗೆ ತೆಗೆದುಕೋ'' ಎಂದೆ. ಮೆಲ್ಲನೆ ಕಣ್ಣು ತೆರೆದಳು. ''ಆಂಟಿಜೀ, ಈಗ ಸಮಯವೆಷ್ಟು ?'' ಕೇಳಿದಳು. ''ಎಂಟೂವರೆಯಾಗಿದೆ'' ಎಂದೆ. ''ಬ್ರಷ್ ಮಾಡಿ ಮುಖ ತೊಳೆದು ಬಾ'' ಎಂದಿದ್ದಕ್ಕೆ ''ಆಂಟೀಜಿ ನೀವು ನನ್ನೊಡನೆ ಬರುವಿರಾ ?'' ಎಂದು ದೈನ್ಯದಿಂದ ಕೇಳಿದಳು.''ನಡಿ'' ಎನ್ನುತ್ತಾ ಅವಳ ಜೊತೆ ಹೊರಟೆ.

ಅಹಮದಾಬಾದಿನಲ್ಲಿ ಅಸಾವರಿಯ ಅಪ್ಪ, ಅಮ್ಮ, ಇಬ್ಬರೂ ವೈದ್ಯರಾಗಿದ್ದರು. ಒಬ್ಬನೇ ಅಣ್ಣ ಪ್ಲಸ್ ಟೂ ಓದುತ್ತಿದ್ದ. ''ಅವನೂ ಇಲ್ಲಿಗೆ ಬರುವವನಿದ್ದ. ಅದೇ ವೇಳೆಗೆ ಚಿಕ್ಕಪ್ಪ ಸ್ವಿಟ್ಸರ್ಲೆಂಡಿನಿಂದ ಬಂದಿದ್ದರಿಂದ ಅವರ ಜೊತೆ ಹೋದ. ನಾನು ಇಲ್ಲಿಗೆ ಫ್ರೆಂಡ್ಸ್ ಜೊತೆ ಬಂದೆ'' ಅಂದಳು. ಆರನೇ ತರಗತಿಯಲ್ಲಿ ಕಲಿಯುತ್ತಿರುವುದಾಗಿ ಹೇಳಿದಳು. ಅವಳ ಮಾತೂ ಕೂಡ ಕೇಳಲು ಅಷ್ಟೇ ಆಕರ್ಷಕವಾಗಿತ್ತು. ''ನಿನಗೆ ಅಸಾವರಿ ಅಂತ ಯಾರು ಹೆಸರಿಟ್ಟದ್ದು? ಹಾಗೆಂದರೇನು ಅಂತ ಗೊತ್ತಾ ?'' ಕೇಳಿದೆ. ''ಗೊತ್ತು, ಅದೊಂದು ರಾಗದ ಹೆಸರು. ಮಮ್ಮಿಗೆ ಸಂಗೀತ ತುಂಬಾ ಇಷ್ಟ. ಅದಕ್ಕೇ ಆ ಹೆಸರಿಟ್ಟರು.'' ''ಸಂಗೀತ ನಿನಗೂ ಇಷ್ಟವೇ ?'' ''ಹೌದು ಆಂಟಿಜೀ, ನಾನು ಕಲೀತಿದ್ದೀನಿ, ಹಾಡ್ತೀನಿ'' ಎಂದಳು. ಜ್ವರದಿಂದ ಬಳಲುತ್ತಿದ್ದ ಅವಳ ಮುಖವನ್ನೇ ನೋಡುತ್ತಿದ್ದ ನನಗೆ 'ಹಾಡು' ಎನ್ನಲು ಮನಸ್ಸಾಗಲಿಲ್ಲ.

''ಮೇಡಂ'' ಎಂದು ಯಾರೋ ಕರೆದಂತಾಯಿತು. ಟೆಂಟಿನ ಹೊರಗೆ ಬಂದು ನೋಡಿದೆ. ಮೆಹ್ತಾಜೀ ನಿಂತಿದ್ದರು. ''ಆ ಮಗುವಿನ ಮನೆಗೆ ವಿಷಯ ತಿಳಿಸಿ ಫೋನ್ ಮಾಡಿದ್ದೇನೆ. ಅವರ ತಂದೆ ಬಂದು ಕರೆದೊಯ್ಯುತ್ತಾರೆ. ಅಲ್ಲಿಯ ತನಕ ನಿಮ್ಮ ಸುಪರ್ದಿನಲ್ಲೇ ಇರಲಿ'' ಎಂದರು. ಒಳಗೆ ಬಂದು ಅಸಾವರಿಗೆ ಅವಳ ತಂದೆ ಬರುವ ಸುದ್ದಿ ತಿಳಿಸಿ ''ನಾಳೆ ನೀನು ಹೊರಡಬೇಕಾಗುತ್ತದೆ'' ಎಂದೆ. ಮುಖ ಸಪ್ಪಗೆ ಮಾಡಿಕೊಂಡಳು.

ಮಾರನೆಯ ದಿನ ಅವಳ ತಂದೆ ಬಂದು, ಮಗಳನ್ನು ನೋಡಿಕೊಂಡಿದ್ದಕ್ಕೆ ಥ್ಯಾಂಕ್ಸ್ ಹೇಳಿ, ಕೈ ಹಿಡಿದು ಕರೆದೊಯ್ಯುತ್ತಿದ್ದಾಗ ದಿಢೀರನೆ ಬಂದವಳೇ, ''ಆಂಟೀ ನನಗೆ ನಿಮ್ಮ ವಿಳಾಸ, ಫೋನ್ ನಂಬರ್ ಕೊಡಿ'' ಎಂದು ಕೇಳಿದಳು. ''ಪತ್ರ ಬರೀತೀಯ ?'' ಎಂದೆ. ಅವಳು ಮಾತಾಡಲಿಲ್ಲ. ಎಷ್ಟೋ ಮಕ್ಕಳು ಊರಿಗೆ ಹಿಂತಿರುಗುವಾಗ ಶ್ರದ್ಧೆಯಿಂದ ಹೀಗೆ ವಿಳಾಸ, ಫೋನ್ ನಂಬರ್ ತೆಗೆದುಕೊಳ್ಳುತ್ತಿದ್ದರು. ಆದರೆ, ಯಾವತ್ತೋ ಒಂದು ಗ್ರೀಟಿಂಗ್ ಕಳಿಸಿದ್ದನ್ನು ಬಿಟ್ಟರೆ ಉಳಿದಂತೆ ನೆನಪೇ ಬರುತ್ತಿರಲಿಲ್ಲ. ಇದು ಹಾಗೆಯೇ ಅಂದುಕೊಳ್ಳುತ್ತಲೇ ಅವಳಿಗೆ ನನ್ನ ಫೋನ್ ನಂಬರ್ ಬರೆದುಕೊಟ್ಟೆ. ಅದನ್ನು ಪಡೆದು ಅವಳ ತಂದೆಯೊಡನೆ ಕಾರು ಹತ್ತಿ ಹೋಗುವಾಗ ನನ್ನ ಕಣ್ಣುಗಳು ಅವಳನ್ನೇ ಹಿಂಬಾಲಿಸಿದವು.

ಇದಾದ ಮೂರು ವರ್ಷಗಳ ನಂತರ ಇದ್ದಕ್ಕಿದ್ದಂತೆ ನನಗೆ ಅಚ್ಚರಿಯಾಗುವಂತೆ ಅಸಾವರಿ ಫೋನ್ ಮಾಡಿದ್ದಳು. ''ಹೇಗಿದ್ದೀರಿ ಆಂಟಿಜೀ, ನನ್ನ ನೆನಪು ಇದೆಯಾ ? ನಾನು ನಿಮ್ಮನ್ನು ಮರೆತಿಲ್ಲ. ನಾನೀಗ ಸ್ವಿಟ್ಸರ್ಲೆಂಡಿನಲ್ಲಿ ಚಿಕ್ಕಪ್ಪನ ಮನೆಯಲ್ಲಿ ಓದುತ್ತಿದ್ದೇನೆ. ಮುಂದಿನ ವರ್ಷ ಇಂಡಿಯಾಕ್ಕೆ ಬಂದಾಗ ಟ್ರೆಕ್ಕಿಂಗ್‌ಗೆ ಬರ್ತೀನಿ. ನೀವೂ ಬರುತ್ತೀರಿ ತಾನೇ ? ಅಲ್ಲಿ ಭೇಟಿಯಾಗೋಣ, ಬಾಯ್'' ಎನ್ನುತ್ತಾ ನಾನು ಉತ್ತರಿಸುವುದಕ್ಕೂ ಮುನ್ನ ಫೋನ್ ಇಟ್ಟುಬಿಟ್ಟಿದ್ದಳು. ನಾನು ಒಂದು ಕ್ಷಣ ಸ್ತಂಭಿತಳಾದೆ. ಆದರೆ ನಿಧಾನವಾಗಿ ಟೆಂಟಿನಲ್ಲಿ ಚಿಕನ್‌ಪಾಕ್ಸ್ ಆಗಿ ಚಳಿ ಜ್ವರದಿಂದ ಮುದುರಿ ಮಲಗಿದ್ದ ಅಸಾವರಿಯ ಆಕರ್ಷಕ ಮುಖ ಕಣ್ಣು ಮುಂದೆ ಸುಳಿದಾಡಿತು.

ಬಿ. ಎಸ್. ನಾಗರತ್ನಕುಮಾರಿ
ನಂ. ೨೨೨, ಒಂದನೇ ಮುಖ್ಯರಸ್ತೆ, ಬಾಪೂಜಿ ಬಡಾವಣೆ, ಬೋಗಾದಿ, ಮೈಸೂರು - ೫೭೦ ೦೦೬

ಯಾವುದೇ ಸಮಾಜದಲ್ಲಾಗಲಿ, ಅಲ್ಲಿನ ಅಭಿವೃದ್ಧಿಯ ಮುಖ್ಯ ಸೂಚಕವೆಂದರೆ ಮಹಿಳೆಯರ ಸ್ಥಾನಮಾನ. ಸಮಾಜದ ಅರ್ಧದಷ್ಟು ಜನಸಂಖ್ಯೆಯಿರುವ ಮಹಿಳೆಯರು ಅಮೂಲ್ಯ ಮಾನವ ಸಂಪನ್ಮೂಲ. ದೇಶದ ಸರ್ವಾಂಗೀಣ ಪ್ರಗತಿಗಾಗಿ, ಗೃಹಿಣಿಯರಾಗಿ, ಭಾವಿ ಪ್ರಜೆಗಳನ್ನು ಹೊತ್ತು, ಹೆತ್ತು, ಬೆಳೆಸುವ ತಾಯಂದಿರಾಗಿ ಮಹಿಳೆಯರು ಸಲ್ಲಿಸುತ್ತಿರುವ ಸೇವೆ ಅತೀ ದೊಡ್ಡದು ಹಾಗೂ ಅಮೋಘವಾದುದು. ಆದ್ದರಿಂದಲೇ ಅವರನ್ನು ಹಾಗೂ ಅವರ ಶಕ್ತಿಯನ್ನು ಗುರುತಿಸಿ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುವ ಅವಶ್ಯಕತೆ ಇದೆ. ಇದರಲ್ಲಿ ಅವರ ಪ್ರಗತಿ ಮಾತ್ರವಲ್ಲದೆ, ದೇಶದ ಪ್ರಗತಿಯೂ ಸಹ ಅಡಕವಾಗಿದೆ. ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಯಶಸ್ಸು ಗಳಿಸಿರುವ ಮಹಿಳೆಯರನ್ನು ಇಂದೂ ಸಹ ಅವಕಾಶಗಳಿಂದ ವಂಚಿತಗೊಳಿಸುವ ವ್ಯವಸ್ಥಿತ ಪ್ರಯತ್ನ ನಡೆಯುತ್ತಿದೆ.

**ಡಾ|| ಆಂಜನಪ್ಪ ಬಿ. ಎಚ್.**

# ಭಾರತದ ಆರ್ಥಿಕತೆಯಲ್ಲಿ ಮಹಿಳೆ



ನಮ್ಮ ಮುಂದಿರುವ ಇತಿಹಾಸ ಬೇಟೆ, ಯುದ್ಧ, ದಿಗ್ವಿಜಯ, ರಾಜ್ಯವಿಸ್ತರಣೆ, ಸೃಜನ ಪರಂಪರೆಯಂತಹ ಪುರುಷನ ಯಶೋಗಾಥೆ ಹಾಗೂ ಅವರ ಅನುಭವಗಳನ್ನು ಮಹತ್ವೀಕರಿಸುವ ದಾಖಲೆಯೇ ಆಗಿದೆ. ಈ ನಿಲುವು ಪುರುಷನ ಚಟುವಟಿಕೆಗಳನ್ನು, ಕ್ರಿಯೆಗಳನ್ನು ಮುಖ್ಯ ಎಂದು ಗ್ರಹಿಸುವುದರಿಂದ ಹೆಣ್ಣಿನ ಗರ್ಭಧಾರಣೆ, ತಾಯ್ತನ, ಪಾಲನೆ-ಪೋಷಣೆ, ಲೈಂಗಿಕತೆಗಳಂತಹ ಚಟುವಟಿಕೆಗಳನ್ನು ಕ್ರಿಯೆಗಳನ್ನು ಅಮುಖ್ಯವಾಗಿ ಕಂಡಿದೆ; ಅಥವಾ ತೀರಾ ಸಾಮಾನ್ಯ ಎಂದು ನಿರಾಕರಿಸಲಾಗಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದು ೬೦ ವರ್ಷಗಳು ಕಳೆದ ನಂತರವೂ ಮಹಿಳೆಯನ್ನು ನಮ್ಮ ಸಮಾಜ ನೋಡುತ್ತಿರುವ, ಕಲ್ಪಿಸಿಕೊಳ್ಳುತ್ತಿರುವ ರೀತಿ ಮಾತ್ರ ಸಾವಿರಾರು ವರ್ಷಗಳಷ್ಟು ಹಿಂದಿನದ್ದೇ ಎಂಬುದು ದೈನಂದಿನ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿರುವವರಿಗೆ ಅನ್ನಿಸುತ್ತದೆ.

ಹೀಗೆ ಮರೆಯಾದ, ಹೂಳಲಾದ ಮಹಿಳಾ ಮುಖವನ್ನು ಹೊರತೆಗೆದು ಮಹಿಳೆಯ ಚರಿತ್ರೆಯನ್ನು ಈಗ ಕಟ್ಟಬೇಕಾಗಿದೆ. ಹೂತುಹೋದ ಈ ಚರಿತ್ರೆಯ ಸಿಕ್ಕನ್ನು ಬಿಡಿಸುವುದು ತುಂಬಾ ಕಷ್ಟದ ಕೆಲಸ. ಮುಖ್ಯವಾಗಿ ಇಲ್ಲಿ ಮಹಿಳೆಯ ಮೌನ, ಸಾಂಸ್ಕೃತಿಕ ಸೂಕ್ಷ್ಮಗಳನ್ನು ಆಲಿಸಬೇಕು. ಮಹಿಳೆಯ ಪಿಸುಗುಟ್ಟುವಿಕೆಯ ಸುಪ್ತಸ್ವರವನ್ನು ದಕ್ಕಿಸಿಕೊಳ್ಳಬೇಕು. ಈ ಮೌನಗಳನ್ನು ಆಲಿಸುವುದು ತುಂಬಾ ಕಷ್ಟ. ಆದರೆ, ಮಹಿಳೆಯ ಅನುಭವಗಳನ್ನು ಅರ್ಥಮಾಡಿಕೊಳ್ಳುವುದು ಇಂದು ತೀರಾ ಅವಶ್ಯಕ. ಪ್ರಾಚೀನ ಕಾಲದಿಂದಲೂ ಮಹಿಳೆ ಸಮಾಜದ ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ ಬಂದಿದ್ದಾಳೆ. ಮೂಲಭೂತವಾಗಿ ಕೃಷಿ ಚಟುವಟಿಕೆ ಪ್ರಾರಂಭವಾಗಿದ್ದೇ ಮಹಿಳೆಯಿಂದ ಎಂಬುದು ತಿಳಿದ ಸಂಗತಿಯಾಗಿದ್ದರೂ, ಇದನ್ನು ಮರೆಮಾಚುವ ಪ್ರಯತ್ನ ಬಹಳ ವ್ಯವಸ್ಥಿತವಾಗಿ ನಡೆದುಬಂತು. ಇದಕ್ಕೆ ಕಾರಣ, ಎಲ್ಲಾ ಕಾಲದಲ್ಲೂ ನಂಬಲರ್ಹವಾದ ದಾಖಲೆಗಳು ದೊರೆಯದಿದ್ದ ಕಾರಣ, ಮಹಿಳೆಯರ 'ಆರ್ಥಿಕ ಸಹಭಾಗಿತ್ವ'ವನ್ನು ಗ್ರಹಿಸುವ ಶಕ್ತಿಯನ್ನು ಕೈಬಿಡಲಾಗಿದೆ.



ಈ ನಿಟ್ಟಿನಲ್ಲಿ ಮಹಿಳೆಯ ಸಹಭಾಗಿತ್ವವನ್ನು ಆರ್ಥಿಕ ದೃಷ್ಟಿಯಲ್ಲಿ ಅಳೆಯಲು ಇಂದಿನ ಸಂಶೋಧನೆಗಳು, ಆಧುನಿಕ ಸಾಹಿತ್ಯ, ಶಾಸನಗಳನ್ನು ಪುರಾಣಗಳನ್ನು ಅವಲಂಬಿಸಬೇಕಾಗಿದೆ. ಭಾರತೀಯ ಮಹಿಳೆ ಬೇರೆ ಸಮಾಜಗಳಂತೆಯೇ ಹಿಂದಿನಿಂದಲೂ ಕೃಷಿ ಕ್ಷೇತ್ರದ ಜೊತೆಗೆ ಮನೆಗೆಲಸವನ್ನೂ ನಿಭಾಯಿಸಿಕೊಂಡು ಬರುತ್ತಿದ್ದಾಳೆ. ಇದರಿಂದಾಗಿ ಸಮಾಜದಲ್ಲಿ ಮಹಿಳೆಯ ಮಾನವೀಯ ಸಂಬಂಧಗಳು ಹತ್ತಿರವಾದವು. ಇಂತಹ ಚಾರಿತ್ರಿಕ ಯುಗಾಂತರದಲ್ಲಿ ಮಹಿಳೆಯ ಉತ್ಪಾದನಾ ಚಟುವಟಿಕೆ ಕುಟುಂಬದ ಸಾಹಸ ಕ್ರಿಯೆಯಾಯಿತು. ಇಂತಹ ಪರಿಸ್ಥಿತಿಯಲ್ಲಿ ಮಹಿಳೆ ಉತ್ಪಾದನಾ ಘಟಕದಲ್ಲಿ ಕೆಲಸ ಮಾಡುತ್ತಾ, ಆರ್ಥಿಕ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಾ ; ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ, ಸೊಸೆಯಾಗಿ... ಸಾಮಾಜಿಕ ಕಾರ್ಯಗಳಲ್ಲಿ ತನ್ನ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸುತ್ತಿದ್ದಾಳೆ. ಹೀಗೆ ಜೀವನ ಅವಶ್ಯಕತೆಗಳನ್ನು ಪೂರೈಸುವುದರ ಜೊತೆಗೆ ಸಾಂಪ್ರದಾಯಿಕ ಆರ್ಥಿಕ ಬೆಳವಣಿಗೆಯನ್ನು ಬಲಪಡಿಸಿದ್ದಾಳೆ.

ಭಾರತದಲ್ಲಿ ಸಾಂಪ್ರದಾಯಿಕ ಗ್ರಾಮೀಣ ಜನಾಂಗವು ಕೃಷಿ ಜೀವನದ ಜೊತೆಗೆ ಕರಕುಶಲ ಕೆಲಸಕ್ಕೂ ತನ್ನ ಸೇವೆಯನ್ನು ಮೀಸಲಾಗಿಟ್ಟಿತು. ಮಹಿಳೆ ಇಂತಹ ಪ್ರತಿಹಂತದಲ್ಲೂ ಕುಟುಂಬದ ಜೀವನಾವಶ್ಯಕ ದುಡಿಮೆಯ ಜೊತೆಗೆ ಹೆಚ್ಚು-ಕಡಿಮೆ ಉತ್ಪಾದನಾ ಹಾಗೂ ಕರಕುಶಲ ಕ್ಷೇತ್ರದಲ್ಲೂ ಸಮಾನಾಂತರವಾಗಿ ದುಡಿದಿದ್ದಾಳೆ. ಇದಕ್ಕೆ ಮುಖ್ಯವಾಗಿ ಸ್ಥಳೀಯ ಪ್ರದೇಶಗಳು ಹಾಗೂ ಹತ್ತಿರದ ಮಾರುಕಟ್ಟೆಗಳು ಸಹಾಯಕವಾದವು. ಪ್ರಚಲಿತ ಸಾಂಪ್ರದಾಯಿಕ ವಿಧಾನದಿಂದ ಮಹಿಳೆಯರ ಆರ್ಥಿಕ ಪರಿಸ್ಥಿತಿಯೂ ಉತ್ತಮಗೊಂಡಿತು. ಸ್ಥಳೀಯ ಮಾರುಕಟ್ಟೆಗಳು, ಬಳಕೆದಾರಿಕೆಯ ಗ್ರಾಹಕರನ್ನು ಒಳಗೊಂಡ ಆರ್ಥಿಕ ಕ್ಷೇತ್ರಗಳಲ್ಲಿ ಹೆಚ್ಚು ಸ್ಥಾನಮಾನ ಗಳಿಸಿಕೊಂಡಿತು. ಇದೇ ಸಮಯದಲ್ಲಿ ಮಾನವ ಪರಿಶ್ರಮಕ್ಕೆ ಬದಲಾಗಿ ಯಂತ್ರಗಳು ಬಳಸಲ್ಪಟ್ಟಾಗ ಈ ತಾಂತ್ರಿಕತೆಯಿಂದಾಗಿ ಮಹಿಳೆಯರ ಪ್ರಭುತ್ವಕ್ಕೆ, ದುಡಿಮೆಗೆ, ಆರ್ಥಿಕ ಚಟುವಟಿಕೆಗಳ ಸಹಭಾಗಿತ್ವಕ್ಕೆ ಕೊಡಲಿಪೆಟ್ಟು ಬಿದ್ದಂತಾಯಿತು.







ಯಾವುದೇ ಸಮಾಜದಲ್ಲಾಗಲಿ, ಅಲ್ಲಿನ ಅಭಿವೃದ್ಧಿಯ ಮುಖ್ಯ ಸೂಚಕವೆಂದರೆ ಮಹಿಳೆಯರ ಸ್ಥಾನಮಾನ. ಸಮಾಜದ ಅರ್ಧದಷ್ಟು ಜನಸಂಖ್ಯೆಯಿರುವ ಮಹಿಳೆಯರು

ಅಮೂಲ್ಯ ಮಾನವ ಸಂಪನ್ಮೂಲ. ದೇಶದ ಸರ್ವಾಂಗೀಣ ಪ್ರಗತಿಗಾಗಿ, ಗೃಹಿಣಿಯರಾಗಿ ಭಾವಿ ಪ್ರಜೆಗಳನ್ನು ಹೊತ್ತು, ಹೆತ್ತು, ಬೆಳೆಸುವ ತಾಯಂದಿರಾಗಿ ಮಹಿಳೆಯರು ಸಲ್ಲಿಸುತ್ತಿರುವ ಸೇವೆ ಅತೀ ದೊಡ್ಡದು ಹಾಗೂ ಅಮೋಘವಾದುದು. ಆದ್ದರಿಂದಲೇ ಅವರನ್ನು ಹಾಗೂ ಅವರ ಶಕ್ತಿಯನ್ನು ಗುರುತಿಸಿ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುವ ಅವಶ್ಯಕತೆ ಇದೆ. ಇದರಲ್ಲಿ ಅವರ ಪ್ರಗತಿ ಮಾತ್ರವಲ್ಲದೆ ದೇಶದ ಪ್ರಗತಿಯೂ ಸಹ ಅಡಕವಾಗಿದೆ. ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಯಶಸ್ಸು ಗಳಿಸಿರುವ ಮಹಿಳೆಯರನ್ನು ಇಂದೂ ಸಹ ಅವಕಾಶಗಳಿಂದ ವಂಚಿತಗೊಳಿಸುವ ವ್ಯವಸ್ಥಿತ ಪ್ರಯತ್ನ ನಡೆಯುತ್ತಿದೆ.

ಭಾರತವನ್ನೂ ಒಳಗೊಂಡಂತೆ, ಕಡಿಮೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಸಹ ಮಹಿಳೆಯರನ್ನು ಉದ್ಯೋಗಾವಕಾಶಗಳಲ್ಲಿ ನಿರ್ಲಕ್ಷ್ಯಕ್ಕೆ ಒಳಪಡಿಸಿದ್ದಾರೆ. ಕಾರಣ, ಮಾನವ ಸಮಾಜದಲ್ಲಿ ಪ್ರಾರಂಭದಿಂದಲೂ ಪುರುಷರ ಮತ್ತು ಮಹಿಳೆಯರ ನಡುವೆ ಅಸಮಾನ ಶ್ರಮವಿಭಜನೆ ಏರ್ಪಟ್ಟಿದೆ. ಮಹಿಳೆಯು ದುಡಿಮೆಯ ಕ್ಷೇತ್ರದಲ್ಲಿ – ಆರ್ಥಿಕ ಕ್ಷೇತ್ರದಲ್ಲಿ ಕಾಣಿಸಿಕೊಳ್ಳುತ್ತಿರುವುದು ೨೧ನೆಯ ಶತಮಾನದ ಅದ್ಭುತವೇನಲ್ಲ. ಸಮಾಜ ಜೀವನದ ಆರಂಭದಿಂದಲೂ ಆರ್ಥಿಕ ಕ್ಷೇತ್ರದಲ್ಲಿ ಪುರುಷನೊಂದಿಗೆ ಅವಳು ದುಡಿಯುತ್ತಿದ್ದಾಳೆ. ಮಹಿಳೆ ಹುಟ್ಟಿನಿಂದ ಸಾವಿನವರೆಗೆ ಮಾನವ ಸಮಾಜದಲ್ಲಿ ಬದುಕಬೇಕಾಗಿ ಇರುವುದರಿಂದ ಆರ್ಥಿಕ ಕ್ಷೇತ್ರದಲ್ಲಿ ಹೆಚ್ಚಿನ ಮಟ್ಟದಲ್ಲಿ ಪ್ರವೇಶ ಪಡೆಯಬೇಕಾಗಿದೆ. 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎಂದರು ಒಂದು ಕಡೆ; ಇನ್ನೊಂದು ಕಡೆ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಮಾತುಗಳ ದ್ವಂದ್ವ ನೀತಿಯಿಂದ ಮಹಿಳೆಯರ ಸ್ಥಾನವನ್ನು ನಿರೂಪಿಸಿದ್ದಾರೆ.

ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯುಳ್ಳ ನಮ್ಮ ದೇಶದಲ್ಲಿ ಇಂದಿಗೂ ಮಹಿಳೆಯರನ್ನು ಎರಡನೇ ದರ್ಜೆಯ ನಾಗರಿಕರೆಂದು ಪರಿಗಣಿಸಲಾಗಿದೆ. ಬಂಡವಾಳಶಾಹಿಯ ಬೆಳವಣಿಗೆ ಹಾಗೂ ಶ್ರಮದ ಅವಶ್ಯಕತೆಗಾಗಿ, ಜೊತೆಗೆ ಕುಟುಂಬಗಳ ಪೋಷಣೆಯ ಸಲುವಾಗಿ ಮಹಿಳೆಯರನ್ನು ದುಡಿತಕ್ಕೆ ಆಹ್ವಾನಿಸಿದ್ದರೂ ಮಹಿಳೆ ಉತ್ಪಾದನಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವುದು ಹೊರನೋಟಕ್ಕೆ ಕಾಣುತ್ತಿದ್ದರೂ, ಅದೇ ಮಹಿಳೆಯ ಸ್ವಾತಂತ್ರ್ಯವಲ್ಲ. ದುಡಿಮೆಯಲ್ಲಿ ಸಮಪಾಲನ್ನು ಹೊಂದಿರುವ ಮಹಿಳೆ, ಆರ್ಥಿಕವಾಗಿ ಸಮಪಾಲನ್ನು ಹೊಂದಿಲ್ಲ. ದುಡಿಮೆಯ ಸ್ವಾತಂತ್ರ್ಯವಿದ್ದ ಮಾತ್ರಕ್ಕೆ ಆರ್ಥಿಕ ಸ್ವಾತಂತ್ರ್ಯ ದಕ್ಕಿಲ್ಲ. ರೈಲು-ಬಸ್ಸುಗಳಲ್ಲಿ, ಕಾರ್ಖಾನೆ-ಕಛೇರಿಗಳಲ್ಲಿ, ಶಾಲಾ-ಕಾಲೇಜುಗಳಲ್ಲಿ, ರಸ್ತೆ-ಕ್ರೀಡಾಂಗಣಗಳಲ್ಲಿ, ಹೊಲ-ಗದ್ದೆಗಳಲ್ಲಿ ಪುರುಷರ ಜೊತೆಜೊತೆಯಾಗಿಯೇ ಮಹಿಳೆ ಕಾಣಿಸಿಕೊಂಡರೂ ಮಹಿಳೆ ಪುರುಷಾಧೀನ ಬದುಕನ್ನೇ ನಡೆಸಬೇಕೆಂಬ ಈ ಸಮಾಜದ ಸನಾತನ ವಿಚಾರಗಳು ಸತ್ವ ಕಳೆದುಕೊಂಡಿಲ್ಲ.

ಮಹಿಳೆ ನಡೆಯುವಾಗ, ಹಾಡುವಾಗ, ಕುಣಿಯುವಾಗ, ದುಡಿಯುವಾಗ ಹಾಗೂ ಮಡಿಯುವಾಗ ಪುರುಷರ ಛಾಯೆ ಸದಾ ಕಾಡುತ್ತಲೇ ಇರಬೇಕು; ಹೀಗೆ ಇದ್ದರೆ ಮಾತ್ರ ಸರಿ ಎನ್ನುವ ಗಾಢ ನಂಬಿಕೆಗಳು ಮಹಿಳೆಯು ಸ್ವತಂತ್ರ ವ್ಯಕ್ತಿಯಾಗಿ ಮೂಡಿಬರಲು ಅವಕಾಶವನ್ನೇ ನೀಡಿಲ್ಲ. ಈವರೆಗೆ ಮಹಿಳೆಯನ್ನು ವ್ಯಕ್ತಿಯಾಗಿ ನೋಡಲು ಸಾಧ್ಯವೂ ಆಗಿಲ್ಲ. ಇದು ಇಂದಿನ ಕಟುವಾಸ್ತವ. ಹೀಗಾಗಿಯೂ ಮಹಿಳೆ ಎಷ್ಟೇ ದೊಡ್ಡ ಸಾಧನೆಗಳನ್ನು ಮಾಡಿದರೂ ಪುರುಷನಿಂದ ಹೊರತುಪಡಿಸಿ ನೋಡಲು ಸಾಧ್ಯವಾಗುವುದಿಲ್ಲ. ಕಛೇರಿಯಲ್ಲಿ ಅಧಿಕಾರಿಯಾಗಿ ದುಡಿಯುವ ಮಹಿಳೆಯು ಮನೆಗೆ ಬಂದಕೂಡಲೆ ಪುರುಷನ ಅಧೀನಳಾಗುತ್ತಾಳೆ. ಇಂತಹ ಸಾಂಪ್ರದಾಯಿಕ ಕೌಟುಂಬಿಕ ವ್ಯವಸ್ಥೆ ಮತ್ತು ಅಲ್ಲಿನ ಆಚರಣೆ, ನಂಬಿಕೆ, ವಿಧಿ, ನಿಷೇಧಗಳೇ ಅಧಿಕಾರ ಚಲಾಯಿಸುತ್ತಿರುವಲ್ಲಿ, ಮಹಿಳೆಯರು ತಮ್ಮ ದುಡಿಮೆಯ ಹಣವನ್ನು ತಮಗೆ ಇಷ್ಟ ಬಂದಂತೆ ಖರ್ಚು ಮಾಡುವುದು ಇನ್ನೂ ಸಾಧ್ಯವಾಗಿಲ್ಲ. ನಾಲ್ಕು ಗೋಡೆಗಳ ಮಧ್ಯೆ ಉಸಿರುಕಟ್ಟಿಸುವಂತಹ ಜಡ ಪ್ರಪಂಚದಿಂದ ಹೊರಗೆ ಬಂದು ಮುಕ್ತವಾಗಿ ಓಡಾಡುವಷ್ಟರ ಮಟ್ಟಿಗೆ ಅವಳು ಸ್ವತಂತ್ರಳಿದ್ದರೂ ತಾನು ದುಡಿದ ಹಣವನ್ನು ತಂದೆಯ ಕೈಗೋ, ಪತಿಯ ಕೈಗೋ, ಮನೆಯ ಹಿರಿಯರ ಕೈಗೋ ಹಾಕಿ ತನ್ನ ಖರ್ಚು ವೆಚ್ಚಗಳಿಗೆ ಮತ್ತೆ ಮತ್ತೆ ಅವರನ್ನು ಬೇಡುವ ದೀನಸ್ಥಿತಿಯಿಂದ ಅವಳಿನ್ನೂ ಪಾರಾಗಿಲ್ಲ. ಈ ರೀತಿಯಾಗಿ ಪುರುಷಪ್ರಧಾನ ಸಮಾಜ ಮಹಿಳೆಯನ್ನು ಬಂಧಿಸಿಬಿಟ್ಟಿದೆ.

ದುಡಿಯುವ ರಂಗ ಪ್ರವೇಶಿಸಿದಂದಿನಿಂದ ನಿವೃತ್ತಿಯವರೆಗೆ ಮಹಿಳೆ ಪುರುಷಪ್ರಧಾನ ಸಮಾಜದಲ್ಲಿ ಬದುಕುತ್ತಿದ್ದಾಳೆ. ಹೇಗಾದರೂ ತನ್ನ ಕೆಲಸ ಉಳಿಸಿಕೊಳ್ಳಬೇಕೆಂಬ ಹಂಬಲದಿಂದ ಅವಳು ಇದರಲ್ಲಿ ಬದುಕಲೆತ್ನಿಸುತ್ತಾಳೆ. ಆದ್ದರಿಂದಲೇ ಪ್ರತಿಯೊಂದು ಹಂತದಲ್ಲಿಯೂ ಅವಳು ರಾಜಿ ಮಾರ್ಗಕ್ಕೆ ಹೋಗುತ್ತಾಳೆ. ತಂದೆ, ಗಂಡನ ಮನೋಗತಕ್ಕೆ ಅನುಗುಣವಾದ ವೃತ್ತಿಯನ್ನು ಉದ್ಯೋಗವನ್ನು ಆರಿಸಿಕೊಳ್ಳುವುದು, ಮನೆಗೆಲಸ ಮತ್ತು ಮನೆಯ ಹೊರಗಿನ ವೃತ್ತಿ/ಉದ್ಯೋಗದ ಎರಡು ತುದಿಗಳನ್ನು ಹಿಡಿದು ಸಮತೋಲನ ಮಾಡುವುದು, ಅಲ್ಲದೆ, ಹೊಟ್ಟೆಪಾಡಿಗಾಗಿ ಕೆಲಸ, ದೀರ್ಘಕಾಲದ ದುಡಿತ ಹಾಗೂ ಕುಟುಂಬದ ಆದಾಯಗಳಲ್ಲಿ ಮಹಿಳೆಯರದು ಸಿಂಹಪಾಲು. ಆದರೂ ಬಹುತೇಕ ಸಂಖ್ಯಾಶಾಸ್ತ್ರಜ್ಞರು, ಆರ್ಥಿಕ ತಜ್ಞರು, ಅಭಿವೃದ್ಧಿ ಪರಿಣತರು ಹಾಗೂ ಅವರ ಗಂಡಂದಿರ ದೃಷ್ಟಿಯಲ್ಲಿ ಮಹಿಳೆಯರ ಆರ್ಥಿಕತೆ, ನಿರುತ್ಪಾದಕ ರೀತಿಯದು. ಇದರಿಂದ ಜಗತ್ತಿನ ಒಂದು ವಿಭಾಗದ ಉತ್ಪತ್ತಿಯ ಭಾಗವನ್ನು ಅಪಮೌಲ್ಯ ಮಾಡಿದಂತಾಗಿದೆ. ಇದರ ಜೊತೆಗೆ ಮಹಿಳೆಯರು ಕುಟುಂಬದ ಮತ್ತು ದೇಶದ ಏಳಿಗೆಗೆ ನೀಡಿರುವ ಅವಶ್ಯಕ ಕಾಣಿಕೆಯನ್ನು ಗುರುತಿಸದೇ ಹೋಗಿದೆ. ಸಾಮರ್ಥ್ಯದಲ್ಲಿ ಕಡಿಮೆಯಲ್ಲದ ಮಹಿಳೆ ಅವಕಾಶದಿಂದ ವಂಚಿತಳಾಗಿ ಸಹಸ್ರಾರು ವರುಷಗಳಿಂದ ಹಿಂದುಳಿದಿದ್ದಾಳೆ; ನೊಂದಿದ್ದಾಳೆ.

ಭಾರತದಲ್ಲಿ ಮಹಿಳೆ ದುಡಿಯುವ ರಂಗ/ಆರ್ಥಿಕ ಕ್ಷೇತ್ರವನ್ನು ಹೇಗೆ ಮತ್ತು ಎಂದು ಪ್ರವೇಶಿಸಿದಳು ಎಂಬ ಪ್ರಶ್ನೆಗೆ ಸರಿಯಾದ ಉತ್ತರವಿಲ್ಲ. ಬೀಜ ಬಿತ್ತುವುದು, ಕಳೆ ಕೀಳುವುದು, ನೀರು ಹಾಕುವುದು, ಕೊಯ್ಲು, ಸಂಗೋಪನೆ, ಕೋಳಿ ಸಾಕಾಣಿಕೆಗಳಲ್ಲಿ ತನ್ನ ಮನೆಯ ಪುರುಷರ ಜೊತೆ ದುಡಿಯಲಾರಂಭಿಸಿದ್ದೇ ಅಲ್ಲದೆ (ಗುಡಿಕೈಗಾರಿಕೆಗಳಲ್ಲಿ) ಬೀಡಿ ಕಟ್ಟುವುದು, ಹಗ್ಗ ಹೊಸೆಯುವುದು, ಮಡಕೆ ಮಾಡುವುದು... ಮುಂತಾದ ಕೆಲಸಗಳನ್ನು ಮಾಡಲು ಪ್ರಾರಂಭಿಸಿದಳು. ಅದರಲ್ಲೂ ಕೆಳವರ್ಗದ ಮಹಿಳೆಯರಿಗೆ ಉದ್ಯೋಗ ಅನಿವಾರ್ಯ. ಹಳ್ಳಿಗಳಲ್ಲಿ ಕೆಲಸ ಮಾಡುವ ಕೃಷಿ ಕಾರ್ಮಿಕರಿಂದ ಹಿಡಿದು ಪಟ್ಟಣಗಳಲ್ಲಿ ಮನೆಗೆಲಸ, ಚಿಕ್ಕಪುಟ್ಟ ಕಾರ್ಖಾನೆಗಳಲ್ಲಿ ದುಡಿಯುವುದು, ಕಟ್ಟಡ ನಿರ್ಮಾಣದ ಕೆಲಸ ಇತ್ಯಾದಿ, ಕಡಿಮೆ ವರಮಾನ ಬರುವ ಕೆಲಸಗಳಲ್ಲಿ ತೊಡಗಿರುವ ಮಹಿಳೆಯರಿಗೆ ಉದ್ಯೋಗ, ಕೆಲಸ, ದುಡಿಮೆ ಅನಿವಾರ್ಯ. ಇಂತಹ ವರ್ಗದ ಮಹಿಳೆಯರು ಮನೆಯ ಒಳಗೂ ಹೊರಗೂ ದುಡಿಯಬೇಕಾಗಿರುವುದರಿಂದ ಒಂದು ರೀತಿಯ ಚಲನಶೀಲತೆಯನ್ನು ಹೊಂದಿರುತ್ತಾರೆ.

ಮಹಿಳೆ ಹೊರಗೆ ಹೋಗಿ ದುಡಿಯುವುದು ಇತ್ತೀಚಿನ ಬದಲಾದ ಪರಿಸರದಲ್ಲಿ ಕಾಣಿಸಿಕೊಂಡಿದ್ದು ಎಂದು ಅನೇಕರು ಭಾವಿಸಿರಬಹುದು. ಆದರೆ, ಮಹಿಳೆಯ ದುಡಿಮೆ ಅಥವಾ ಆರ್ಥಿಕ ಕ್ಷೇತ್ರದ ಪ್ರವೇಶ ಹೊಸದಲ್ಲ. ಆಫೀಸು-ಕಛೇರಿಗಳಲ್ಲಿ ಕಾಗದ-ಪತ್ರಗಳ ಮಧ್ಯೆ ಕುಳಿತು ಹೊರಗೆ ದುಡಿಯುವುದು ಹೊಸದಿರಬಹುದು. ಆದರೆ, ಪುರಾತನ ಕಾಲದಿಂದ ಮಹಿಳೆ ದೈಹಿಕ ಹಾಗೂ ಮಾನಸಿಕ ಶ್ರಮದಿಂದ ಆರ್ಥಿಕ ಲಾಭವನ್ನು ಪಡೆಯುತ್ತಿದ್ದುದನ್ನೂ ನೋಡಬಹುದು. ಹಿಂದೆ ಕಾರ್ಖಾನೆಗಳಲ್ಲಿ ಕೆಲಸ ಮಾಡುವುದು ಕಠಿಣ, ಅದು ಪುರುಷರಿಗಷ್ಟೇ ಸಾಧ್ಯ ಎಂಬ ಭಾವನೆ ಇತ್ತು. ಇಂದು ನಿರುದ್ಯೋಗ ಸಮಸ್ಯೆ ದೃಷ್ಟಿಯಿಂದ ವಿದ್ಯಾವಂತ ಮಹಿಳೆಯರು ಉದ್ಯೋಗಕ್ಕಾಗಿ, ಕೆಲಸಕ್ಕಾಗಿ ಅಲೆಯುತ್ತಾರೆ. ಅವಕಾಶ ಸಿಕ್ಕಾಗ ಗತ್ಯಂತರವಿಲ್ಲದೆ ಯಾವ ಕೆಲಸವಾದರೂ ಸರಿ ಎಂದು ಒಪ್ಪಿಕೊಳ್ಳುವ ಮಹಿಳೆಯರೂ ಇದ್ದಾರೆ. ಮಹಿಳೆ ಎಂದರೆ ಕೋಮಲತೆ, ಮೃದು ಸ್ವಭಾವ ಹಾಗೂ ಕಸೂತಿ, ನಿಟ್ಟಿಂಗ್, ರಂಗೋಲಿ ಹಾಕುವ ಕೈಗಳು ನೆನಪಿಗೆ ಬರುತ್ತವೆ. ಅಂತಹ ಕೈಗಳು ಈಗ ಯಂತ್ರಗಳನ್ನು ನಡೆಸಬಲ್ಲವು, ರಿಪೇರಿ ಮಾಡಬಲ್ಲವು. ಭಾರತ್ ಎಲೆಕ್ಟ್ರಾನಿಕ್ಸ್‌ನಂತಹ ಕಾರ್ಖಾನೆಯಲ್ಲಿ ಮಹಿಳೆಯರು ತುಂಬಿಹೋಗಿದ್ದಾರೆ. ವಿಮಾನ, ಟೆಲಿಫೋನ್, ಕಾಗದ, ಬಟ್ಟೆ ಕಾರ್ಖಾನೆಯಲ್ಲಿ, ಯಂತ್ರೋಪಕರಣಗಳ ಕಾರ್ಖಾನೆಗಳಲ್ಲಿ ಅನೇಕ ಜನ ಮಹಿಳೆಯರು ದುಡಿಯುತ್ತಿದ್ದಾರೆ ಹಾಗೂ ಆರ್ಥಿಕ ಕ್ಷೇತ್ರಕ್ಕೆ ತಮ್ಮದೇ ಆದ ಕಾಣಿಕೆಯನ್ನು ಕೊಡುಗೆಯನ್ನು ನೀಡುತ್ತಿದ್ದಾರೆ.

ಹೀಗೆ, ಯಾವುದೇ ರಾಷ್ಟ್ರ ಕೋಟ್ಯಂತರ ಮಹಿಳೆಯರ ಸಾಮರ್ಥ್ಯವನ್ನು ವ್ಯರ್ಥಗೊಳಿಸಿ ಮುನ್ನಡೆಯಲಾರದು. ಹಾಗಾಗಿ, ಮಹಿಳೆಯರ ಸಾಮರ್ಥ್ಯವನ್ನು ರಾಷ್ಟ್ರದ ಏಳಿಗೆಗೆ ಬಳಸಿಕೊಳ್ಳಬೇಕು. ಆರ್ಥಿಕ ಅವಶ್ಯಕತೆಯಿಂದ ಹಾಗೂ ವೈಯಕ್ತಿಕ ದೃಷ್ಟಿಯಿಂದ ದೇಶದ ಅಭಿವೃದ್ಧಿಗಾಗಿ ಮಹಿಳೆಯರ ಸೇವೆಯು ಅತ್ಯವಶ್ಯಕವಾಗಿದೆ. ದುಡಿಮೆಯಿಂದಾಗಿ ಲಭಿಸಿರುವ ಆರ್ಥಿಕ ಸ್ವಾತಂತ್ರ್ಯದಿಂದಾಗಿ ಮಹಿಳೆ ಸ್ವಾವಲಂಬಿ ಎನಿಸಿದರೂ ಇಂದೂ ಸಹ ಮಹಿಳೆಯನ್ನು ಆರ್ಥಿಕ ರಂಗದಿಂದ ದೂರವಿಡುವ ಪ್ರಯತ್ನ ಸಾಗುತ್ತಲೇ ಇದೆ. ಆದ್ದರಿಂದ, ಯಾವ ಸಮಾಜದಲ್ಲಿ 'ಸಬಲ ನಾರಿ ಸಬಲ ಸಮಾಜ'ವನ್ನು ಕಾಣಲು ಸಾಧ್ಯವಿಲ್ಲವೋ ಆ ರಾಷ್ಟ್ರವು ಅಭಿವೃದ್ಧಿಯನ್ನು ಬೆಳವಣಿಗೆಯನ್ನು ಕೂಡ ಕಾಣಲು ಸಾಧ್ಯವಿಲ್ಲ.

**ಡಾ॥ ಆಂಜನಪ್ಪ ಬಿ. ಎಚ್.**
ಉಪನ್ಯಾಸಕರು, ಸಮಾಜಶಾಸ್ತ್ರ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಜ್ಞಾನಸಹ್ಯಾದ್ರಿ
ಶಂಕರಘಟ್ಟ- ೫೭೭ ೪೫೧, ಶಿವಮೊಗ್ಗ ಜಿಲ್ಲೆ

# ಸೃಜನಶೀಲತೆ ಮತ್ತು ನಿಯಂತ್ರಣ



**ಇತ್ತೀಚಿನ ಕೆಲವು ದಶಕಗಳಲ್ಲಿ, ನಮ್ಮ ರಾಷ್ಟ್ರದಲ್ಲಿ ಕೆಲವು ಪುಸ್ತಕಗಳು, ಚಲನಚಿತ್ರಗಳು, ವರ್ಣಚಿತ್ರ ಪ್ರದರ್ಶನಗಳು ಹಾಗೂ ಇತರ ಕಲಾಭಿವ್ಯಕ್ತಿಯ ಪ್ರಕಾರಗಳು ಸ್ವಯಂ-ನಿಯೋಜಿತ ಸಾಂಸ್ಕೃತಿಕ ರಕ್ಷಕರ ಕಾರ್ಯಸೂಚಿಗಳಿಗೆ, ದಾಳಿಗಳಿಗೆ ತುತ್ತಾಗಿವೆ. ಈ ಮಂದಿಗೆ ಪ್ರಜಾಪ್ರಭುತ್ವ ವ್ಯವಸ್ಥೆಯೊಂದರ ಪ್ರಾಥಮಿಕ ಜ್ಞಾನವಿರದಿರುವುದೇ ಒಂದು ದೊಡ್ಡ ದುರಂತ. ನಮ್ಮ ಸಂವಿಧಾನದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸ್ಥಾನವಿರುವುದು ಶಿಕ್ಷಿತರಿಗೆ ತಿಳಿದ ವಿಷಯವೇ ಸರಿ.**

ಮ. ಶ್ರೀ. ಮುರಳಿಕೃಷ್ಣ

ಕಲೆ ಸಮಾಜದ ಕನ್ನಡಿಯಂತೆ. ಅದು ಬದುಕಿನ ನಾನಾ ಮುಖಗಳನ್ನು ಸೂಕ್ಷ್ಮವಾಗಿ ಅನಾವರಣಗೊಳಿಸುವ ಪರಿ ವಿಸ್ಮಯಕಾರಿಯಾದದ್ದು. ಕಲೆ ಹಾಗೂ ಮಾನವರ ನಡುವಿನ ಸ್ಪಂದನ-ಪ್ರತಿಸ್ಪಂದನಗಳ ಪ್ರಕ್ರಿಯೆಗಳು ಸರಳವಾಗಿಯೂ ಸಂಕೀರ್ಣವಾಗಿಯೂ ಇರುತ್ತವೆ. ಕಲಾ ಅಭಿವ್ಯಕ್ತಿಯೂ ಸಹ ಮೂರ್ತವಾಗಿರಬಹುದು ಅಥವಾ ಅಮೂರ್ತವಾಗಿ ಪ್ರಕಟವಾಗಬಹುದು. ಒಟ್ಟಿನಲ್ಲಿ ಕಲಾವಿದ-ವಸ್ತು-ಕೃತಿಗಳದ್ದು ಅವಿನಾಭಾವ ಸಂಬಂಧ. ಇತಿಹಾಸದಲ್ಲಿ ಕಲಾಪ್ರಕಾರಗಳು ಅನೇಕ ಕಾರಣಗಳಿಂದ ಆಕ್ರಮಣಗಳಿಗೆ ಗುರಿಯಾಗಿರುವ ಘಟನೆಗಳಿವೆ. ಆದರೆ ನಾಗರಿಕತೆಯು ಪರಾಕಾಷ್ಠೆಯಲ್ಲಿರುವ ಈ ನವೀನ ಯುಗದಲ್ಲೂ, ಇವು ಆಕ್ರಮಣಗಳಿಗೆ ಪಕ್ಕಾಗುತ್ತಿರುವ ಅನೇಕ ಸಂಗತಿಗಳು ನಮ್ಮ ಎದುರಿಗಿವೆ.

ಇತ್ತೀಚಿನ ಕೆಲವು ದಶಕಗಳಲ್ಲಿ, ನಮ್ಮ ರಾಷ್ಟ್ರದಲ್ಲಿ ಕೆಲವು ಪುಸ್ತಕಗಳು, ಚಲನಚಿತ್ರಗಳು, ವರ್ಣಚಿತ್ರ ಪ್ರದರ್ಶನಗಳು ಹಾಗೂ ಇತರ ಕಲಾಭಿವ್ಯಕ್ತಿಯ ಪ್ರಕಾರಗಳು ಸ್ವಯಂ-ನಿಯೋಜಿತ ಸಾಂಸ್ಕೃತಿಕ ರಕ್ಷಕರ ಕಾರ್ಯಸೂಚಿಗಳಿಗೆ, ದಾಳಿಗಳಿಗೆ ತುತ್ತಾಗಿವೆ. ಈ ಮಂದಿಗೆ ಪ್ರಜಾಪ್ರಭುತ್ವ ವ್ಯವಸ್ಥೆಯೊಂದರ ಪ್ರಾಥಮಿಕ ಜ್ಞಾನವಿರದಿರುವುದೇ ಒಂದು ದೊಡ್ಡ ದುರಂತ. ನಮ್ಮ ಸಂವಿಧಾನದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸ್ಥಾನವಿರುವುದು ಶಿಕ್ಷಿತರಿಗೆ ತಿಳಿದ ವಿಷಯವೇ ಸರಿ. ಆದರೆ ಇತ್ತೀಚಿನ ವರ್ಷಗಳಲ್ಲಿ ಈ ಕಲ್ಪನೆಯ ಮೇಲೆ ಪರಿಣಾಮಕಾರಿಯಾದ ಪ್ರಹಾರಗಳಾಗುತ್ತಿರುವುದು ಒಳ್ಳೆಯ ಬೆಳವಣಿಗೆಯಲ್ಲ.

ಉದಾಹರಣೆಗಾಗಿ, ಚಲನಚಿತ್ರ ಮಾಧ್ಯಮದಲ್ಲಿ ಜರುಗಿದ, ಜರುಗುತ್ತಿರುವ ಕೆಲವು ವಿದ್ಯಮಾನಗಳತ್ತ ಗಮನ ಹರಿಸೋಣ. ಒಂದು ಚಲನಚಿತ್ರದಲ್ಲಿ ಪೌರಾಣಿಕ ವ್ಯಕ್ತಿಗಳ ಹೆಸರುಗಳ ಪಾತ್ರಗಳಿದ್ದರೆ ಹಾಗೂ ಅಂಥಾ ಪಾತ್ರಗಳು ವಿಭಿನ್ನವಾಗಿ ಅಂದರೆ, ಸಿದ್ಧಸೂತ್ರಗಳಿಗೆ ಆತುಕೊಳ್ಳದೆ, ವಿವಾದಾತ್ಮಕ ಎನ್ನಬಹುದಾದ ರೀತಿಯಲ್ಲಿ ಚಿತ್ರಣಗೊಂಡಿದ್ದರೆ ಕತೆ ಮುಗಿದಂತೆ. ಅಂತಹ ಚಲನಚಿತ್ರ ತಮ್ಮ ಧಾರ್ಮಿಕ ಭಾವನೆಗಳಿಗೆ ಆಘಾತಕಾರಿಯೆಂದು ಸಂಸ್ಕೃತಿ ರಕ್ಷಕರು ಬೊಬ್ಬೆಹಾಕಿ ದಾಂಧಲೆ ಶುರುಮಾಡುತ್ತಾರೆ. ಅಂತಹ ಚಲನಚಿತ್ರವನ್ನು ಪ್ರದರ್ಶಿಸುವ ಚಲನಚಿತ್ರ ಮಂದಿರಗಳು ಪ್ರತಿಭಟನಾಕಾರರ ಆಕ್ರೋಶಕ್ಕೆ ಬಲಿಯಾಗುತ್ತವೆ. ಅವುಗಳ ಮಾಲಿಕರು ವಿಹ್ವಲಕ್ಕೆ ಒಳಗಾಗುತ್ತಾರೆ. ಚಲನಚಿತ್ರಗಳು ಕಾಲ್ಪನಿಕ ಎಂಬ ಅರಿವು ಇರದ ಅವಿವೇಕಿಗಳು ಕಿಡಿಗಳನ್ನು ಹೊತ್ತಿಸುತ್ತಾರೆ. ನಂತರ ಅವು ಬೆಂಕಿಯಾಗಿ, ಜ್ವಾಲೆಗಳು ಹರಡಿ, ದಹಿಸುತ್ತವೆ.

ಇಂತಹ ಸಂದರ್ಭಗಳಲ್ಲಿ, ಅನಾದಿಕಾಲದಿಂದಲೂ ಊರ್ಜಿತಗೊಂಡಿರುವ ಧರ್ಮವೊಂದು ಕೇವಲ ಒಂದು ಚಲನಚಿತ್ರ/ಪುಸ್ತಕ/ವರ್ಣಚಿತ್ರಗಳಿಂದ ಘಾತಗೊಳ್ಳುವಷ್ಟು ಶಿಥಿಲವಾಗಿದೆಯೇ ಎಂಬ ಗಹನವಾದ ಪ್ರಶ್ನೆ ಉದ್ಭವಿಸುವುದು ಸಹಜ. ಹಾಗೆಯೇ ಆ ಧರ್ಮಕ್ಕೆ ಸೇರಿದ ಎಷ್ಟು ಮಂದಿ ಈ ಕಲಾಪ್ರಕಾರಗಳ ಅಭಿವ್ಯಕ್ತಿಯನ್ನು ಗಮನಿಸಿ, ಗಂಭೀರವಾಗಿ ಪರಿಗಣಿಸುತ್ತಾರೆ ಎಂಬ ವಿಷಯವೂ ಜಿಜ್ಞಾಸಾರ್ಹ. ಮೇಲೆ ತಿಳಿಸಿದಂತೆ ಇಂತಹ ಬೆಂಕಿ ಹೊತ್ತಿಸುವ ಕೆಲಸವನ್ನು ಆ ಧರ್ಮದ ಅಲ್ಪಸಂಖ್ಯಾತ ಧರ್ಮಾಂಧರು ಅಂದರೆ 'ಫ್ರಿಂಜ್ ಎಲಿಮೆಂಟ್ಸ್' ಎನ್ನಬಹುದಾದವರಿಂದ ಜರುಗುವ ಕಾರ್ಯಾಚರಣೆ ಎಂಬುದು ಗಮನಾರ್ಹವಾದದ್ದು. ಅಂತಹವರಿಗೆ ಕಾಡುವುದು ತಮ್ಮ ಧರ್ಮ/ಮತ ಗಂಡಾಂತರದಲ್ಲಿದೆ, ಅದರ ಪ್ರಭಾವ ಕುಗ್ಗುತ್ತಿದೆ ಎಂಬ ಭಯ. ಜೊತೆಗೆ ತಮ್ಮ ಧರ್ಮವೇ ಶ್ರೇಷ್ಠ, ಇತರ ಧರ್ಮಗಳು ನಿಕೃಷ್ಟ ಎಂಬ ಭಾವನೆಯು ಧರ್ಮದ ಹೆಸರಿನಲ್ಲಿ ಕರಾಳಕೃತ್ಯಗಳನ್ನು ಎಸಗಲು ಪ್ರೇರೇಪಿಸುವಂಥ ವಿಚಾರ. ಇಂತಹ ವ್ಯಕ್ತಿಗಳು ಆ ಧರ್ಮ/ಮತವನ್ನು ತಮ್ಮ ಕಪಿಮುಷ್ಟಿಯಲ್ಲಿರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಎದುರಾಳಿಗಳನ್ನು ಸದೆಬಡಿಯುತ್ತಾರೆ. ವಿವೇಚನೆಯ ದನಿಗಳನ್ನು ಹತ್ತಿಕ್ಕುತ್ತಾರೆ. ಇವು ಧಾರ್ಮಿಕ ಮೂಲಭೂತವಾದಿಗಳ ಲಕ್ಷಣಗಳು. ಅವರು ಎಲ್ಲ ಧರ್ಮಗಳಲ್ಲೂ ಕಾಣಸಿಗುತ್ತಾರೆ.

ಕಳೆದ ವರ್ಷ 'ದಾ ವಿಂಚಿ ಕೋಡ್' ಎಂಬ ಆಂಗ್ಲ ಚಲನಚಿತ್ರದ ಬಗೆಗೆ ಕೆಲವು ಕಿರಿಸ್ತಾನ ಧರ್ಮಗುರುಗಳು ಆಕ್ಷೇಪ ವ್ಯಕ್ತಪಡಿಸಿದರು. ಐದು ರಾಜ್ಯ ಸರ್ಕಾರಗಳು ಈ ಚಲನಚಿತ್ರದ ಪ್ರದರ್ಶನವನ್ನು ನಿಷೇಧಿಸಿದವು. ಏಪ್ರಿಲ್ ೨೦೦೫ರಲ್ಲಿ 'ಟಾಂಗೊ ಚಾರ್ಲಿ' ಎಂಬ ಚಲನಚಿತ್ರವನ್ನು ಅಸ್ಸಾಮ್ ರಾಜ್ಯ ಸರ್ಕಾರ ಪ್ರತಿಬಂಧಿಸಿತು. ತೀರ ಇತ್ತೀಚೆಗೆ 'ಟ್ರಾಫಿಕ್ ಸಿಗ್ನಲ್' ಎಂಬ ಹಿಂದಿ ಚಲನಚಿತ್ರಕ್ಕೂ ಹಿಮಾಚಲಪ್ರದೇಶ ರಾಜ್ಯ ಸರ್ಕಾರದಿಂದ ಇದೇ ಗತಿ ದೊರಕಿತು.

ಪ್ರಸ್ತುತ ಸುದ್ದಿಯಲ್ಲಿರುವುದು 'ಪರ್ಝಾನಿಯಾ' ಎಂಬ ಚಲನಚಿತ್ರ. ಗುಜರಾತಿನಲ್ಲಿ ೨೦೦೨ರಲ್ಲಿ ಜರುಗಿದ ನರಮೇಧಕ್ಕೆ ಸಂಬಂಧಿಸಿದೆ ಈ ಚಿತ್ರದ ಕಥಾವಸ್ತು. ಆಗ ಸಂಭವಿಸಿದ ಗುಲ್ಬರ್ಗ್ ಸಂಘದ ಗಲಭೆಯಲ್ಲಿ ಪಾರ್ಸಿ ಕುಟುಂಬವೊಂದು ತಮಗೆ ಸಂಪೂರ್ಣ ರಕ್ಷಣೆ ದೊರೆಯುತ್ತದೆಯೆಂದು ಏಹ್ಸಾನ್ ಜಾಫ್ರಿ ಎಂಬ ಮಾಜಿ ಸಂಸದನ ಮನೆಯಲ್ಲಿ ಆಶ್ರಯ ಪಡೆಯುತ್ತದೆ. ಆದರೆ ಆಕ್ರಮಣಕಾರರು ಜಾಫ್ರಿಯ ಹಿಂದೆ ಬೀಳುತ್ತಾರೆ. ಪೊಲೀಸ್ ಕಮಿಷನರ್‌ನಿಂದ ಯಾವ ಸಹಾಯವೂ ದೊರೆಯುವುದಿಲ್ಲ. ದೆಹಲಿಗೆ ಮೊರೆಯಿತ್ತರೂ ಏನೂ ಪ್ರಯೋಜನವಾಗುವುದಿಲ್ಲ. ಉದ್ರಿಕ್ತ ಗುಂಪು ಜಾಫ್ರಿಯನ್ನು ಚಂಡಾಡುತ್ತದೆ. ಅನೇಕರು ಬಲಿಯಾಗುತ್ತಾರೆ. ಈ ಗೊಂದಲದಲ್ಲಿ ಆ ಪಾರ್ಸಿ ಕುಟುಂಬದ ಬಾಲಕ ನಾಪತ್ತೆಯಾಗುತ್ತಾನೆ. ಈಗಲೂ ಅವನ ಪತ್ತೆಯಾಗಿಲ್ಲ.

ಈ ನೈಜ ಘಟನೆಯನ್ನು ಆಧರಿಸಿದೆ ಅನಿವಾಸಿ ಭಾರತೀಯ ರಾಹುಲ್ ಧೋಲಾಕಿಯರ 'ಪರ್ಝಾನಿಯಾ'. ಧರ್ಮಾಂಧರ ಅಮಾನವೀಯ, ಹೀನ ನಡವಳಿಕೆ, ಕಳೆದುಹೋದ ಬಾಲಕನ ತಾಯಿಯ ಆಕ್ರಂದನ, ತಂದೆಯ ಹತಾಶೆ, ಸಹಬಾಳ್ವೆ ಮಾಡುತ್ತಿರುವವರ ಆಸಹ್ಯೆ ಮುಂತಾದವುಗಳ ಜೊತೆಗೆ ಮಾನವೀಯತೆಯ ತುಡಿತವೂ ಈ ಚಲನಚಿತ್ರದಲ್ಲಿ ಮಾರ್ಮಿಕವಾಗಿ ಬಿಂಬಿತವಾಗಿದೆ.

ಈ ಚಲನಚಿತ್ರದ ಪ್ರದರ್ಶನದಿಂದ ಆ ಬಾಲಕ ದೊರಕಬಹುದೆಂಬುದು ರಾಹುಲ್‌ರ ಆಶಯ. ಆದರೆ ಅದು ಸಾಕಾರಗೊಳ್ಳದೆ ಇರುವುದು ಬಾಬು ಬಜರಂಗಿ ಎಂಬ ನರಹಂತಕನಿಂದ. ಅವನು ನರೋಡ ಪಟಿಯ ಕಟ್ಟಳೆಯಲ್ಲಿ ಪ್ರಮುಖ ಆರೋಪಿ. ಗೋಧ್ರಾ ನಂತರದ ಗುಜರಾತಿನಲ್ಲಿ ಇವನ ಫರ್ಮಾನುಗಳೇ ನೀತಿ ಸಂಹಿತೆಗಳಾಗಿವೆ. ಇತ್ತೀಚಿನ ವರ್ಷಗಳಲ್ಲಿ ಅವನಿಗೆ ಎರಡು ಯೋಜನೆಗಳು ಅತ್ಯಂತ ಪ್ರಿಯವಾಗಿವೆ. ಒಂದು ಹಿಂದೂಯೇತರರನ್ನು ಮದುವೆಯಾದ ಹಿಂದೂ ಮಹಿಳೆಯರನ್ನು ಅಪಹರಿಸಿ, ಅವರನ್ನು ಬಲವಂತದಿಂದ ವಿಚ್ಛೇದನದ ಮೂಲಕ ಬೇರ್ಪಡಿಸುವುದು, ಹಾಗೂ ಇನ್ನೊಂದು – ಕಾಲೇಜುಗಳಲ್ಲಿ ಹಾಗೂ ಉದ್ಯಾನಗಳಲ್ಲಿ ಸಲಿಗೆಯಿಂದ ಇರುವ ಹುಡುಗ-ಹುಡುಗಿಯರನ್ನು ಬಡಿಯುವುದು. ಇವನ್ನು ಅರಿತೂ ಪೊಲೀಸರು ನಿಷ್ಕ್ರಿಯರಾಗಿದ್ದಾರೆ. ಆದರೆ ಜಾತಿ, ಮತ ಮತ್ತು ಹೆಣ್ಣಿನ ಪಾವಿತ್ರ್ಯವನ್ನು ಎತ್ತಿಹಿಡಿದಿದ್ದಾನೆ ಎಂದು ಬಜರಂಗಿ ಪ್ರಶಂಸೆಗೆ ಪಾತ್ರನಾಗಿದ್ದಾನೆ. ಈ ಅಯೋಗ್ಯನ ಪ್ರಕಾರ 'ಪರ್ಝಾನಿಯಾ' ಗುಜರಾತಿನ ಪ್ರತಿಷ್ಠೆಗೆ ಕಳಂಕ ತರುತ್ತಿದೆಯಂತೆ. ಆದ್ದರಿಂದ ಅದು ತೆರೆ ಕಾಣಬಾರದೆಂದು ಚಲನಚಿತ್ರ ಮಂದಿರಗಳ ಮಾಲಿಕರಿಗೆ ಧಮಕಿ ಹಾಕಿದ್ದಾನೆ. ಪರಿಣಾಮ, ಅವರು ಹೆದರಿ, ಈ ಚಲನಚಿತ್ರವನ್ನು ಪ್ರದರ್ಶಿಸದಿರಲು ನಿರ್ಧರಿಸಿದ್ದಾರೆ. ಇದರಿಂದ ಆ ರಾಜ್ಯದಲ್ಲಿ ಸಂಸ್ಕೃತಿ ರಕ್ಷಕರ ಪಡೆಯ ಅಟ್ಟಹಾಸ ಯಾವ ತೆರನಾದದ್ದು ಎಂಬುದು ವೇದ್ಯವಾಗುತ್ತದೆ. ಅಮೀರ್‌ಖಾನ್ ನರ್ಮದಾ ಬಚಾವೊ ಆಂದೋಳನಕ್ಕೆ ಬೆಂಬಲ ನೀಡಿದನೆಂದು ಆತನು ಅಭಿನಯಿಸಿದ 'ಫನ್ನಾ' ಎಂಬ ಹಿಂದಿ ಚಲನಚಿತ್ರ ಕಳೆದ ವರ್ಷ ಈ ಪುಂಡರ ವಿಕೃತ ಕೃತ್ಯಗಳಿಗೆ ಗುರಿಯಾದದ್ದನ್ನು ಇಲ್ಲಿ ಸ್ಮರಿಸಬಹುದು.

'ಪರ್ಝಾನಿಯಾ' ಚಲನಚಿತ್ರ ಪ್ರದರ್ಶನಕ್ಕೆ ಗುಜರಾತಿನಲ್ಲಿ ಅಡ್ಡಿ ಆತಂಕಗಳು ಎದುರಾಗಿರುವ ವಿಷಯದ ಬಗೆಗೆ ಕೆಲವು ಸುಶಿಕ್ಷಿತ (?)ರೆನಿಸಿಕೊಂಡವರು ಪ್ರತಿಕ್ರಿಯಿಸಿದ ರೀತಿ ಕಂಡು 'ಅಯ್ಯೊ' ಎಂಬ ಉದ್ಗಾರ ಹೊರಬಂದರೆ ಅಚ್ಚರಿಪಡಬೇಕಿಲ್ಲ. "ಪ್ರಸ್ತುತ ಗುಜರಾತ್ ಅಭಿವೃದ್ಧಿಯ ಹಾದಿಯಲ್ಲಿ ನಾಗಾಲೋಟದಿಂದ ದೌಡಾಯಿಸುತ್ತಿದೆ. ೨೦೦೨ರ ಘಟನೆಗಳು ಗತಕಾಲದಲ್ಲಿ ಹೂತುಹೋಗಿವೆ. ಅವುಗಳನ್ನು ಪ್ರಸ್ತಾಪಿಸುವುದರಿಂದ ಮಾಸಿದ ಗಾಯಗಳನ್ನು ಪುನಃ ಕೆದಕಿದಂತಾಗುತ್ತದೆ" ಎಂಬುದು ಅವರು ಮಂಡಿಸುವ ವಾದ.

ನಾವು ಸ್ವಾತಂತ್ರ್ಯ ಗಳಿಸಿದ ಸಮಯದಲ್ಲಿ ಜರುಗಿದ ರಾಷ್ಟ್ರದ ವಿಭಜನೆ ಅನೇಕರ ಮನಸ್ಸುಗಳನ್ನು ಒಡೆಯಿತು. ಅಪಾರ ಹಿಂಸೆ, ಸಾವು, ನೋವುಗಳು ಸಂಭವಿಸಿದವು. ಕೋಮುಸೌಹಾರ್ದ ತೀವ್ರ ಧಕ್ಕೆಗೆ ಒಳಗಾಯಿತು. ಪರಸ್ಪರ ದ್ವೇಷ ಅಪನಂಬಿಕೆಗಳು ಹಿಂದೂಗಳು ಹಾಗೂ ಮುಸಲ್ಮಾನರ ನಡುವೆ ಇದ್ದ ಕಂದರವನ್ನು ಹಿಗ್ಗಿಸಿದವು. ಅದಾಗಿ ೬೦ ವರ್ಷಗಳಾದರೂ ಇಂದಿಗೂ ಆಗ ಸಂಭವಿಸಿದ ಕರಾಳ ಘಟನೆಗಳನ್ನು ಆಧರಿಸಿದ ಪುಸ್ತಕಗಳು ಪ್ರಕಟಗೊಳ್ಳುತ್ತಿವೆ. ಹಲವು ಕಲಾಕೃತಿಗಳಿಗೆ ವಸ್ತುವೂ ಆಗಿವೆ. ಭೀಷ್ಮ ಸಾಹನಿ ಅವರ 'ತಮಸ್' ಎಂಬ ಕಾದಂಬರಿಯನ್ನು ಆಧರಿಸಿದ ಟೆಲಿಸೀರಿಯಲ್‌ನ್ನು ೧೯೮೦ರ ದಶಕದಲ್ಲಿ ದೂರದರ್ಶನಕ್ಕೆ ಖ್ಯಾತ ಸಿನಿಮಾ ನಿರ್ದೇಶಕ ಗೋವಿಂದ ನಿಹ್ಲಾನಿ ದಿಗ್ದರ್ಶಿಸಿದ್ದು ತಕ್ಷಣಕ್ಕೆ ನೆನಪಿಗೆ ಬರುವ ಒಂದು ನಿದರ್ಶನ. ಈ ಚಿತ್ರ ರಾಷ್ಟ್ರಾದ್ಯಂತ ಚರ್ಚೆಗೆ ಒಳಗಾಯಿತು. ಯಾವುದೇ ಒಂದು ಅಭಿವ್ಯಕ್ತಿಗೆ ಕಾಲದ ಪರಿಮಿತಿಯಿದೆಯೇ, ಅಥವಾ ಇರಬೇಕೇ, ಎಂಬುದು ಇಲ್ಲಿ ಉದ್ಭವಿಸುವ ಪ್ರಶ್ನೆಗಳು.

ಗುಜರಾತಿನ ೨೦೦೨ರ ಅಮಾನವೀಯ ಘಟನೆಗಳನ್ನು ಪ್ರಸ್ತಾಪಿಸುವುದರ ಕುರಿತು ಕ್ಯಾತೆ ತೆಗೆಯುವವರು ಯಾವ ರೀತಿಯ ಮನೋಭಾವದವರೆಂದು ಅರಿಯಬಹುದು. ಚಾರಿತ್ರಿಕ ಘಟನೆಗಳ ಬಗೆಗೆ ಈ ರೀತಿಯ ಅಭಿಮತ ಹೊಂದಿರುವ ಇಂತಹ ಮಂದಿ ಎಂದೋ ಇತಿಹಾಸದಲ್ಲಿ ಅನ್ಯಧರ್ಮೀಯರಿಂದ ಜರುಗಿದ ದೇವಾಲಯಗಳ ನಾಶ, ಮತಾಂತರಗಳು ಹಿಂದೂ ಧರ್ಮವನ್ನು ಕುಗ್ಗಿಸಿದವು ಎಂದು ವರ್ತಮಾನದಲ್ಲಿ ಬೊಬ್ಬೆ ಹಾಕುತ್ತಾರೆ! ಮಧ್ಯಯುಗದಲ್ಲೋ ಅಥವಾ ಅದರ ಹಿಂದಿನ ಯುಗದಲ್ಲೋ ಜರುಗಿದ ಪ್ರಮಾದವನ್ನು ಈ ಕಾಲಘಟ್ಟದಲ್ಲಿ ಸರಿಮಾಡುವ ದಿಶೆಯಲ್ಲಿ ಕೋಮುದಳ್ಳುರಿಯನ್ನು ಪಸರಿಸುತ್ತಾರೆ.

ಇರಲಿ... ಆದರೆ ಒಂದು ಚಲನಚಿತ್ರ ಸೆನ್ಸಾರ್ ಮಂಡಲಿಯಿಂದ ಪ್ರದರ್ಶನಕ್ಕೆ ಸೂಕ್ತ ಎಂದು ಪರವಾನಗಿ ಪಡೆದ ಮೇಲೆ, ಅದು ಯಾವ ರೀತಿಯ ಅಡೆತಡೆಯೂ ಇಲ್ಲದೆ ಪ್ರದರ್ಶನಗೊಳ್ಳುವಂಥ ವಾತಾವರಣವನ್ನು ಸೃಷ್ಟಿಸುವ ಜವಾಬ್ದಾರಿ ಆಯಾಯ ರಾಜ್ಯ

**ಆಸೆ**

**ಕಾಯುತ್ತದೆ ಬೀಜ ಮೊದಲ**
**ಮಳೆ ಹನಿಗಳಿಗೆ**
**ಓ... ಎಂದು ಅತ್ತ ಅಳುಮುಂಜಿ**
**ಮಗು, ತೊಟ್ಟಿಕ್ಕುವ ಹಾಲಿನ ನಗು**

**ವಾಸುದೇವ ನಾಡಿಗ್**
ಜವಾಹರ್ ನವೋದಯ ವಿದ್ಯಾಲಯ
ಏನಿಗದಲೆ, ಚಿಂತಾಮಣಿ, ಕೋಲಾರ




ಸರ್ಕಾರದ ಮೇಲೆ ಇರುತ್ತದೆ. 'ಪರ್ಝಾನಿಯಾ' ಚಲನಚಿತ್ರ ಪ್ರದರ್ಶನಗೊಂಡರೆ ಕಾನೂನು ಹಾಗೂ ಸುವ್ಯವಸ್ಥೆ ಕಾಪಾಡುವ ಸಮಸ್ಯೆ ಎದುರಾಗುತ್ತದೆ ಎಂದು ಗುಜರಾತ್ ರಾಜ್ಯ ಸರ್ಕಾರ ಮುಂದೊಡ್ಡಿರುವ ಕಾರಣ ಎಷ್ಟು ಸಮಂಜಸ ?

ದೆಹಲಿ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿರುವ ನೀರಾ ಚಂದೋಕ್ ಹೇಳುವಂತೆ ಸಿನಿಮಾ ನಿರ್ಮಿಸುವುದು ನಿರ್ಮಾಪಕನೊಬ್ಬನ ಹಕ್ಕು. ಅದನ್ನು ವೀಕ್ಷಿಸುವುದು ಅಥವಾ ಬಿಡುವುದು ವೀಕ್ಷಕರಿಗೆ ಬಿಟ್ಟ ವಿಷಯ. ಸಿನಿಮಾ ವೀಕ್ಷಿಸುವುದು ಆಯ್ಕೆಯ ವಿಚಾರ. ಆದರೆ 'ಪರ್ಝಾನಿಯಾ' ಚಲನಚಿತ್ರ ಪ್ರದರ್ಶನಕ್ಕೆ ಅಡ್ಡಿಯಾದಾಗ, ನಾಗರಿಕ ಸಮಾಜದ ಪುರೋಗಾಮಿ, ಉದಾರ ಮನಸ್ಸುಗಳು ಐಕ್ಯತೆಯಿಂದ ಮಧ್ಯೆ ಪ್ರವೇಶಿಸದೇ ಇರುವುದು ಇಂದಿನ ಸಾರ್ವಜನಿಕ ಜೀವನದ ದುರಂತ. ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ ಕೋಮುಗಳ ನಡುವೆ ವೈಷಮ್ಯ ಸೃಷ್ಟಿಸುವುದು, ಮಕ್ಕಳನ್ನು ಕೀಳಾಗಿ ಅಭಿವ್ಯಕ್ತಿಸುವಂಥ ವಿಷಯಗಳಲ್ಲಿ ಕೆಲವು ಕಟ್ಟುಪಾಡುಗಳಿರಬೇಕು ಎನ್ನುತ್ತಾರೆ. ಆದರೆ ಸಿನಿಮಾಗಳಿಗೆ ಯಾವುದೇ ಬಗೆಯ ಸೆನ್ಸಾರ್‌ಶಿಪ್ ಇರಬಾರದು ಎಂಬುದು ರಾಹುಲ್ ಧೋಲಾಕಿಯ ಅವರ ದೃಢ ನಿಲುವು. ಕೆಲವರು ಅಭಿವ್ಯಕ್ತಿಯ ವಿಷಯದಲ್ಲಿ ಸ್ವಯಂ ನಿಯಂತ್ರಣವಿದ್ದರೆ ಒಳಿತೆಂದು ಪ್ರತಿಪಾದಿಸುತ್ತಾರೆ. ಪ್ರಸ್ತುತ ಸೆನ್ಸಾರ್ ಮಂಡಲಿಯ ಮುಖ್ಯಸ್ಥೆಯಾಗಿರುವ ಶರ್ಮಿಲಾ ಟಾಗೋರ್ 'ಆಮ್ಚಿ ಮುಂಬಯಿ' ಎಂಬ ಚಲನಚಿತ್ರ ಕುರಿತು ಮಂಡಲಿಗೆ ಅಸಮಾಧಾನವಿರುವುದಾಗಿ ತಿಳಿಸಿದ್ದಾರೆ. ಉಗ್ರ ಪ್ರಾಂತೀಯತೆಯನ್ನು ಅನಾವರಣಗೊಳಿಸುತ್ತ ಮುಂಬಯಿ ತಮಗೆ ಮಾತ್ರ ಸೇರಿದ್ದು ಎಂಬ ಧೋರಣೆ ಹೊಂದಿರುವ ಚಿತ್ರಣ ಆರೋಗ್ಯಕರವಾದುದಲ್ಲ ಎಂಬುದು ಅವರ ಅಂಬೋಣ...

ಆದರೆ ಅಭಿವ್ಯಕ್ತಿ ಪ್ರಕಾರಗಳನ್ನು ಬಹಿಷ್ಕರಿಸುವ ವಿಷಯದಲ್ಲಿ ಪುರೋಗಾಮಿ ಸರ್ಕಾರ ಎಂದು ಗುರುತಿಸಲ್ಪಡುವ ಪಶ್ಚಿಮ ಬಂಗಾಳದ ಎಡರಂಗ ಸರ್ಕಾರವೂ ಸಹ ಕೆಲವು ವರ್ಷಗಳ ಹಿಂದೆ ಬಾಂಗ್ಲಾದೇಶಿ ಲೇಖಕಿ ತಸ್ಲಿಮಾ ನಸ್ರೀನ್‌ರ ವಿವಾದಾತ್ಮಕ ಪುಸ್ತಕವೊಂದನ್ನು ನಿಷೇಧಿಸಿತ್ತು. ಹೀಗೆ, ನಮ್ಮ ರಾಷ್ಟ್ರದಲ್ಲಿ ಎಲ್ಲ ರಾಜಕೀಯ ವಿಚಾರಧಾರೆಗಳ ಸರ್ಕಾರಗಳು ಒಂದಲ್ಲ ಒಂದು ಸಂದರ್ಭದಲ್ಲಿ ತಮ್ಮದೇ ಆದ ಕಾರಣಗಳಿಗಾಗಿ ಬಹಿಷ್ಕಾರ ಕ್ರಮವನ್ನು ಜರುಗಿಸಿರುವ ಅನೇಕ ಉದಾಹರಣೆಗಳಿವೆ.

ಮಧ್ಯಯುಗದಲ್ಲಿ ವೈಜ್ಞಾನಿಕ ಸಂಶೋಧನೆಗಳು ಧಾರ್ಮಿಕ ಸ್ಥಾಪಿತ ಹಿತಾಸಕ್ತಿಗಳ ದಮನಕಾರಿ ಕ್ರಮಗಳಿಗೆ ಬಲಿಯಾದವು. ಯೂರೋಪಿನಲ್ಲಿ ಕೋಪರ್ನಿಕಸ್, ಗೆಲಿಲಿಯೊ, ಬ್ರೂನೊ ಮುಂತಾದ ವಿಜ್ಞಾನಿಗಳು ನಾನಾ ಕಷ್ಟಕೋಟಲೆಗಳನ್ನು ಎದುರಿಸಬೇಕಾಯಿತು. ಹೀಗೆ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವಂಥ ಕ್ರಿಯೆಗಳು ನಿರಂತರವಾಗಿ ಜರುಗುತ್ತಲೇ ಬಂದಿವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಅವು ನಮ್ಮ ರಾಷ್ಟ್ರದಲ್ಲಿ ಜಾಸ್ತಿಯಾಗುತ್ತಿರುವುದು ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ ಶುಭಸೂಚಕವಲ್ಲ. ಹಾಗೆಯೇ, ಕಾವೇರಿ ಪ್ರಾಧಿಕಾರದ ತೀರ್ಪು ಹೊರಬಿದ್ದ ನಂತರ ತಮಿಳು ಟಿ.ವಿ. ಚಾನೆಲ್ಲುಗಳನ್ನು ಬಂದ್ ಮಾಡಿದ್ದುದರ ಹಿನ್ನೆಲೆಯಲ್ಲಿ ನಮ್ಮದು ಅನಧಿಕೃತ ಸೆನ್ಸಾರ್‌ಗಳ ರಾಷ್ಟ್ರವಾಗುತ್ತಿದೆಯೇ ಎಂಬ ಸಂಶಯ ಉದ್ಭವಿಸಿದರೆ, ಅದು ಸಹಜವೇ.

(ಆಧಾರ : ಹಲವು ಮೂಲಗಳು)

ಮ. ಶ್ರೀ. ಮುರಳಿಕೃಷ್ಣ
ನಂ. ೮೮೩/೧೦೧೬ (ಔಟ್‌ಹೌಸ್), ೧ನೇ 'ಇ' ಮುಖ್ಯರಸ್ತೆ (ಡಾ|| ಬಾಬು ರಾಜೇಂದ್ರಪ್ರಸಾದ್ ರಸ್ತೆ),
ಗಿರಿನಗರ ೨ನೇ ಹಂತ, ಬೆಂಗಳೂರು - ೫೬೦ ೦೮೫

# ಶಾಲಾ ಇತಿಹಾಸ ಪಠ್ಯಗಳಲ್ಲಿ ದೋಷಗಳು

**ಶಾಲಾ ವಿದ್ಯಾರ್ಥಿಗಳಿಗೆ ಪಠ್ಯವನ್ನು ಸಿದ್ಧಪಡಿಸುವವರು ಬೇರೆ ಮತ್ತು ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವವರು ಬೇರೆ. ಪಠ್ಯದ ಸಿದ್ಧತೆಯಲ್ಲಿ ಸರ್ಕಾರದ ಜವಾಬ್ದಾರಿ ಇರುತ್ತದೆ. ಪಠ್ಯವನ್ನು ಸಿದ್ಧಪಡಿಸಲು ಒಂದು ಸಮಿತಿಯನ್ನೂ ಸರ್ಕಾರ ನೇಮಿಸುತ್ತದೆ. ನೇಮಕಗೊಂಡ ಸಮಿತಿಯ ಸದಸ್ಯರು, ಸರ್ಕಾರದ ಸೂಚನೆಯಂತೆ ಪಠ್ಯವನ್ನು ನಿರ್ಧರಿಸುತ್ತಾರೆ. ಆಗ, ವಿದ್ಯಾರ್ಥಿಗಳ ಮಾನಸಿಕ ಮಟ್ಟವನ್ನು ಗಮನದಲ್ಲಿ ಇರಿಸಿಕೊಳ್ಳಲಾಗುತ್ತದೆ ಎಂಬ ತಿಳುವಳಿಕೆ ಸಾಮಾನ್ಯವಾಗಿ ಪೋಷಕರದಾಗಿರುತ್ತದೆ. ಅದು ಅಪೇಕ್ಷಿತವೂ ಹೌದು. ಚಿಕ್ಕಂದಿನಲ್ಲಿ ಮಕ್ಕಳು ಕಲಿತ ವಿಷಯಗಳು ಜೀವಮಾನಪರ್ಯಂತ ನೆನಪಾಗಿ ಉಳಿಯುತ್ತವೆ. ಆದ್ದರಿಂದ ಆಗ ಬೋಧಿಸುವ, ಅದರಲ್ಲೂ ಇತಿಹಾಸಕ್ಕೆ ಸಂಬಂಧಿಸಿದ, ವಿಷಯಗಳು ಸತ್ಯಕ್ಕೆ ಸಮೀಪವಾಗಿರುವುದು ಅವಶ್ಯಕ. ಇತಿಹಾಸ ಪಠ್ಯದಲ್ಲಿ ಆಕಸ್ಮಾತ್ತಾಗಿಯಾದರೂ ಉಳಿಯುವ ಲೋಪದೋಷಗಳು, ವಿದ್ಯಾರ್ಥಿಗಳ ದಿಕ್ಕು ತಪ್ಪಿಸುತ್ತವೆ.**

**ಡಾ|| ಎಚ್. ಎಸ್. ಗೋಪಾಲ ರಾವ್**



ಮಕ್ಕಳು ವಿದ್ಯಾಭ್ಯಾಸ ಮಾಡಬೇಕು; ಮಾಡಲೇಬೇಕು. ಪ್ರಾಥಮಿಕ ವಿದ್ಯಾಭ್ಯಾಸವು ಉಚಿತ ಹಾಗೂ ಕಡ್ಡಾಯ. ಇದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರ್ಕಾರ ಒಪ್ಪಿಕೊಂಡಿರುವ ತತ್ವ. ಇಂತಹ ಒಪ್ಪಿತ ವ್ಯವಸ್ಥೆಯಲ್ಲಿ ಯಾವುದೇ ವಿಷಯದ ಪಠ್ಯಸ್ವರೂಪವನ್ನು ನಿರ್ಧರಿಸುವ ಜವಾಬ್ದಾರಿ ಸರ್ಕಾರದ ಮೇಲಿರುತ್ತದೆ. ಸಾಮಾನ್ಯವಾಗಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಒಂದೇ ರೀತಿಯ ಶಿಕ್ಷಣ ವ್ಯವಸ್ಥೆ ಇರಬೇಕು ಎಂದು ಅಪೇಕ್ಷಿಸುವುದು ಸರಿಯಲ್ಲ ಎಂದು ವಾದಿಸುವ ಜಾಣರೂ ಇರಬಹುದು. ಪ್ರಜಾಪ್ರಭುತ್ವ ಎಂದರೆ ಸ್ವಾತಂತ್ರ್ಯದ ಪರಮಾಧಿಕಾರ ಎಂದು ತಿಳಿದಿರುವ ಮೇಧಾವಿಗಳೂ ಇರಬಹುದು. ಒಂದೇ ರೀತಿಯ ಶಿಕ್ಷಣ ವ್ಯವಸ್ಥೆಯನ್ನು ಒಪ್ಪಿಕೊಂಡರೆ, ಆಗ ಶಿಕ್ಷಣ ಮಾಧ್ಯಮ, ಶಿಕ್ಷಣ ಸ್ವರೂಪ ಇತ್ಯಾದಿ ವಿಷಯಗಳಲ್ಲಿ ಒಂದೇ ಸೂತ್ರ ಇರಬೇಕಾಗುತ್ತದೆ. ಒಂದೊಂದು ಭಾಷಾ ವರ್ಗಕ್ಕೆ ಒಂದು, ಒಂದೊಂದು ಜಾತಿಗೆ ಒಂದು ಎಂಬಂತಹ ವರ್ಗೀಕೃತ ಶಿಕ್ಷಣ ವ್ಯವಸ್ಥೆ ಇರಲು ಸಾಧ್ಯವಿಲ್ಲ. ಶಿಕ್ಷಣ ವ್ಯವಸ್ಥೆಯಲ್ಲೇ ಒಂದು ಒಪ್ಪಿತ ರೂಪ ಇಲ್ಲ ಎಂದ ಮೇಲೆ ಖಾಸಗಿ ಶಾಲೆಗಳು ತಮಗೆ ಇಷ್ಟ ಬಂದ ಪಠ್ಯಕ್ರಮವನ್ನು ಅನುಸರಿಸಬಹುದು. ಸರ್ಕಾರದ ಶಾಲೆಗಳಲ್ಲಾದರೂ ಏಕರೂಪದ ಶಿಕ್ಷಣ ವ್ಯವಸ್ಥೆಯನ್ನು ನಿರೀಕ್ಷಿಸುವುದು ನಾಗರಿಕನ ಹಕ್ಕು. ಅದಕ್ಕೆ ಅವಕಾಶ ಕಲ್ಪಿಸುವುದು ಯಾವುದೇ ಸರ್ಕಾರದ ಕರ್ತವ್ಯ ಮತ್ತು ಜವಾಬ್ದಾರಿ. ಹಾಗೆ ಮಾಡುವುದರಿಂದ ಭೇದಭಾವರಹಿತ ಸಮಾಜವನ್ನು ರೂಪಿಸಲು ಸಾಧ್ಯವಾಗಬಹುದು. ಧನಬಲ ಉಳ್ಳವರಿಗೊಂದು ಶಿಕ್ಷಣ ಪದ್ಧತಿ, ಅಧಿಕಾರಬಲ ಇರುವವರಿಗೊಂದು ಶಿಕ್ಷಣ ಪದ್ಧತಿ, ರಾಜಕೀಯಬಲ ಇರುವವರಿಗೊಂದು ಶಿಕ್ಷಣ ಪದ್ಧತಿ ಎಂಬಂತಹ ಅವಕಾಶ ಕಲ್ಪಿಸಿದರೆ ಸಮಾನತೆ ಮತ್ತು ಭ್ರಾತೃತ್ವಕ್ಕೆ ಪ್ರಾಶಸ್ತ್ಯವಿರುವ ಪ್ರಜಾಪ್ರಭುತ್ವ ವ್ಯವಸ್ಥೆ ಅರ್ಥ ಕಳೆದುಕೊಳ್ಳುತ್ತದೆ. ಸಮಾನತೆ ಮತ್ತು ಭ್ರಾತೃತ್ವಗಳು ಪುಸ್ತಕದಲ್ಲಿ ಮಾತ್ರ ಉಳಿಯುತ್ತವೆ. ಆಚರಣೆಯಲ್ಲಿ ಏನೂ ಸಾಧನೆ ಆಗುವುದಿಲ್ಲ. ಮಾತು ಮತ್ತು ಕೃತಿಗಳ ನಡುವಿನ ಅಂತರ ಹೆಚ್ಚಿದಂತೆಲ್ಲ ಅಸಹನೆ ಸಹಜವಾಗಿಯೇ ಹೆಚ್ಚುತ್ತದೆ. ಸಮಾನತೆ ಮತ್ತು ಭ್ರಾತೃತ್ವವನ್ನು ಸಾಧಿಸಲು ಕನಿಷ್ಠ ವಿದ್ಯಾಭ್ಯಾಸ ವಾದರೂ ಏಕರೂಪದ್ದಾಗಬೇಕು. ಒಂದೇ ಮಾದರಿಯ ವಿದ್ಯಾಭ್ಯಾಸ ದೊರೆಯಬೇಕು.

ವಿಜ್ಞಾನ ಮತ್ತು ಗಣಿತ ವಿಷಯಗಳಲ್ಲಿನ ಹೊಸ ಆವಿಷ್ಕಾರಗಳು, ಇತಿಹಾಸ, ಭೂಗೋಳ ಇತ್ಯಾದಿ ವಿಷಯಗಳಲ್ಲಿನ ಹೊಸ ಸಂಶೋಧನೆಗಳಿಗೆ ತಕ್ಕಂತೆ ಪಠ್ಯ ಮತ್ತು ಪಠ್ಯ ವಿಧಾನಗಳು ಬದಲಾಗಬೇಕು. ಇದು ಅನಿವಾರ್ಯ. ಯಾವುದೇ ಹೊಸ ವಿಷಯ ಮತ್ತು ವಿಚಾರಗಳಿಂದ ವಿದ್ಯಾರ್ಥಿಗಳು ವಂಚಿತರಾಗಬಾರದು. ಹಾಗೆ ಪಠ್ಯವನ್ನು ಬದಲಾಯಿಸುವಾಗ ವಿದ್ಯಾರ್ಥಿಗಳ ಬೌದ್ಧಿಕ ಸಾಮರ್ಥ್ಯವನ್ನು ಗಮನಿಸಬೇಕು. ಐದನೆಯ ತರಗತಿಯ ವಿದ್ಯಾರ್ಥಿಗಳಿಗೆ ಮಾಹಿತಿ ತಂತ್ರಜ್ಞಾನ, ಅಂತರಿಕ್ಷಜ್ಞಾನ, ಪ್ರಪಂಚದ ಇತಿಹಾಸ, ಪ್ರಪಂಚದ ಇಂದಿನ ಆಗುಹೋಗುಗಳ ಬಗ್ಗೆ ತಿಳಿಸುವ ಅವಶ್ಯಕತೆ ಇರುವುದಿಲ್ಲ ಎಂಬುದು ಸಾಮಾನ್ಯ ತಿಳುವಳಿಕೆ. ಭೌತಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ವಿಜ್ಞಾನಿಯನ್ನು ಐದನೆಯ ತರಗತಿಯ ಪಠ್ಯವನ್ನು ಸಿದ್ಧಪಡಿಸಲು ಮನವಿ ಮಾಡಿದರೆ, ಆ ವಿಜ್ಞಾನಿಯು ಭೌತಶಾಸ್ತ್ರದ ಮೂಲಪಾಠಗಳ ಬದಲು ತನಗೆ ಪ್ರಿಯವಾದ ಅಣುವಿಜ್ಞಾನವನ್ನು ಸೇರಿಸಿದರೆ, ಅದನ್ನು ಒಪ್ಪಿಕೊಳ್ಳುವುದು ಕಷ್ಟವಾದರೂ ಅನಿವಾರ್ಯ. ಯಾವುದೇ ವಿಷಯಕ್ಕೆ ಸಂಬಂಧಿಸಿದ ಪಠ್ಯಗಳು ಅಂದಂದಿನ ರಾಜಕೀಯ ಪರಿಸ್ಥಿತಿಗೆ ತಕ್ಕಂತೆ ಬದಲಾಗುವುದು ಸಮರ್ಥನೀಯವಲ್ಲ.

ಪ್ರಾಥಮಿಕ ಹಂತದಲ್ಲಿ ಆಯಾ ವಿಷಯಕ್ಕೆ ಸಂಬಂಧಿಸಿದಂತೆ, ತನ್ನ ಸುತ್ತಲ ಪರಿಸರದ ಮೂಲಕ ಆಸಕ್ತಿ ಹುಟ್ಟುವಂತೆ ಮೂಲಪಾಠಗಳನ್ನು ಕಲಿಸಿದರೆ, ಪ್ರೌಢ ಹಂತದಲ್ಲಿ ಅದೇ ವಿಷಯಗಳ ಬಗ್ಗೆ ಹೆಚ್ಚಿನ ಜ್ಞಾನಾರ್ಜನೆಗೆ ವಿದ್ಯಾರ್ಥಿಯನ್ನು ಅಣಿಗೊಳಿಸಬಹುದು. ಮಕ್ಕಳ ಮನಸ್ಸನ್ನು ತಿಳಿದ ಶಿಕ್ಷಣ ತಜ್ಞರು, ಆಯಾ ವಿಷಯಗಳಿಗೆ ಸಂಬಂಧಿಸಿದ ತಜ್ಞರ ನೆರವಿನೊಂದಿಗೆ ಸಿದ್ಧಪಡಿಸಿದ ಪಠ್ಯ ಯಾವುದೇ ಸಮಸ್ಯೆಯನ್ನು ಸೃಷ್ಟಿಸುವ ಸಾಧ್ಯತೆಗಳು ಕಡಿಮೆ. ಅಂತಹ ಸಂದರ್ಭದಲ್ಲೂ ಶಿಕ್ಷಣ ತಜ್ಞ ಅಥವಾ ವಿಷಯ ತಜ್ಞ ತನ್ನ ಮೇಧಾವಿತನವನ್ನು ಬದಿಗಿಟ್ಟು ಆಯಾ ತರಗತಿಯ ಮಕ್ಕಳ ಬೌದ್ಧಿಕ ಸಾಮರ್ಥ್ಯಕ್ಕೆ ತಕ್ಕಂತೆ ಪಠ್ಯವನ್ನು ಸಿದ್ಧಪಡಿಸಬೇಕು. ತನ್ನ ವಿದ್ವತ್ತಿನ ಅಭಿವ್ಯಕ್ತಿಗೆ ಪಠ್ಯಕ್ರಮದಲ್ಲಿ ಅವಕಾಶ ಹುಡುಕುವುದು ವಿದ್ಯಾರ್ಥಿಗಳಿಗೆ ನೀಡುವ ತೊಂದರೆಯಾಗುತ್ತದೆ. ಸಂಶೋಧನ ಸಂಸ್ಥೆಗಳು ಅಂದಂದಿನ ಅರಿವಿನ ಮಟ್ಟಕ್ಕೆ ತಕ್ಕಂತೆ ಸಂಶೋಧನೆಯನ್ನು ಪ್ರೋತ್ಸಾಹಿಸಬೇಕು. ಅಲ್ಲಿನ ಸಂಶೋಧನಾ ಕ್ರಮಕ್ಕೂ ಪ್ರಾಥಮಿಕ ಮತ್ತು ಪ್ರೌಢ ಹಂತದ ಪಠ್ಯಕ್ರಮಕ್ಕೂ ತಳುಕು ಹಾಕುವುದು ಸರಿಯಾಗಲಾರದು.

ಶಾಲಾ ಪಠ್ಯಗಳನ್ನು ಸಿದ್ಧಪಡಿಸುವಾಗ ಅನುಸರಿಸುವ ಕ್ರಮ ಏನು? ಮಕ್ಕಳ ಗ್ರಹಣ ಶಕ್ತಿಯನ್ನು

ಉತ್ತೇಕ್ಷಿಸಲಾಗುತ್ತದೆಯೆ ? ಮಕ್ಕಳಿಗೆ ಹಲವು ಭಾಷೆ ಮತ್ತು ವಿಷಯಗಳನ್ನು ಕಲಿಯುವ ಸಾಮರ್ಥ್ಯ ಸಹಜವಾಗಿಯೇ ಇರುತ್ತದೆ ಎಂಬ ಕಾರಣದಿಂದ ಹೆಚ್ಚಿನ ಹೊರೆಯ ಪಠ್ಯವನ್ನು ಹೇರಲಾಗುತ್ತದೆಯೆ ? ಶಾಲಾ ಪಠ್ಯಪುಸ್ತಕಗಳನ್ನು, ವಿಶೇಷವಾಗಿ ಸರ್ಕಾರಿ ಶಾಲಾ ಪಠ್ಯಪುಸ್ತಕಗಳನ್ನು, ನಿರ್ದಿಷ್ಟವಾದ ಒಂದು ಸಮಿತಿಯೇ ಸಿದ್ಧಪಡಿಸುತ್ತದೆ. ಇದು ಖಾಸಗಿ ಶಾಲೆಗಳಿಗೆ ಪೂರ್ಣವಾಗಿ ಅನ್ವಯವಾಗುವುದಿಲ್ಲ. ಆದರೆ, ಕೆಲವು ವಿಷಯಗಳಿಗೆ ಸರ್ಕಾರದ ಪಠ್ಯಪುಸ್ತಕ ಬಳಸಲೇಬೇಕಾಗುತ್ತದೆ. ಅಂದಂದಿನ ಅವಶ್ಯಕತೆಗಳಿಗೆ ತಕ್ಕಂತೆ ಸಿದ್ಧವಾಗುವ ಯಾವುದೇ ಪಠ್ಯಪುಸ್ತಕ ವಿದ್ಯಾರ್ಥಿಗಳಿಗೆ ಮಾಹಿತಿ ಕೋಶ. ಪ್ರಾಥಮಿಕದಿಂದ ಪ್ರೌಢಶಾಲಾ ಹಂತದವರೆಗಂತೂ ಪಠ್ಯಪುಸ್ತಕವೇ ವಿದ್ಯಾರ್ಥಿಗಳಿಗೆ ಭಗವದ್ಗೀತೆ ಅಥವಾ ಬೈಬಲ್ ಅಥವಾ ಕುರಾನ್. ಅದು ಅವರಿಗೆ ಕೈಪಿಡಿ. ಬಹುತೇಕ ಯಾವುದೇ ವ್ಯಕ್ತಿಯ ನೆನಪಿನಲ್ಲಿ ಉಳಿಯುವುದು ಆ ಹಂತದವರೆಗಿನ ವಿದ್ಯಾಭ್ಯಾಸದ ಸಮಯದಲ್ಲಿ ಕಲಿತ ವಿಚಾರಗಳು. ವ್ಯಕ್ತಿತ್ವವನ್ನು ರೂಪಿಸುವುದೇ ಆ ವಿದ್ಯಾಭ್ಯಾಸ. ಆದ್ದರಿಂದ ಪ್ರಾಥಮಿಕ ಹಂತದಿಂದ ಪ್ರೌಢ ವಿದ್ಯಾಭ್ಯಾಸದವರೆಗೆ ಸಿದ್ಧಪಡಿಸುವ ಪಠ್ಯ ವಿದ್ಯಾರ್ಥಿಗಳ ಭವಿಷ್ಯ ರೂಪಿಸುವಲ್ಲಿ ಹೆಚ್ಚು ಮಹತ್ವ ಪಡೆಯುತ್ತದೆ.

ಯಾವುದೇ ವಿಷಯದ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಪಠ್ಯವನ್ನು ವಿಶ್ವವಿದ್ಯಾಲಯಗಳ ವಿದ್ವಾಂಸರು ಸಿದ್ಧಪಡಿಸಿದರೆ, ವಿದ್ಯಾರ್ಥಿಗಳಿಗೆ ಅದು ತಲುಪುತ್ತದೆಯೆ ಎಂದು ಪ್ರಶ್ನಿಸಬೇಕು. ವಿಶ್ವವಿದ್ಯಾಲಯಗಳ ವಿದ್ವಾಂಸರು, ಆಕಸ್ಮಾತ್ ಅಲ್ಲಿರಬಹುದಾದ ದೋಷಗಳನ್ನು ಪತ್ತೆಹಚ್ಚಿ ತಿದ್ದಬೇಕು. ಮಕ್ಕಳಿಗೆ ತಲುಪುವ ಪಠ್ಯ ದೋಷರಹಿತವಾಗಿರಬೇಕು. ಯಾವುದೇ ದೋಷ ಪಠ್ಯದಲ್ಲಿ ಉಳಿದರೆ ಅದು ವಿದ್ಯಾರ್ಥಿಗೆ ಜೀವಮಾನ ಪರ್ಯಂತ ನೆನಪಿನಲ್ಲಿ ಉಳಿಯುತ್ತದೆ. ಒಮ್ಮೆ ಮನಸ್ಸಿನಲ್ಲಿ ಅಚ್ಚೊತ್ತಿದ ಯಾವುದೇ ವಿಷಯವನ್ನು ಸುಲಭವಾಗಿ ಬದಲಾಯಿಸಲು ಸಾಧ್ಯವಿಲ್ಲ. ಪ್ರಾಥಮಿಕ ಮತ್ತು ಪ್ರೌಢ ಶಾಲಾ ಹಂತದ ಪಠ್ಯದಲ್ಲಿ ಕನ್ನಡ ಭಾಷೆಯ ಮೊದಲ ಶಾಸನ ಕಪ್ಪೆ ಅರಭಟ್ಟನದು ಎಂದು ತಿಳಿಸಿದರೆ, ಅದನ್ನು ಅವನು ನಂಬುತ್ತಾನೆ. ಮುಂದೆಂದೊ ಒಂದು ದಿನ ಅವನು ವಿದ್ವಾಂಸ ಎನಿಸಿಕೊಂಡಾಗ, ಅವನು ತಾನು ನಂಬಿದ ವಿಷಯವನ್ನೇ ಪ್ರತಿಪಾದಿಸುತ್ತಾನೆ. ಸತ್ಯ ಎಲ್ಲೋ ಗುಹೆ ಸೇರುತ್ತದೆ. ಇಂತಹ ಅಚಾತುರ್ಯಗಳು ಘಟಿಸದಂತೆ ಎಚ್ಚರ ವಹಿಸಬೇಕಾದ್ದು ವಿದ್ವಾಂಸರ ಮತ್ತು ಬುದ್ಧಿವಂತರ ಕೆಲಸ. ವಿದ್ವಾಂಸರೇ ಎಚ್ಚರ ತಪ್ಪಿದರೆ, ವಿದ್ಯಾರ್ಥಿಗಳಿಗೆ ಸರಿದಾರಿ ತೋರಿಸುವವರು ಯಾರು ? ಮುಂದೆ ಒಂದು ದಿನ ಸರಿ ಮತ್ತು ತಪ್ಪುಗಳನ್ನು ಹುಡುಕುವುದಕ್ಕೆ ಮಾತ್ರವೇ ಕಾಲವನ್ನು ಮೀಸಲಿಡಬೇಕಾಗುತ್ತದೆ. ಹಿಂದೆ ನಮ್ಮ ಹಿರಿಯರು ತಿಳಿದೊ, ತಿಳಿಯದೆಯೊ ಮಾಡಿರುವ ಎಷ್ಟೋ ತಪ್ಪುಗಳನ್ನು ಸರಿಪಡಿಸಲು ಇಂದು ನಾವು ಕಿತ್ತಾಡುತ್ತಿರುವಾಗ, ನಾವೇ ಮತ್ತಷ್ಟು ತಪ್ಪುಗಳನ್ನು ಮಾಡುವುದು ವಿಪರ್ಯಾಸ ಎನಿಸಿಕೊಳ್ಳುತ್ತದೆ. ಮುಂದಿನ ಜನತೆಗೆ ತಪ್ಪುಗಳನ್ನು ವರ್ಗಾಯಿಸುವ ಬೇಜವಾಬ್ದಾರಿತನ ನಮ್ಮದಾಗಬಾರದು. ನಮ್ಮ ತಪ್ಪುಗಳಿಗೆ ನಾವೇ ಬೆಲೆ ತೆರಬೇಕಾಗುತ್ತದೆ. ಮುಂದಿನ ಪೀಳಿಗೆ ನಮ್ಮನ್ನು ಕ್ಷಮಿಸುವುದಿಲ್ಲ.

ಈಚೆಗೆ ಪ್ರಾಥಮಿಕ ಐದನೆಯ ತರಗತಿಯಿಂದ ಪ್ರೌಢ ಹತ್ತನೆಯ ತರಗತಿಯವರೆಗಿನ ಸಮಾಜ ವಿಜ್ಞಾನದ ಪಠ್ಯಪುಸ್ತಕದಲ್ಲಿ ಇತಿಹಾಸದ ಪಠ್ಯವನ್ನು ಓದಬೇಕಾದ ಸಂದರ್ಭ ಎದುರಾಯಿತು. ಓದುತ್ತಾ ಕೆಲವು ಸಂದರ್ಭಗಳಲ್ಲಿ ನಾನು ಗೊಂದಲಕ್ಕೆ ಗುರಿಯಾದೆ. ನಾನು ತಿಳಿದಿರುವ ಇತಿಹಾಸವೇ ತಪ್ಪಿರಬೇಕು ಎಂಬ ಅನುಮಾನ ಕಾಡಿತು. ಇತಿಹಾಸ ತಜ್ಞರ ನೇತೃತ್ವದಲ್ಲಿ ಸಿದ್ಧವಾದ ಪಠ್ಯ ಪುಸ್ತಕ ಅದು. ಕರ್ನಾಟಕದ ಪ್ರಾಥಮಿಕ ಶಾಲಾ ಮಕ್ಕಳಿಗೆ ಇತಿಹಾಸದ ಮೊದಲ ಪಾಠವೇ ಭಾರತ ದೇಶ ಮತ್ತು ಜನಾಂಗ. ಅಧ್ಯಾಯದ ಆರಂಭದಲ್ಲೇ 'ಕುತೂಹಲಕರ ಸಂಗತಿಗಳ ಸರಮಾಲೆಯೇ ಇತಿಹಾಸ' ಎಂಬ ವ್ಯಾಖ್ಯೆ ಇದೆ. ಈ ವ್ಯಾಖ್ಯೆಯು ಕುತೂಹಲಕರವಲ್ಲದ ಸಂಗತಿಗಳು ಇತಿಹಾಸವಲ್ಲ ಎಂಬ ಸಂದೇಶ ನೀಡುತ್ತಿದೆಯೆ ಎಂಬ ಅನುಮಾನ ಕಾಡುತ್ತದೆ. ಬಹುಶಃ ಮೂಲದಲ್ಲಿ ಸಿದ್ಧಪಡಿಸಲಾದ ಇಂಗ್ಲಿಷ್ ಪಠ್ಯಪುಸ್ತಕದಲ್ಲಿ ಸರಿಯಾದ ವ್ಯಾಖ್ಯಾನವಿದ್ದು, ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರಗೊಂಡಾಗ ಸಂದೇಶ ತಪ್ಪಾಗಿರಬಹುದು ಎಂದು ಸಮಾಧಾನ ತಾಳಬೇಕಾಗುತ್ತದೆ. ಪ್ರಾಕ್ತನ ಭಾರತ ಎಂಬ ಶೀರ್ಷಿಕೆಯ ಎರಡನೆಯ ಅಧ್ಯಾಯದಲ್ಲಿ ಭೂಮಿಯ ಉಗಮದ ಬಗ್ಗೆ ಪ್ರಸ್ತಾಪಿಸುತ್ತಾ, ಬಿಗ್‌ಬ್ಯಾಂಗ್ (ಮಹಾಸ್ಫೋಟ)ದ ಬಗ್ಗೆ ತಿಳಿಸುತ್ತಾರೆ. ಐದನೆಯ ತರಗತಿಯ ಅಂದರೆ ಸುಮಾರು ೧೦ ವರ್ಷದ ವಿದ್ಯಾರ್ಥಿಗಳಿಗೆ ಮೊದಲ ತ್ರೈಮಾಸಿಕದಲ್ಲೇ ಬಿಗ್‌ಬ್ಯಾಂಗ್ ಸಿದ್ಧಾಂತದ ವಿವರಣೆ ನೀಡುವುದು ಅವರ ಮಟ್ಟಕ್ಕೆ ಹೆಚ್ಚು ಎನಿಸುವುದಿಲ್ಲವೆ ?




ಐದನೆಯ ತರಗತಿಯ ಎರಡನೆಯ ತ್ರೈಮಾಸಿಕದ ಪಠ್ಯಪುಸ್ತಕದಲ್ಲಿ ಬುದ್ಧನ ಬಗ್ಗೆ ಬರೆಯುತ್ತಾ, 'ತಾನು ಹುಟ್ಟಿದ ಅನಂತರ ತನ್ನ ತಾಯಿಯನ್ನು ಕಳೆದುಕೊಂಡನು' ಎಂದಿದೆ. ಯಾರಾದರೂ ಜಾಣ ಮಕ್ಕಳು 'ಹುಟ್ಟುವ ಮುಂಚೆಯೇ ಯಾರಾದರೂ ತಾಯಿಯನ್ನು ಕಳೆದುಕೊಂಡಿದ್ದಾರೆಯೇ' ಎಂಬ ಪ್ರಶ್ನೆಯನ್ನು ಹಾಕಿಕೊಂಡು ಉತ್ತರ ಪಡೆಯಬೇಕಾಗುತ್ತದೆ.

ಐದನೆಯ ತರಗತಿಯ ಮೂರನೆಯ ತ್ರೈಮಾಸಿಕದ ಪಠ್ಯವು ನಾವು ಮಾಡಬಹುದಾದ ತಪ್ಪುಗಳಿಗೆ ಒಂದು ಮಾದರಿಯಾಗಿದೆ. ಪ್ರಾಚೀನ ದಕ್ಷಿಣ ಭಾರತ ಎಂಬ ಶೀರ್ಷಿಕೆಯಲ್ಲಿ ಆರಂಭವಾಗುವ ಎರಡನೆಯ ಅಧ್ಯಾಯದ ಮೊದಲೇ 'ಸಂಘಂ ಸಾಹಿತ್ಯ'ದ ಪ್ರಸ್ತಾಪ ಇದೆ. ಎರಡು ಪ್ಯಾರಾಗಳಲ್ಲಿನ ಒಂಬತ್ತು ಸಾಲುಗಳಲ್ಲಿ ಈ ವಿಷಯ ಇದೆ. ದಕ್ಷಿಣ ಭಾರತದ ಇತಿಹಾಸವೆಂದರೆ, ಕೇವಲ ತಮಿಳುನಾಡಿನ ಇತಿಹಾಸವಲ್ಲ. ಸಂಘಂ ಸಾಹಿತ್ಯ ಮತ್ತು ಇಡಿಯಾಗಿ ದಕ್ಷಿಣ ಭಾರತದ ಇತಿಹಾಸಕ್ಕೆ ಹೆಚ್ಚಿನ ಸಂಬಂಧವಿಲ್ಲ ಎಂಬುದು ಇತಿಹಾಸ ಬಲ್ಲ ಎಲ್ಲರಿಗೂ ತಿಳಿದ ವಿಷಯ. ತಮಿಳುನಾಡಿನ ಇತಿಹಾಸವನ್ನು ಸಂಘಂ ಸಾಹಿತ್ಯದಿಂದ ಹೊರತುಪಡಿಸುವಂತಿಲ್ಲ. ಪ್ರಾಸಂಗಿಕ ಎಂಬಂತೆ ಪ್ರಸ್ತಾಪಿತವಾದ ಸಂಘಂ ಸಾಹಿತ್ಯದ ವಿಚಾರವು ಮತ್ತೆಲ್ಲೂ ಆಕಸ್ಮಾತ್ತಾಗಿ ಎಂಬಂತೆಯೂ ಲಭ್ಯವಿಲ್ಲ. ಹೀಗೆ ಪ್ರಾಸಂಗಿಕವಾಗಿ ಪ್ರಸ್ತಾಪಿತವಾಗುವ ಯಾವುದೇ ವಿಚಾರಗಳ ಔಚಿತ್ಯವನ್ನು ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳುವುದು ಹೇಗೆ? ಅಂತಹ ಪ್ರಾಸಂಗಿಕ ವಿಚಾರಗಳ ತಿಳುವಳಿಕೆ ವಿದ್ಯಾರ್ಥಿಗಳಿಗೆ ಅವಶ್ಯಕವೆ ? ನೆರೆಹೊರೆಯ ರಾಜ್ಯಗಳ ವಿಷಯವನ್ನು ಪ್ರಸ್ತಾಪಿಸುವಾಗ, ಆ ರಾಜ್ಯಗಳ ಭಾಷೆಯ ಪದಗಳ ಉಚ್ಚಾರಣೆಯನ್ನು ಗಂಭೀರವಾಗಿ ಗಮನಿಸಬೇಕಾದ್ದು ಅನಿವಾರ್ಯ. ತಮಿಳಿನ 'ಪತ್ತುಪಾಟ್ಟು', 'ಎಟ್ಟುತ್ತೊಗೈ' ಮತ್ತು 'ತೋಲ್‌ಕಾಪ್ಪಿಯಂ'ಗಳು ಇಲ್ಲಿ 'ಪತ್ತ್‌ಪಾಟ್ಟ್' 'ಎಟ್ಟೊತ್ತೊಗೈ' ಮತ್ತು 'ತೊಳ್‌ಕಾಪ್ಪಿಯಂ' ಆಗಿವೆ.

'ಬನವಾಸಿ ಕದಂಬರು ಸಂಸ್ಕೃತ ಭಾಷೆಯನ್ನು ಮತ್ತು ದೇವನಾಗರಿ ಲಿಪಿಯನ್ನು ದಕ್ಷಿಣ ಭಾರತದಲ್ಲಿ ಜನಪ್ರಿಯಗೊಳಿಸಿದವರಲ್ಲಿ ಒಬ್ಬರು' (ಪು. ೪, ೫) ಎಂಬ ಹೇಳಿಕೆಯಲ್ಲಿ ಸಂಸ್ಕೃತ ಭಾಷೆಯನ್ನು ಜನಪ್ರಿಯಗೊಳಿಸಿದರು ಎಂಬ ಅಭಿಪ್ರಾಯವನ್ನು ಒಪ್ಪಬಹುದಷ್ಟೇ ಹೊರತು, ದೇವನಾಗರಿ ಲಿಪಿಯ ಬಗೆಗಿನ ಅಭಿಪ್ರಾಯವನ್ನು ಒಪ್ಪುವುದು ಕಷ್ಟ. ಕದಂಬ ಮಯೂರವರ್ಮನ ಶಾಸನದ ಭಾಷೆ ಸಂಸ್ಕೃತ ಎಂದು ಈಚೆಗೆ ಒಪ್ಪಿಕೊಳ್ಳಲಾಗಿದೆ. ಆದರೆ ಆ ಶಾಸನದ ಲಿಪಿ ಮಾತ್ರ ಬ್ರಾಹ್ಮಿ. ಆ ಕಾಲದ ಸಂಸ್ಕೃತ ಶಾಸನಗಳೂ ಇರುವುದು ಕನ್ನಡ ಲಿಪಿಯಲ್ಲಿ. ಕದಂಬರ ಕಾಲಕ್ಕೆ ದೇವನಾಗರಿ ಲಿಪಿ ಇದ್ದ ಉದಾಹರಣೆ ಸದ್ಯಕ್ಕಂತೂ ಲಭ್ಯವಿಲ್ಲ. ಆದ್ದರಿಂದ ದೇವನಾಗರಿ ಲಿಪಿಯನ್ನು ಕದಂಬರು ಜನಪ್ರಿಯಗೊಳಿಸಿದರು ಎಂಬ ಮಾತನ್ನು ಒಪ್ಪುವುದು ಕಷ್ಟವಾಗುತ್ತದೆ. ಕದಂಬರು ಹಲ್ಮಿಡಿಯಲ್ಲಿ ಕನ್ನಡ ಶಾಸನ ಹಾಕಿಸಿದರು ಮತ್ತು ಇದು ಕನ್ನಡ ಭಾಷೆಯಲ್ಲಿ ಬರೆಸಿದ ಮೊಟ್ಟಮೊದಲ ಶಾಸನ ಎಂಬ ಹೇಳಿಕೆಯಿದೆ (ಪು. ೫). ಕನ್ನಡ ಶಾಸನ 'ಹಾಕಿಸಿದ ಮತ್ತು ಬರೆಸಿದ' ಮೊಟ್ಟಮೊದಲ ಶಾಸನ ಎಂಬ ವಾಕ್ಯಕ್ಕೆ ಅರ್ಥವಿಲ್ಲ. ಸದ್ಯಕ್ಕೆ ದೊರೆತಿರುವ ಕನ್ನಡ ಭಾಷೆಯ ಮೊದಲ ಶಾಸನ ಹಲ್ಮಿಡಿಯದು ಎಂದು ಒಪ್ಪಿಕೊಳ್ಳಬಹುದು. ಇದೇ ಅಧ್ಯಾಯದ ಪಕ್ಷಿನೋಟದಲ್ಲಿ (ಪು. ೭) 'ಶಾತವಾಹನರ ಹಲ್ಮಿಡಿ ಶಾಸನ' ಎಂದಿದೆ. ಪು. ೫ ರಲ್ಲಿ ಕದಂಬರ ವಿಷಯ ಪ್ರಸ್ತಾವನೆಯ ಸಂದರ್ಭದಲ್ಲಿ ಹಲ್ಮಿಡಿ ಶಾಸನ ಕನ್ನಡ ಭಾಷೆಯ ಮೊದಲ ಶಾಸನ ಎಂದು ನಿರೂಪಿತವಾಗಿದ್ದು, ಏಳನೆಯ ಪುಟದಲ್ಲಿ, ಅದೂ ಪಕ್ಷಿನೋಟದಲ್ಲಿ, ಶಾತವಾಹನರಿಗೆ ಹೇಗೆ ಸೇರ್ಪಡೆಯಾಯಿತು ? ವಿದ್ಯಾರ್ಥಿ ಯಾವ ಹೇಳಿಕೆಯನ್ನು ಒಪ್ಪಿಕೊಳ್ಳಬೇಕು ? ಅದೇ ಪಕ್ಷಿನೋಟದಲ್ಲಿ 'ನಮ್ಮ ದೇಶದ ಇತಿಹಾಸದಲ್ಲಿ ದೀರ್ಘಕಾಲ ಆಡಳಿತ ನಡೆಸಿದ ವಂಶ ಕದಂಬರದಾದರೆ, ಕನ್ನಡನಾಡಿನಲ್ಲಿ ಗಂಗರದು' ಎಂಬ ಹೇಳಿಕೆ ಇದೆ. ದೇಶ ಯಾವುದು ಮತ್ತು ಕನ್ನಡ ನಾಡು ಯಾವುದು ? ಉಲ್ಲೇಖಿತ ಸಂದರ್ಭದಲ್ಲಿ ಕನ್ನಡನಾಡನ್ನು

ಹೊರತುಪಡಿಸಿದ ದೇಶ ಯಾವುದು ? ಕದಂಬರಲ್ಲಿ ಆದಿಕದಂಬರಿಗೂ ಗೋವೆ ಹಾಗೂ ಹಾನಗಲ್ಲು ಕದಂಬರಿಗೂ ನಿರಂತರತೆ ಇಲ್ಲ. ಈ ಕದಂಬ ಶಾಖೆಗಳ ನಡುವೆ ಸುಮಾರು ಐದು ಶತಮಾನಗಳ ಅಂತರವಿದೆ.

'ನರಸಿಂಹನು ಪುಲಿಕೇಶಿಯನ್ನು ಕೊಂದು ಸೋಲಿಸಿ, ಅವನನ್ನು ರಣರಂಗದಲ್ಲಿ ಕೊಂದು, ಸೇಡು ತೀರಿಸಿಕೊಂಡನಲ್ಲದೆ, ಬಾದಾಮಿಯನ್ನು ಬಹುಕಾಲ ಆಕ್ರಮಿಸಿ ಕೊಂಡನು.' ಈ ಹೇಳಿಕೆಯ ಸಮರ್ಥನೆಗೆ ಪಠ್ಯಪುಸ್ತಕವನ್ನು ಸಿದ್ಧಪಡಿಸಿದ ಮತ್ತು ಪರಿಶೀಲಿಸಿದವರ ಬಳಿ ಇರುವ ಆಕರಗಳೇನು ಎಂದು ಪ್ರಶ್ನಿಸಬೇಕಾಗುತ್ತದೆ. ಯುದ್ಧದಲ್ಲಿ ಪೊಲೆಕೇಶಿ ಸೋತದ್ದು ನಿಜ, ಆದರೆ, ಸತ್ತದ್ದಕ್ಕೆ ಇರುವ ಆಕರಗಳೇನು ?

ಆರನೇ ತರಗತಿಯ ಇತಿಹಾಸ ಪಠ್ಯವು ಮಧ್ಯಯುಗೀನ ಭಾರತವನ್ನು ಕುರಿತಿದೆ. ಕಾಲದ ದೃಷ್ಟಿಯಿಂದ ಕ್ರಿ.ಶ. ೮೦೦ರಿಂದ ೧೨೦೦ರವರೆಗಿನ ಅವಧಿಯನ್ನು ಮಧ್ಯಯುಗ ಎಂದು ಪರಿಗಣಿಸಲಾಗಿದೆ. ಆದರೆ, ಈ ಪಠ್ಯಪುಸ್ತಕದ ಆರಂಭದಲ್ಲೇ ಕೊಟ್ಟಿರುವ ಒಂದು ವಿವರಣೆಯು ಈ ಕೆಳಕಂಡಂತಿದೆ : 'ಮಾನವ ಇತಿಹಾಸದಲ್ಲಿ ಮಧ್ಯಯುಗೀನ' ಎಂಬ ಪದಕ್ಕೆ ಒಂದು ನಿರ್ದಿಷ್ಟ ಅರ್ಥವಿದೆ. ಆಯ್ದ ಕೆಲವು ಸಾಂಪ್ರದಾಯಿಕ ಮೌಲ್ಯಗಳನ್ನೂ ಈ ಪದವು ಸೂಚಿಸುತ್ತದೆ. ಮಧ್ಯಯುಗದ ಜನ ಬದಲಾವಣೆಗಳನ್ನು ವಿರೋಧಿಸುತ್ತಿದ್ದರೆಂದು ಭಾವಿಸಲಾಗಿದೆ. ಹಾಗೆಯೇ ವ್ಯಕ್ತಿ ಜೀವನ ಮತ್ತು ಸಮಾಜದ ಪ್ರಗತಿಗೆ ಅವರು ವಿರೋಧಿಗಳಾಗಿದ್ದರೆಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಈ ಕಾಲಾವಧಿಯಲ್ಲಿ ಪ್ರಭುಗಳು, ಸಾಮಂತರು, ಪುರೋಹಿತರು ಮತ್ತು ಶ್ರೀಮಂತ ವ್ಯಾಪಾರಿಗಳಿಂದ ಕೂಡಿದ ಮೇಲುವರ್ಗವು ಪ್ರಬಲವಾಗಿತ್ತು. ಮಹಿಳೆಯರು ಮತ್ತು ಶ್ರಮಜೀವಿಗಳ ಮೇಲೆ ಕೆಲವೊಂದು 'ಮೌಲ್ಯ' (ಕಟ್ಟುಪಾಡು)ಗಳನ್ನು ವಿಧಿಸಲಾಗಿತ್ತು. ಇವರು ಚೆನ್ನಾಗಿ ಬದುಕಬೇಕಾದರೆ ಈ ಕಟ್ಟುಪಾಡುಗಳನ್ನು ತಪ್ಪದೆ ಅನುಸರಿಸಬೇಕೆಂದು ತಿಳಿಸಲಾಗುತ್ತಿತ್ತು.' ಈ ವಿವರಣೆಯನ್ನು ದಕ್ಷಿಣ ಭಾರತದ, ಅದರಲ್ಲೂ ವಿಶೇಷವಾಗಿ ಕರ್ನಾಟಕದ ಬಸವೇಶ್ವರ, ರಾಮಾನುಜಾಚಾರ್ಯ, ಅಕ್ಕಮಹಾದೇವಿ ಮತ್ತಿತರರ ಸಾಧನೆಗಳೊಡನೆ ಹೋಲಿಸಿದಾಗ ವಿವರಣೆ ಸರಿಯೇ ಅಥವಾ ನಮ್ಮ ತಿಳುವಳಿಕೆ ಸರಿಯೇ ಎಂಬ ಪ್ರಶ್ನೆ ಕಾಡುತ್ತದೆ. ದಕ್ಷಿಣ ಭಾರತದಲ್ಲಿ ಮಧ್ಯಕಾಲದ ಆರಂಭ ಎಂಬ ಪ್ರತ್ಯೇಕ ಅಧ್ಯಾಯದಲ್ಲಿ ದಕ್ಷಿಣ ಭಾರತದ ಪ್ರಸಿದ್ಧ ರಾಜವಂಶಗಳು ಮತ್ತು ಆಯಾ ರಾಜವಂಶಗಳ ಪ್ರಸಿದ್ಧ ದೊರೆಗಳನ್ನು ಪರಿಚಯಿಸುತ್ತಾರೆ. ಆ ಕಾಲದ ಸಾಂಸ್ಕೃತಿಕ ಸಾಧನೆಗಳನ್ನು ಪ್ರಸ್ತಾಪಿಸುತ್ತಾ, ನೃಪತುಂಗನೇ ಕವಿರಾಜಮಾರ್ಗದ ಲೇಖಕನಿರಬಹುದೆಂಬ ಅಭಿಪ್ರಾಯವಿದೆ ಎಂದು ತಿಳಿಸುತ್ತಾರೆ. ನೃಪತುಂಗನ ಕಾಲದಲ್ಲಿ ಕವಿರಾಜಮಾರ್ಗವನ್ನು ರಚಿಸಿದವನು ಶ್ರೀವಿಜಯ ಎಂಬ ಕವಿ ಎಂದು ಈಗಾಗಲೆ ಒಪ್ಪಿಕೊಳ್ಳಲಾಗಿದೆ. ಇಂತಹ ಒಪ್ಪಿತ ತೀರ್ಮಾನಗಳು ಪಠ್ಯಪುಸ್ತಕ ವನ್ನು ಪರಿಶೀಲಿಸಿದ ಇತಿಹಾಸ ವಿದ್ವಾಂಸರ ಗಮನಕ್ಕೆ ಬಂದಿಲ್ಲವೆ? ಮತಧರ್ಮ ಮತ್ತು ಸಮಾಜ ಸುಧಾರಕರನ್ನು ಕುರಿತಿರುವ ಎರಡನೆಯ ಅಧ್ಯಾಯವು ಈಗಿನಷ್ಟು ವಿಸ್ತಾರವಾಗುವ ಆವಶ್ಯಕತೆ ಇತ್ತೆ? ವಿಜಯನಗರದ ಸಾಮ್ರಾಜ್ಯದಲ್ಲಿ ಕನ್ನಡದ ಕವಿಗಳು ಯಾರೂ ಇರಲಿಲ್ಲವೆ? ಮಧ್ಯಯುಗೀನ ಭಾರತದಿಂದ ಛತ್ರಪತಿ ಶಿವಾಜಿಯವರೆಗಿನ ಕಾಲದವರೆಗಿನ ಇತಿಹಾಸವನ್ನು ಆರನೆಯ ತರಗತಿಗೆ ಪಠ್ಯ ಮಾಡಲಾಗಿದೆ. ಇದರಲ್ಲಿ ದೆಹಲಿ ಸುಲ್ತಾನರು, ಬಹಮನಿ ಸುಲ್ತಾನರು, ಮೊಘಲ್ ಸಾಮ್ರಾಟರೂ ಸೇರುತ್ತಾರೆ.

ಏಳನೆಯ ತರಗತಿಯ ಇತಿಹಾಸ ಪಠ್ಯವು ಪುನರುಜ್ಜೀವನ ಕಾಲದಿಂದ ಆರಂಭಗೊಂಡು ರಾಷ್ಟ್ರೀಯ ಚಳವಳಿಯ ಕೊನೆಯ ಘಟ್ಟದವರೆಗೂ ಇದೆ. ಮೊದಲ ಮೂರು ಪಾಠಗಳಲ್ಲಿ ವಿಶ್ವದ ಇತಿಹಾಸವಿದ್ದರೆ, ನಂತರದ ಪಾಠಗಳಲ್ಲಿ ಭಾರತದ ಇತಿಹಾಸವಿದೆ. ಏಳನೆಯ ಪಾಠದಲ್ಲಿ ಮೈಸೂರು ಸುಲ್ತಾನರ ಬಗ್ಗೆ ಮಾಹಿತಿ ಇದೆ. ಐದರಿಂದ ಏಳನೆಯ ತರಗತಿಯವರೆಗೆ ವಿಶ್ವದ ಇತಿಹಾಸದಿಂದ ಆರಂಭಿಸಿ, ಭಾರತ ಸ್ವಾತಂತ್ರ್ಯ ಸಂಗ್ರಾಮದ ವರೆಗೂ ತಿಳಿಸಿದಂತೆಯೇ, ಆದರೆ ಮತ್ತಷ್ಟು ವಿಸ್ತಾರವಾಗಿ, ಎಂಟನೆಯ ತರಗತಿಯಿಂದ ಹತ್ತನೆಯ ತರಗತಿಯ ಇತಿಹಾಸದವರಿಗೆ ತಿಳಿಸಲಾಗಿದೆ.

ಎಂಟನೆಯ ತರಗತಿಯ ಪಠ್ಯಪುಸ್ತಕದಲ್ಲಿ ಕಾಲಗಣನೆಯ ಬಗ್ಗೆ ಪ್ರಸ್ತಾಪ ಮಾಡಿ, ಭಾರತದ ಭೌಗೋಳಿಕ ಲಕ್ಷಣಕ್ಕೆ ಪ್ರವೇಶಿಸಲಾಗಿದೆ. ಭಾರತವೂ ಸೇರಿದಂತೆ ಪ್ರಪಂಚದ ಬಹುಮುಖ್ಯ ನಾಗರಿಕತೆಗಳನ್ನು ಪರಿಚಯಿಸಲಾಗಿದ್ದು, ಭಾರತದಲ್ಲಿ ಸಿಂಧೂನದಿಯ ಬಯಲಿನ ನಾಗರಿಕತೆಯ ನಂತರ ವೇದಕಾಲದ ನಾಗರಿಕತೆಯ ಪರಿಚಯ ಮಾಡಿಕೊಡಲಾಗಿದೆ. ದಕ್ಷಿಣ ಭಾರತದಲ್ಲಿ ಚೋಳರ ಆಳ್ವಿಕೆಯವರೆಗೆ ಎಂಟನೆಯ ತರಗತಿಯ ಪಠ್ಯದಲ್ಲಿ ಸೇರ್ಪಡೆಯಾಗಿದೆ. ಹದಿನೈದನೆಯ ಅಧ್ಯಾಯವು ಸಾತವಾಹನರಿಗೆ ಸಂಬಂಧಿಸಿದ್ದು (ಐದನೆಯ ತರಗತಿಯ ಪಠ್ಯದಲ್ಲಿ ಶಾತವಾಹನರಾಗಿದ್ದವರು ಇಲ್ಲಿ ಸಾತವಾಹನರಾಗಿದ್ದಾರೆ). ಈ ಭಾಗದಲ್ಲಿ 'ಕನ್ನಡ ಪದಗಳು ಶಾಸನದಲ್ಲಿ ಬಂದಿದ್ದರಿಂದ




'ಹೊಸತು' ಸಹ ಸಂಪಾದಕರಲ್ಲೊಬ್ಬರಾದ ಪ್ರೊ|| ಚಿ. ಶ್ರೀನಿವಾಸರಾಜು ಕಳೆದ ಜುಲೈ ತಿಂಗಳು ಪತ್ನಿ ಸಮೇತರಾಗಿ ಯೂರೋಪಿನ ಕೆಲವು ದೇಶಗಳಲ್ಲಿ ಪ್ರವಾಸ ಮಾಡಿಬಂದರು. 'ಹೊಸತು' ಕಚೇರಿಯಲ್ಲಿ ಏರ್ಪಡಿಸಿದ್ದ ಸಂತೋಷಕೂಟದಲ್ಲಿ ತಮ್ಮ ಪ್ರವಾಸದ ಅನುಭವಗಳನ್ನು ಹಂಚಿಕೊಂಡರು. ಚಿತ್ರದಲ್ಲಿ(ಎಡದಿಂದ ಬಲಕ್ಕೆ) ಶ್ರೀಮತಿ ಸರಸ್ವತಿ ರಾಜು, ಪ್ರೊ|| ಚಿ. ಶ್ರೀನಿವಾಸರಾಜು ಮತ್ತು ಪ್ರೊ|| ಜಿ. ವೆಂಕಟಸುಬ್ಬಯ್ಯನವರು.

ಕನ್ನಡವು ಆಡುಮಾತಾಗಿ ಪ್ರಚಲಿತದಲ್ಲಿತ್ತು' ಎಂಬ ನಿರ್ಣಯಕ್ಕೆ ಬರಲಾಗಿದೆ (ಪು. ೬೩). ಯಾವುದೇ ವಿಷಯವನ್ನು ಗಂಭೀರವಾಗಿ ಸ್ವೀಕರಿಸುವ ವಿದ್ಯಾರ್ಥಿ ಇಂತಹ ನಿರ್ಣಯಗಳಿಂದ ಯಾವುದೇ ಭಾಷೆ ಬರಹರೂಪದಲ್ಲಿದ್ದರೆ, ಅದನ್ನು ಆಡುಭಾಷೆ ಎಂದು ಒಪ್ಪಿಕೊಳ್ಳಬೇಕು ಎಂಬ ತೀರ್ಮಾನಕ್ಕೆ ಬರುತ್ತಾನೆ. ಇನ್ನು ಒಂದೆರಡು ಶತಮಾನ ಕಳೆದ ನಂತರ, ಸ್ವಾತಂತ್ರ್ಯಾನಂತರವೂ ಭಾರತದ ಅನೇಕ ರಾಜ್ಯಗಳ ಸರ್ಕಾರಿ ಆದೇಶ ಮತ್ತು ಇತರ ಪತ್ರ ವ್ಯವಹಾರವನ್ನು ಇಂಗ್ಲಿಷ್ ಭಾಷೆಯಲ್ಲೇ ಮಾಡುತ್ತಿದ್ದ ಕಾರಣ, ಆ ಹೊತ್ತಿಗೆ ಇಂಗ್ಲಿಷ್ ಭಾಷೆ ಆಡುಭಾಷೆಯಾಗಿ ಪ್ರಚಲಿತದಲ್ಲಿತ್ತು ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಇಲ್ಲಿನ ೧೬ನೆಯ ಅಧ್ಯಾಯದಲ್ಲಿ ಕದಂಬರು ಮತ್ತು ಗಂಗರ ಬಗ್ಗೆ ಮಾಹಿತಿಗಳಿದ್ದು ಮಯೂರವರ್ಮನ ಉಲ್ಲೇಖಕ್ಕೆ ಸಂಬಂಧಿಸಿದಂತೆ 'ಚಿತ್ರದುರ್ಗ ಬಳಿಯ ಚಂದ್ರವಳ್ಳಿಯ ಇವನ ಶಾಸನದಲ್ಲಿ ಅಲ್ಲಿ ಕೆರೆಯನ್ನು ರಚಿಸಿದ' ಎಂಬ ಹೇಳಿಕೆ ಇದೆ. ಕೆರೆಯನ್ನು ಯಾರೂ ರಚಿಸಲು ಸಾಧ್ಯವಿಲ್ಲ, ಕೆರೆಯನ್ನು ಯಾರು ಬೇಕಾದರೂ ನಿರ್ಮಿಸಬಹುದು. ಇದು ಅನುವಾದದ ಆಭಾಸ. ಇತಿಹಾಸಕಾರರು ಭಾಷೆಯ ಬಗ್ಗೆ ಅನಾದರ ತೋರಿದರೆ, ಈಗಾಗಲೇ ಪ್ರಸ್ತಾಪಿಸಿರುವಂತೆ, ಇಂಗ್ಲಿಷ್‌ನ 'ಕನ್‌ಸ್ಟ್ರಕ್ಷನ್' ಎಲ್ಲ ಸಂದರ್ಭಗಳಲ್ಲಿಯೂ 'ರಚನೆ'ಯೇ ಆಗುತ್ತದೆ. ಕೆರೆಯೂ ರಚನೆಯಾಗುತ್ತದೆ. ಕಟ್ಟಡವೂ ರಚನೆಯಾಗುತ್ತದೆ. ಪ್ರಸ್ತಾಪಿಸುತ್ತಿರುವ ಪಠ್ಯಪುಸ್ತಕದ ಪ್ರಕಾರ ಕಲಚುರಿ ಬಿಜ್ಜಳನು ಪ್ರಬಲನಾಗಿ ಕಲ್ಯಾಣವನ್ನು ಆಕ್ರಮಿಸಿದ್ದು ೧೧೬೨ರಲ್ಲಿ (ಪು. ೮೦). ಕರಡು ತಿದ್ದುವ ವಿಷಯದಲ್ಲಿ ಆಗಿರುವ ಲೋಪಗಳಿಗೆ ಈ ಪಠ್ಯಪುಸ್ತಕದ ಪು. ೭೦ ಮತ್ತು ೭೧ ಒಂದು ಮಾದರಿಯಾಗಿದೆ.

ಶಾಲಾ ವಿದ್ಯಾರ್ಥಿಗಳಿಗೆ ಪಠ್ಯವನ್ನು ಸಿದ್ಧಪಡಿಸುವವರು ಬೇರೆ ಮತ್ತು ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವವರು ಬೇರೆ. ಪಠ್ಯದ ಸಿದ್ಧತೆಯಲ್ಲಿ ಸರ್ಕಾರದ ಜವಾಬ್ದಾರಿ ಇರುತ್ತದೆ. ಪಠ್ಯವನ್ನು ಸಿದ್ಧಪಡಿಸಲು ಒಂದು ಸಮಿತಿಯನ್ನೂ ಸರ್ಕಾರ ನೇಮಿಸುತ್ತದೆ. ನೇಮಕಗೊಂಡ ಸಮಿತಿಯ ಸದಸ್ಯರು, ಸರ್ಕಾರದ ಸೂಚನೆಯಂತೆ ಪಠ್ಯವನ್ನು ನಿರ್ಧರಿಸುತ್ತಾರೆ. ಆಗ, ವಿದ್ಯಾರ್ಥಿಗಳ ಮಾನಸಿಕ ಮಟ್ಟವನ್ನು ಗಮನದಲ್ಲಿ ಇರಿಸಿಕೊಳ್ಳಲಾಗುತ್ತದೆ ಎಂಬ ತಿಳುವಳಿಕೆ ಸಾಮಾನ್ಯವಾಗಿ ಪೋಷಕರದಾಗಿರುತ್ತದೆ. ಅದು ಅಪೇಕ್ಷಿತವೂ ಹೌದು. ಚಿಕ್ಕಂದಿನಲ್ಲಿ ಮಕ್ಕಳು ಕಲಿತ ವಿಷಯಗಳು ಜೀವಮಾನಪರ್ಯಂತ ನೆನಪಾಗಿ ಉಳಿಯುತ್ತವೆ. ಆದ್ದರಿಂದ ಆಗ ಬೋಧಿಸುವ, ಅದರಲ್ಲೂ ಇತಿಹಾಸಕ್ಕೆ ಸಂಬಂಧಿಸಿದ, ವಿಷಯಗಳು ಸತ್ಯಕ್ಕೆ ಸಮೀಪವಾಗಿರುವುದು ಅವಶ್ಯಕ. ಇತಿಹಾಸ ಪಠ್ಯದಲ್ಲಿ ಆಕಸ್ಮಾತ್ತಾಗಿಯಾದರೂ ಉಳಿಯುವ ಲೋಪದೋಷಗಳು, ವಿದ್ಯಾರ್ಥಿಗಳ ದಿಕ್ಕು ತಪ್ಪಿಸುತ್ತವೆ.

ಡಾ|| ಎಚ್. ಎಸ್. ಗೋಪಾಲ ರಾವ್
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲೂಕು - ೫೬೨ ೧೧೩, ಬೆಂಗಳೂರು ಗ್ರಾಮಾಂತರ ಜಿಲ್ಲೆ

# ಬದುಕಿನ ನಿಗೂಢ ಸತ್ಯಗಳು

## — ಒಂದು ಚಿಂತನೆ



**ಮ**ನುಕುಲದ ಚರಿತ್ರೆಯನ್ನು ಅವಲೋಕಿಸಿದಾಗ ಕಂಡುಬರುವ ಮುಖ್ಯ ಸಂಗತಿ ಎಂದರೆ ನಾವೇ ರೂಪಿಸಿಕೊಂಡಿರುವ ಧರ್ಮಗಳಿಂದಾಗಿರುವ ಅನಾನುಕೂಲಗಳು ಮತ್ತು ಅಪಾಯಗಳು. ಜಗತ್ತಿನಲ್ಲಿ ನಡೆದಿರುವ ಬಹುಪಾಲು ಯುದ್ಧಗಳು, ಘರ್ಷಣೆಗಳಿಗೆ ಧರ್ಮವೇ ಕಾರಣವಾಗಿರುವುದು ವಿಪರ್ಯಾಸ. ಈ ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬರೂ ಯಾವುದಾದರೊಂದು ಧರ್ಮದಲ್ಲಿ ಗುರುತಿಸಲ್ಪಡುತ್ತಾರೆ ಎಂಬುದು ವಾಸ್ತವ ಸತ್ಯ. ನಮ್ಮ ಧರ್ಮ ಕುರಿತು ನಾವೇ ಅರ್ಥೈಸಿದಾಗ, ವ್ಯಾಖ್ಯಾನಿಸಿದಾಗ ಅಥವಾ ಟೀಕಿಸಿದಾಗ ಯಾವುದೇ ಘರ್ಷಣೆ ಆಗುವುದಿಲ್ಲ. ಒಂದು ವೇಳೆ ವಿರೋಧ ವ್ಯಕ್ತವಾದರೂ ತಾರಕಕ್ಕೇರುವುದಿಲ್ಲ. ಇನ್ನೊಂದು ಧರ್ಮವನ್ನು ಅರ್ಥೈಸಲು, ವ್ಯಾಖ್ಯಾನಿಸಲು, ಟೀಕಿಸಲು ಪ್ರಯತ್ನ ನಡೆದಾಗ ತೀವ್ರವಾದ ಪ್ರತಿರೋಧ ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ತನ್ನ ಧರ್ಮದಲ್ಲಿ ಜೀವಿಸು, ಇತರ ಧರ್ಮೀಯರನ್ನು ಪ್ರೀತಿಸು ಎಂಬ ಮಾತು ಕೇಳಿಬರುತ್ತದೆ. ಇತರರ ಧಾರ್ಮಿಕ ಭಾವನೆಗಳಿಗೆ ಧಕ್ಕೆ ತರುವವರು, ಪರೋಕ್ಷವಾಗಿ ತಮ್ಮ ಧರ್ಮಕ್ಕೆ ಕೆಡಕುಂಟು ಮಾಡುತ್ತಾರೆ. ಜಗತ್ತಿನ ಬಹುಪಾಲು ಎಲ್ಲ ಧರ್ಮಗಳೂ ಶಾಂತಿ, ನೆಮ್ಮದಿ, ಸಾಮರಸ್ಯ ಜೀವನವನ್ನೇ ಹೇಳಿದರೂ, ಅವುಗಳ ನಂಬಿಕೆ, ಆಚರಣೆಗಳಲ್ಲಿ ಕೆಲವು ಮೂಲಭೂತ ವ್ಯತ್ಯಾಸಗಳೂ ಇರುತ್ತವೆ. ಧರ್ಮ ಮತ್ತು ಧಾರ್ಮಿಕ ಆಚರಣೆಗಳೂ ನಿಂತ ನೀರಾಗಬಾರದು. ಧರ್ಮ ಸದಾ ಪರಿವರ್ತನಶೀಲವಾಗಿರಬೇಕು. ಕಾಲಕ್ಕೆ ತಕ್ಕಂತೆ ಜೀವಪರ ಕಾಳಜಿಗಳಿಂದ ಕೂಡಿರಬೇಕು. ಎಂದೋ ಮಾಡಿದ ಕಟ್ಟುಪಾಡುಗಳು, ಜೀವನ ವಿಧಾನಗಳು ಇಂದಿಗೂ ಪಾಲಿಸಲ್ಪಡಬೇಕೆಂಬ ಹಠ, ಬಲವಂತಗಳೇ ಎಲ್ಲ ಘರ್ಷಣೆಗಳಿಗೂ ಕಾರಣವಾಗುತ್ತಿರುವ ಸತ್ಯ ನಮ್ಮ ಮುಂದಿದೆ. ಹೊಸ ವಿಚಾರಗಳನ್ನು, ಆಲೋಚನೆಗಳನ್ನು, ಮಾನವೀಯ ಮೌಲ್ಯಗಳನ್ನು ಎಲ್ಲ ಧರ್ಮಗಳೂ ಅಳವಡಿಸಿಕೊಳ್ಳಬೇಕು, ಆಗ ಮಾತ್ರ ಧರ್ಮ ಜೀವಪರವಾಗುತ್ತದೆ. ಬದಲಾವಣೆಗೆ ಒಳಪಡದ ಧರ್ಮ, ಆಚರಣೆಯಲ್ಲಿ ಜಡವಾಗುತ್ತಾ, ಅಮಾನವೀಯತೆಯಿಂದ ಕೂಡಿ ಜೀವ ವಿರೋಧಿಯಾಗುವ ಸಾಧ್ಯತೆಗಳಿರುತ್ತವೆ. ತಾವು ನಂಬಿದ ಧರ್ಮವನ್ನು ಇತರರ ಮೇಲೆ ಹೇರುವ, ಆಸೆ ಆಮಿಷಗಳ ಮೂಲಕ ಭಯ, ಭೀತಿ, ಜೀವ ಬೆದರಿಕೆ ಒಡ್ಡುವ ಮೂಲಕ ಮತಾಂತರಿಸುವ ಪ್ರಯತ್ನಗಳಿಂದಾಗಿ ಯುದ್ಧಗಳಾಗಿವೆ, ರಕ್ತಪಾತಗಳಾಗಿವೆ. ಅನೇಕ ನಾಗರಿಕತೆಗಳು ನಾಶವಾಗಿವೆ. ಹಿಂಸೆ ಎನ್ನುವುದು ಯಾವ ಕಾಲಕ್ಕೂ ಧರ್ಮದ ಉದ್ದೇಶವಾಗಬಾರದು.

ಮತ್ತೊಂದು ಧರ್ಮದಲ್ಲಿ ಏನು ವೈರುಧ್ಯಗಳಿವೆ ಎಂದು ಹುಡುಕುವುದಕ್ಕಿಂತಲೂ ತನ್ನ ಧರ್ಮದಲ್ಲಿರುವ ಯಾವ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು ಜೀವವಿರೋಧಿಯಾಗಿವೆ, ಅವುಗಳನ್ನು ಜೀವಪರವಾಗಿ ಮಾನವೀಯ ಅಂತಃಕರಣದಿಂದ ಕೂಡಿರುವಂತೆ ಮಾಡುವ ಮಾರ್ಗ ಯಾವುದು ಎಂಬುದು ಮುಖ್ಯ. ಈ ನಿಟ್ಟಿನಲ್ಲಿ ಇತರ ಧರ್ಮಗಳಲ್ಲಿರುವ ಉತ್ತಮ ಅಂಶಗಳನ್ನು ಆಯ್ದುಕೊಂಡು ಅಳವಡಿಸಿಕೊಳ್ಳುವುದು ಒಳ್ಳೆಯದು. ಸಮಕಾಲೀನ ಸಮಾಜದಲ್ಲಿ ವಿಜ್ಞಾನ ಮತ್ತು ತತ್ವಜ್ಞಾನಗಳ ಅರಿವಿನಿಂದಾಗಿ, ಸನಾತನ ಧರ್ಮಾಚರಣೆಗಳು ಬದಲಾವಣೆಯ ಸಂಕ್ರಮಣ ಕಾಲದಲ್ಲಿವೆ. ಧಾರ್ಮಿಕ ಶ್ರದ್ಧೆಯಿಂದ ದೂರವಾಗಿ, ಧರ್ಮ ನಿರಪೇಕ್ಷತೆಯತ್ತ ಎಲ್ಲ ಧರ್ಮಗಳ ಜನರೂ ವೇಗವಾಗಿ ಸಾಗುತ್ತಿದ್ದಾರೆ. ಇಂತಹ ಪರ್ವಕಾಲದಲ್ಲಿಯೂ ಕೋಮುವಾದಿಗಳು, ದತ್ತ ಸಿದ್ಧಾಂತಗಳನ್ನು ಇಟ್ಟುಕೊಂಡು ತಮ್ಮ ಮೌಢ್ಯವನ್ನು ಪ್ರದರ್ಶಿಸುತ್ತಾ ಅಶಾಂತಿಗೆ, ಗಲಭೆಗೆ ಕಾರಣರಾಗುತ್ತಿದ್ದಾರೆ. ಹೊಸ ವಿಚಾರಗಳಾಗಲಿ, ಆಚರಣೆಗಳಾಗಲಿ ಹಿಡಿಸದ ಗೊಡ್ಡು ಸನಾತನವಾದಿಗಳ ಪರಿವರ್ತನೆ ಕಷ್ಟಸಾಧ್ಯ. ಜೊತೆ ಜೊತೆಗೆ ಮತ್ತೊಂದು ಧರ್ಮದ ಮೇಲಿನ ಆಕ್ರಮಣ ಪ್ರವೃತ್ತಿಯೂ ಹೆಚ್ಚುತ್ತಿದೆ. ಮತ್ತೊಂದು ಜನಾಂಗದ ಸಂಸ್ಕೃತಿಯನ್ನು, ನಾಗರಿಕತೆಯನ್ನು ನಾಶ ಮಾಡುವ ಹುನ್ನಾರವನ್ನು ಶ್ರೀಮಂತ ದೇಶಗಳು ನಡೆಸುತ್ತಲೇ ಇವೆ. ಅಮಾಯಕ ನಾಗರಿಕರ ಹತ್ಯೆ ನಡೆಯುತ್ತಿದೆ. ದೇಶದ ಅಭಿವೃದ್ಧಿಗೆ, ಶಿಕ್ಷಣಕ್ಕೆ, ಆರೋಗ್ಯಕ್ಕೆ ಬಳಸಬೇಕಾದ ಬಹುಪಾಲು ಹಣ ರಕ್ಷಣೆಯ ನೆಪದಲ್ಲಿ ಸೈನ್ಯಕ್ಕೆ, ಯುದ್ಧಸಾಮಗ್ರಿಗಳಿಗೆ ಬಳಕೆಯಾಗುತ್ತಿದೆ. ಧರ್ಮ ಶ್ರೇಷ್ಠವೋ, ವೈಚಾರಿಕತೆ ಅಥವಾ ವಿಜ್ಞಾನ ಶ್ರೇಷ್ಠವೋ ಎಂಬ ಪ್ರಶ್ನೆ, ಚರ್ಚೆ, ಅತಿರೇಕ ಸ್ಥಿತಿ ತಲುಪುವುದು ಆರೋಗ್ಯಕರ ಸಮಾಜದ ಲಕ್ಷಣವಲ್ಲ. ಈ ಭೂಮಿಯ ಮೇಲಿರುವ ಯಾವುದೇ ಧರ್ಮವೂ ಪರಿಪೂರ್ಣವಲ್ಲ ಎಂಬ ವಾಸ್ತವ ಸತ್ಯವನ್ನು ಪ್ರತಿಯೊಬ್ಬರೂ ಮೊದಲು ಅರಿಯಬೇಕಾಗಿದೆ. ಎಲ್ಲ ದೇಶ, ಕಾಲ, ಜನಾಂಗ, ಧರ್ಮಗಳಲ್ಲಿಯೂ ಪ್ರಪಂಚದಾದ್ಯಂತ ವರ್ಣಭೇದ, ವರ್ಗಭೇದಗಳಿರುವುದು ಈ ಮಾತಿಗೆ ಸಾಕ್ಷಿ. ಇದಕ್ಕೆ ಕಾರಣ ಪ್ರತಿಯೊಬ್ಬ ಮಾನವರಲ್ಲಿರುವ ಮೇಲರಿಮೆ. ಮಾನವಕುಲ ಒಂದು, ಎಲ್ಲರೂ ಸಮಾನರು ಎಂಬ ಮಾತುಗಳು ಆತ್ಮವಂಚನೆಯೇ ಸರಿ. ಯಾವುದೇ ಒಂದು ಧರ್ಮ ಇಂದಿನವರೆಗೆ ಒಬ್ಬ ಕೊಲೆಗಾರನನ್ನಾಗಲಿ, ಭ್ರಷ್ಟನನ್ನಾಗಲಿ, ಕಳ್ಳನನ್ನಾಗಲಿ, ಕ್ರೂರಿಯನ್ನಾಗಲಿ ಧರ್ಮದಿಂದ ಹೊರಹಾಕಿಲ್ಲವೆಂಬ ಸತ್ಯ ನಮ್ಮ ಮುಂದಿದೆ.

ತತ್ವ, ಸಿದ್ಧಾಂತಗಳ ಹೆಸರಿನಲ್ಲಿ ಸ್ವಾರ್ಥ, ಗುಂಪುಗಾರಿಕೆ, ಜನಾಂಗೀಯ ಘರ್ಷಣೆಗೆ ಕಾರಣವಾಗುತ್ತಿರುವುದು ವಿಪರ್ಯಾಸ. ಸೈದ್ಧಾಂತಿಕ ನೆಲೆಯಲ್ಲಿ ನಿಜವಾದ ಭಿನ್ನತೆ, ಅಮಾನವೀಯ ಆಚರಣೆಗಳಿದ್ದಾಗ, ಹೊಸ ಮಾನವೀಯ ಸಿದ್ಧಾಂತಗಳನ್ನು ರೂಪಿಸುವುದು ಸರಳ ಮಾರ್ಗ. ಬದಲಾಗಿ ಇತರ ಧರ್ಮಗಳನ್ನು ಹಳಿದು, ತನ್ನ ಧರ್ಮದಲ್ಲಿರುವ ಅಂಶಗಳನ್ನೇ ವೈಭವೀಕರಿಸುತ್ತಾ ಆಮಿಷಗಳನ್ನು ನೀಡಿ, ಧರ್ಮಾಂತರಕ್ಕೆ ಪ್ರಚೋದಿಸುವುದು ತಪ್ಪು. ತಮ್ಮ ತಮ್ಮ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುವುದು ಮುಖ್ಯವಾದರೂ, ಇತರ ಧರ್ಮೀಯರ ಮನಸ್ಸನ್ನು ಕ್ಷೋಭೆಗೀಡುಮಾಡುವುದು ಸಲ್ಲದು. ಇಂತಹವರು ನಿಜಕ್ಕೂ ತಮ್ಮ ಧರ್ಮಕ್ಕೇ ಪರೋಕ್ಷವಾಗಿ ಅವಮಾನಮಾಡುತ್ತಾರೆ ಎನ್ನಬಹುದು. ಹಣ ಕೀರ್ತಿ ಸ್ಥಾನಗಳು ಮುಖ್ಯವಾದಾಗ ಮನುಷ್ಯರಿಗಾಗಲಿ, ಮಾನವೀಯತೆಗಾಗಲಿ ಬೆಲೆ ಇರುವುದಿಲ್ಲ. ಮಾತು ಮೂಕವಾಗುತ್ತದೆ. ಸತ್ಯವನ್ನು ಬೆಂಬಲಿಸುವ, ನ್ಯಾಯ ಹೇಳುವ ಶಕ್ತಿಯೂ ಇಲ್ಲವಾಗುತ್ತದೆ. ಹಣ ಅಧಿಕಾರವನ್ನು ಪೂಜಿಸುವ ಸಮಾಜದಲ್ಲಿ ಮನುಷ್ಯ ಮೃಗಕ್ಕಿಂತ ಕ್ರೂರನಾಗುವ ಸಾಧ್ಯತೆಗಳಿರುತ್ತವೆ. ಅವುಗಳನ್ನು ಗಳಿಸಲು ಎಲ್ಲ ರೀತಿಯ ನೀಚ ಮಾರ್ಗಗಳನ್ನು ಅವಲಂಬಿಸುವ ಮೂಲಕ ಬದುಕಿನ ನಿಗೂಢ ಸತ್ಯಗಳು ಅನಾರವಣಗೊಳ್ಳುತ್ತವೆ. ಇದು ದುರಂತ.


**ಜಯದೇವಪ್ಪ ಜೈನಕೇರಿ**

ನಂ. ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ


### ವಿಸ್ಮಯ

ಯಾರು ತಂದಿಟ್ಟರು
ಹೂಗಳಲಿ ಮಕರಂದವನು ?
ಬೇರ ದಾರಿಯಲಿ ನುಸುಳಿದವರಾರು
ಗಿಡದ ಉಡಿಯ ತುಂಬಾ ಹಸಿರ ಬಳೆ


**ವಾಸುದೇವ ನಾಡಿಗ್**

ಜವಾಹರ್ ನವೋದಯ ವಿದ್ಯಾಲಯ ಏನಿಗದಲೆ, ಚಿಂತಾಮಣಿ, ಕೋಲಾರ

ನವಕರ್ನಾಟಕ
ಪ್ರಕಾಶನದ
**ವಿಶೇಷ ಕೊಡುಗೆ**
2007 ಡಿಸೆಂಬರ್‌ನಲ್ಲಿ
**ಲೋಕಾರ್ಪಣೆ**




## ನೊಬೆಲ್ ಪುರಸ್ಕೃತರು

ಸಮಗ್ರ ಮಾಹಿತಿ ಕೋಶ

ರಚನೆ : ಸಿ. ಆರ್. ಕೃಷ್ಣರಾವ್

ಡೆಮಿ ¼ ಆಕಾರದ 300 ಪುಟಗಳು

**ಪ್ರತಿಯೊಂದು ಮನೆ, ಶಾಲಾ-ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
ಪ್ರಕಟಣಪೂರ್ವ ರಿಯಾಯಿತಿ
ಬೆಲೆ ರೂ. 280 ಮಾತ್ರ

ಪ್ರಾರಂಭದಿಂದ ಇಲ್ಲಿಯವರೆಗೆ ವಿಶ್ವಶಾಂತಿ, ಸಾಹಿತ್ಯ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 760ಕ್ಕೂ ಹೆಚ್ಚಿನ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 300ರ ಡಿ.ಡಿ. ಅಥವಾ ಎಂ.ಒ. ಕಳಿಸಿ ನಿಮ್ಮ ಹೆಸರನ್ನು ಕೂಡಲೇ ನೋಂದಾಯಿಸಿಕೊಳ್ಳಿ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@vsnl.com web : www.navakarnatakabooks.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

